# ವಿಷಯಾನುಕ್ರಮಣಿಕೆ

ಹೆಸರು

— ಶ್ರೀರಾಮಸಹಾಯಂ —

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)



**ಮುನ್ನುಡಿ:—**

ವೀರಾಗ್ರೇಸರನಾದ **"ಸುಧನ್ವ"**ನ ಚರಿತ್ರವು ಜೈಮಿನಿಭಾರತೋಕ್ತವಾದುದು. ಜೈಮಿನಿ ಭಾರತವು ಶ್ರೀ ವೇದವ್ಯಾಸ ಶಿಷ್ಯರಾದ ಜೈಮಿನಿ ಮಹಾಮುನೀಶ್ವರರಿಂದ ಸಂಸ್ಕೃತದಲ್ಲಿ ರಚಿಸಲ್ಪಟ್ಟುದು ಅದರ ರಚನೆಗೆ ಕಾರಣವಾದ ಕಥೆಯೊಂದು ಈ ಕೆಳಗೆ ಹೇಳುವ ರೀತಿಯಲ್ಲಿ ಪ್ರಚಾರದಲ್ಲಿದೆ ಪಾಂಡವ ವಂಶಜನಾದ ಜನಮೇಜಯ ಮಹಾರಾಜನು ಸರ್ಪಯಾಗವನ್ನು ಮಾಡಿದುದರ ದೋಷಕ್ಕಾಗಿ ಆತನಿಗೆ ಶ್ವೇತಕುಷ್ಟ (ಬಿಳೀ ತೊನ್ನು) ರೋಗವು ಪ್ರಾಪ್ತವಾಯಿತು. ಅದನ್ನು ಪರಿಹರಿಸಲೋಸುಗ ತ್ರಿಕಾಲಜ್ಞರಾದ ಶ್ರೀ ವೇದವ್ಯಾಸರು ಪೂತಚರಿತ್ರರಾದ ಪಾಂಡವರ ದಿವ್ಯ ಕಥೆಯನ್ನು ಶ್ರವಣ ಮಾಡೆಂದು ಸೂಚಿಸಿ, ಆದ್ಯಂತ ಭಾರತ ಕಥೆಯನ್ನು ಹದಿನೆಂಟು ಪರ್ವಗಳಾಗಿ ರಚಿಸಿ ಅದನ್ನು ಆ ರಾಜವರೇಣ್ಯನಿಗೆ ಹೇಳಿ ಕೇಳಿಸುವಂತೆ ತಮ್ಮ ಶಿಷ್ಯನಾದ ವೈಶಂಪಾಯನ ಋಷಿಗೆ ಆಜ್ಞಾಪಿಸಿದರು ಜನಮೇಜಯನೂ ಶ್ರದ್ಧಾಭಕ್ತಿಯುತನಾಗಿ ಆ ಭಾರತ ಕಥಯನ್ನು ಸಂಪೂರ್ಣವಾಗಿ ಶ್ರವಣ ಮಾಡಿದನು. ಅದರಿಂದ ಆತನ ರೋಗವೆಲ್ಲವೂ ಪರಿಹಾರವಾಗಿ ತುಟಿಯಲ್ಲಿ ಮಾತ್ರ ಸ್ವಲ್ಪಭಾಗ ತೊನ್ನು ನಿಂತುಹೋಯಿತು. ಆಗ ರಾಜನು ಆಶ್ಚರ್ಯದಿಂದ ಹಾಗೆ ನಿಲ್ಲಲು ಕಾರಣವೇನೆಂದೂ ಅದರ ಪರಿಹಾರಕ್ಕೆ ಉಪಾಯವೇನೆಂದೂ ಆ ಮುನಿವರ್ಯರನ್ನೇ ಪ್ರಶ್ನಿಸಲು ಅವರು "ಅಯ್ಯಾ ರಾಜವರ್ಯಾ, ನೀನು ಭಾರತ ಕಥಾಶ್ರವಣ ಮಾಡುವಾಗ ಎಲ್ಲೋ ಸಂದೇಹಪಟ್ಟೆಯಾದುದರಿಂದ ಇಷ್ಟುಭಾಗ ತೊನ್ನು ನಿಂತುಹೋಗಿದೆ. ನೀನು ಮತ್ತೊಂದುಸಾರಿ ಜೈಮಿನಿ ಮುನೀಶ್ವರರಿಂದ ಅದೇ ಪುಣ್ಯಕಥಾಶ್ರವಣ ಮಾಡುವುದರಿಂದ ಅದೂ ತೊಲಗಿ ಹೋಗುವುದೆ"ಂದರು ರಾಯನು ಆ ಮಾತನ್ನು ಕೇಳಿ ಶ್ರದ್ಧಾಭಕ್ತಿಗಳಿಂದ ಶ್ರೀ ಜೈಮಿನಿ ಮುನಿವರ್ಯರನ್ನು ಕಂಡು ತನ್ನನ್ನು ಕೃತಾರ್ಥನನ್ನಾಗಿ ಮಾಡಬೇಕೆಂದು ಪ್ರಾರ್ಥಿಸಿಕೊಂಡನು ಅದನ್ನು ಕೇಳಿ ಜೈಮಿನಿ ಮುನೀಶ್ವರರು ಸಂತುಷ್ಟರಾಗಿ ತಾವೂ ವ್ಯಾಸ ಭಾರತದಂತೆಯೇ ಹದಿನೆಂಟುಪರ್ವ ಭಾರತಕಥೆಯನ್ನು ರಚಿಸಿ ಆತನಿಗೆ ಬೋಧಿಸಲು ಆತನ ತೊನ್ನು ರೋಗವು ಸಂಪೂರ್ಣ ನಿವಾರಣೆಯಾಯಿತು ತಮವಾಯ ತಮ್ಮ ಆ ಗ್ರಂಥವನ್ನು ತಮ್ಮ ಗುರುಗ

ಳಾದ ಶ್ರೀ ವೇದವ್ಯಾಸರಲ್ಲಿ ಅರ್ಪಿಸಲು ಅವರು ಅದನ್ನು ಅದ್ಯಂತವಾಗಿ ನೋಡಿ ಅದು ತಮ್ಮಿಂದ ರಚಿತವಾದ ಮಹಾಭಾರತ ಗ್ರಂಥಕ್ಕಿಂತಲೂ ಬಹು ಕಠಿನವಾಗಿದ್ದುದರಿಂದಲೂ ಸಗಳವೂ ಸುಮನೋಹರವೂ ಆದ ತಮ್ಮ ಗ್ರಂಥವೇ ಸಂಪೂರ್ಣ ಕಥಾವಿಸ್ತಾರದಿಂದ ಒಪ್ಪುತ್ತಿರುವಲ್ಲಿ ಪುನಃ ಮತ್ತೊಂದು ಅಂತಹ ಗ್ರಂಥವು ಅನುಪಯೋಗವೆಂದು ಅಭಿಪ್ರಾಯಪಟ್ಟು ಅದರಲ್ಲಿನ ಪಾಂಡವಾಶ್ವಮೇಧ ಕಥಾಪರ್ವವುಮಾತ್ರ ವಿಸ್ತಾರವಾಗಿಯೂ ಮನೋಜ್ಞವಾಗಿಯೂ ಇದ್ದುದರಿಂದ ಅದನ್ನೊಂದನ್ನುಮಾತ್ರ ಮಿಗಿಸಿಕೊಂಡು ಮಿಕ್ಕ ಗ್ರಂಥಭಾಗವನ್ನು ಸಮುದ್ರದಲ್ಲಿ ಹಾಕಿರೆಂದು ಜೈಮಿನಿ ಮುನಿಗಳಿಗೆ ಹೇಳಿದರು ಗುರುಭಕ್ತರಾದ ಜೈಮಿನಿ ಮುನಿಗಳು ಮನಸ್ಸಿನಲ್ಲಿ ಸ್ವಲ್ಪವೂ ಕಳಂಕಗೊಳ್ಳದೆ ತಮ್ಮ ಗುರುವರ್ಯರ ಆಜ್ಞೆಯಂತೆ ಅಶ್ವಮೇಧಪರ್ವವನು ಮಾತ್ರ ಉಳಿಸಿಕೊಂಡು ಮಿಕ್ಕುದನ್ನೆಲ್ಲಾ ಪರಿಹರಿಸಿದರು

ಆ ಜೈಮಿನಿಭಾರತವನ್ನು ಕ್ರಿ ಶ ೧೭ನೆಯ ಶತಮಾನದಲ್ಲಿ ಮೈಸೂರು ದೇಶದ ಬಾಣಾವಾರದ ತಾಲ್ಲೂಕಿಗೆ ಸೇರಿದ ದೇವನೂರೆಂಬ ಗ್ರಾಮದಲ್ಲಿ ವಾಸವಾಗಿದ್ದ ಅಣ್ಣಮಯ್ಯನ ಮಗನಾದ ಲಕ್ಷ್ಮೀಶನೆಂಬ ಕವಿಸಾರ್ವಭೌಮನು ಕರ್ನಾಟಕ ಭಾಷೆಯಲ್ಲಿ ವಾರ್ಧಿಕಷಟ್ಪದಿಯಲ್ಲಿ ರಚಿಸಿದನು ಕರ್ಣಾಟಕ ಜೈಮಿನಿ ಭಾರತಗ್ರಂದವು ಸರಸಾಲಂಕಾರಶೋಭಿತವಾಗಿಯೂ ಮಧುರತರಪದಪುಂಜರಂಜಿತವಾಗಿಯೂ ಶಬ್ದಗಾಂಭೀರ್ಯ, ಅರ್ಧಪುಷ್ಟಿ, ಮನೋಜ್ಞ ಸಂದರ್ಭ, ಕವಿತಾ ಚಮತ್ಕಾರಾದಿಗಳಿಂದ ಅದ್ವಿತೀಯವಾಗಿಯೂ ದ್ರಾಕ್ಷಾಪಾಕಶೋಭಿತವಾಗಿಯೂ ಅಪೂರ್ವ ಸದ್ಯುಕ್ತಿ ನಿಬಿಡವಾಗಿಯೂ ಕಂಗೊಳಿಸುತ್ತಾ ಪಂಡಿತ ಪಾಮರ ಜನಗಳಿಗೆ ಏಕರೀತಿಯಲ್ಲಿ ಆನಂದದಾಯಕವಾಗಿ ಪ್ರಸಿದ್ಧವಾಗಿದೆ ಇದನ್ನು ಓದದ ಕನ್ನಡಿಗನಿಲ್ಲವೆಂದರೆ-ಅಥವ ಇದನ್ನು ಓದಿ ಆನಂದಿಸದವನು ಕನ್ನಡಿಗನಲ್ಲವೆಂದರೆ ಅತಿಶಯೋಕ್ತಿಯಾಗದು. ಆ ಮಹಾಗ್ರಂಥದಲ್ಲಿನ ಅದ್ವಿತೀಯ ಕ್ಷಾತ್ರತೇಜಸ್ಸಂಪನ್ನವಾದ **"ಸುಧನ್ವಾರ್ಜುನ"** ರ ಯುದ್ಧ ಕಥಾ ವೃತ್ತಾಂತವನ್ನು ಮಾತ್ರ ತೆಗೆದುಕೊಂಡು ಪ್ರಕೃತ ಗ್ರಂಥದಲ್ಲಿ ವಚನರೂಪವಾಗಿ ರಚಿಸಲಾಗಿದೆ.

ಕರ್ಣಾಟಕ ಮಹಾಜನರೂ ಬಾಲಕ ಬಾಲಿಕೆಯರೂ ಕನ್ನಡ ಭಾಷೆಯಲ್ಲಿ ಪೂರ್ವ ಕವಿಗಳಿಂದ ರಚಿತವಾಗಿ ಸುಪ್ರಸಿದ್ಧವಾಗಿರುವ ಗ್ರಂಥಗಳನ್ನು ಓದಿ ಭಾಷಾಭಿಮಾನಿಗಳಾಗಿ ತಮ್ಮ ಮಾತೃಭಾಷೆಯನ್ನೂ ಇತರ ಭಾಷಾಪುತ್ರರಂತೆಯೇ ಅಭಿವೃದ್ಧಿಗೆ ತರಬೇಕೆಂದು ಕೃತಸಂಕಲ್ಪರಾಗಿರುವುದಕ್ಕೆ ಈ ಪ್ರಕೃತ ಗ್ರಂಥವು ಏನು ಅಲ್ಪರೀತಿಯಿಂದ ಸಹಾಯಕವಾದರೂ ಅದೇ ನಮ್ಮ ಶ್ರಮಕ್ಕೆ ತಕ್ಕ ಫಲವೆಂದೆಣಿಸುತ್ತೇವೆ

ಬಂಗಳೂರು ಸಿಟಿ
೩೧—೦೨—೧೯೨೫

ಇತಿ ಸುಜನ ವಿಧೇಯ,
**ಯಂ. ರಾಮರಾವ್.**

ಶ್ರೀರಾಮ ಸಹಾಯಂ

ಕ್ಷತ್ರಿಯ ವೀರಮಣಿ

# ಸುಧನ್ವ



## ಅಧ್ಯಾಯ ೧ "ಹಂಸಧ್ವಜ"

ಸರ್ವೇಶ್ವರನ ಪರಮಾನುಗ್ರಹಕ್ಕೊಳಪಟ್ಟು ನಮ್ಮ ಮಾತೃಭೂಮಿಯಾದ ಈ ಭಾರತವರ್ಷವು ಪೂರ್ವದಲ್ಲಿ ಸಕಲವಿಧಸೌಭಾಗ್ಯಗಳಿಗೂ ತೌರುಮನೆಯಾಗಿ ಶೋಭಿಸುತ್ತಿದ್ದಿತು. ಆಗ ಗೋರೂಪಿಯಾದ ಧರ್ಮದೇವತೆಯು ನಾಲ್ಕು ಪಾದಗಳನ್ನೂ ಭೂಮಿಯಮೇಲಿಟ್ಟುಕೊಂಡು ಸ್ವಸ್ಥಚಿತ್ತದಿಂದ ನಿಂತುಕೊಳ್ಳಲು ಅವಕಾಶವಿದ್ದಿತು. ಬ್ರಾಹ್ಮಣರು ವೇದಶಾಸ್ತ್ರಾದಿಗಳನ್ನೂ ಪುರಾಣ ಪುಣ್ಯಕಥೆಗಳನ್ನೂ ಅಭ್ಯಸಿಸಿ, ಅವುಗಳಲ್ಲಿ ವಿಧಿಸಿದಂತೆ ತಮ್ಮ ಆಚರಣೆಯನ್ನಿಟ್ಟುಕೊಂಡು, ಅವುಗಳನ್ನು ಪರರಿಗೆ ಸತ್ಯವಾದ-ಪ್ರಿಯವಾದ-ಹಿತವಾದ ವಚನಗಳಿಂದ ಬೋಧಿಸಿ, ಧರ್ಮಮಾರ್ಗದಿಂದ ದೊರೆತಷ್ಟರಲ್ಲಿ ತೃಪ್ತರಾಗಿ ಜನಾಂಗಕ್ಕೇ ಶಿರೋಭೂಷಣಪ್ರಾಯರಾಗಿ ಶೋಭಿಸುತ್ತಿದ್ದರು. ಕ್ಷತ್ರಿಯರು ಧೈರ್ಯಶೌರ್ಯೌದಾರ್ಯಾದಿ ಕಲ್ಯಾಣ ಗುಣಗಳಿಂದ ಯುಕ್ತರಾಗಿ, ದುಷ್ಟ ಶಿಕ್ಷಣ ಶಿಷ್ಟರಕ್ಷಣ ಕಾರ್ಯಗಳಲ್ಲಿ ನಿರತರಾಗಿ, ನಿಸ್ಪೃಹರಾಗಿ, ಧರ್ಮಮಾರ್ಗೈಕತತ್ಪರರಾಗಿ ಲೋಕಸೇವೆ ರಾಜ್ಯಪಾಲನಾ ಕಾರ್ಯಗಳನ್ನು ನಾನು-ನನ್ನದೆಂಬ ಮಮತೆ-ಮೋಹ-ದಂಭಗಳಿಗೊಳಗಾಗದೆ ಭಗವತ್ಸೇವಾ ಕಾರ್ಯವೆಂಬ ಭಾವನೆಯಿಂದ ಮಾಡುತ್ತಾ ಭೂಮಿಯನ್ನು ರಕ್ಷಣ ಮಾಡುತ್ತಿದ್ದರು. ವೈಶ್ಯರು ಮೋಸ ಕಾಪಟ್ಯಗಳನ್ನು ಅರಿಯದೆ ಧರ್ಮಮಾರ್ಗತತ್ಪರರಾಗಿ ವ್ಯಾಪಾರ ಉದ್ಯೋಗ ಪಶುಪಾಲನಾದಿಗಳಿಂದ ಧನಧಾನ್ಯಾದಿಗಳನ್ನು

ಸಂಗ್ರಹಿಸಿ ಯೋಗ್ಯಕಾಲದಲ್ಲಿ ಯುಕ್ತಪಾತ್ರಗಳಲ್ಲಿ ಅವುಗಳನ್ನು ದಾನವಾಡಿ-ಅಲ್ಲದೆ ಛತ್ರ, ಆರಾಮ, ಬಾವಿ, ಕೆರೆ, ಸಾಲುಮರ ತೋಪುಗಳನ್ನು ರಚಿಸಿ ಪ್ರಜಾ ಸಮುದಾಯಕ್ಕೆ ಉಪಕಾರಿಗಳಾಗಿ ತಮ್ಮ ಧನಕ್ಕೆ ಸಾರ್ಥಕತೆಯನ್ನುಂಟುಮಾಡುತ್ತಿದ್ದರು. ಇನ್ನು ಶೂದ್ರರು ಅಹಂಕಾರ ಮಮಕಾರಗಳಿಗೆ ವಶರಾಗದೆ ವ್ಯವಸಾಯ ಪಶುಪಾಲನಾದಿ ಕಾರ್ಯಗಳಲ್ಲಿ ಕುಶಲರಾಗಿ ಬ್ರಾಹ್ಮಣರಿಂದ ಶಿಕ್ಷಿತರಾಗಿ, ಕ್ಷತ್ರಿಯರಿಂದ ರಕ್ಷಿತರಾಗಿ ವೈಶ್ಯರಿಂದ ಪೋಷಿತರಾಗಿ ತಾವು ತಮ್ಮ ಸ್ಥಿತಿಯಲ್ಲಿ ಸದಾ ಸಂತುಷ್ಟರಾಗಿ ಲೋಕಜೀವಿತವನ್ನು ಸಾಗಿಸುತ್ತಿದ್ದರು. ಹೀಗೆ ಸಮಾಜವೆಂಬ ಪುರುಷನಿಗೆ ಮಸ್ತಿಷ್ಕ (ಮೆದುಳು) ಪ್ರಧಾನವಾದ ಬ್ರಹ್ಮವರ್ಗವು ಶಿರಸ್ಸಾಗಿಯೂ ಭೌತಿಕ ಬಲಪ್ರಧಾನವಾದ ಕ್ಷತ್ರಿಯ ಕುಲವು ಭುಜದಂಡಗಳಾಗಿಯೂ ಧನಧಾನ್ಯ ಸೌಭಾಗ್ಯಪ್ರಧಾನವಾದವೈಶ್ಯಕುಲವು ಊರು (ತೊಡೆ) ಗಳಾಗಿಯೂ ವೃತ್ತಿ ವ್ಯವಸಾಯ ಕೈಗಾರಿಕೆಗಳಿಗೆ ಪ್ರಧಾನವಾದ ಶೂದ್ರಕುಲವು ಪಾದಗಳಾಗಿಯೂ ಕಳೆಗೊಂಡಿರಲು ದೇಶವು ಸುಭಿಕ್ಷವಾಗಿದ್ದಿತು ಕಾಲ ಕಾಲಕ್ಕೆ ಮಳೆ ಬೆಳೆಗಳಾಗುತ್ತಿದ್ದುವು ಕ್ಷಾಮಡಾಮರಗಳ ಕಳ್ಳಕಾಕರುಗಳ ಭಯವು ತಪ್ಪಿ, ದೇಶದಲ್ಲಿ ಸುಖಶಾಂತಿಗಳು ನೆಲೆಸಿ ಸಕಲರೂ ಭೂತಲಸ್ವರ್ಗಸುಖವನ್ನು ಅನುಭವಿಸುತ್ತಿದ್ದರು

ಆದರೆ ಈಗ ಕಾಲವು ಬದಲಾಯಿತು ಒಂದು ದೇಹದ ತಲೆಯೂ ಕೈಗಳೂ ತೊಡೆ ಪಾದಗಳೂ ದೇಹಧರ್ಮಕ್ಕನುಸಾರವಾಗಿ ಒಂದಕ್ಕೊಂದು ಸಹಾಯಕವಾಗಿರಬೇಕೆಂಬ ಮರ್ಮವನ್ನು ಮರೆತು, ಒಂದೊಂದೂ ತನತನಗೆ ಇಷ್ಟಬಂದಂತೆ ನಡೆಯತೊಡಗಿತು. ದೇಹವೆಲ್ಲವೂ ಒಂದೇ ಎಂಬ ದೃಷ್ಟಿಯು ಮರೆಯಾಗಿ ದೇಹದ ಒಂದೊಂದು ಭಾಗವೂ ತಾನು ತಾನು ಬೇರೆ ಬೇರೆಯಾಗಿ ಬೆಳೆಯಬೇಕೆಂದು ಅಪೇಕ್ಷಿಸಿದಂತಾಯಿತು. ಅದರಿಂದ ಸಮಾಜ ಪುರುಷನ ದೇಹವು ಈಗ ಅತ್ಯಂತ ವಿಕಾರರೀತಿಯಿಂದ ಕಾಣತೊಡಗಿದೆ ಆ ದೇಹಕ್ಕೆ ತಲೆಯು ಪ್ರಮಾಣಕ್ಕೆ ತಕ್ಕ ಭುಜಗಳಿಲ್ಲ ಭುಜಗಳ ಅರ್ಥಾತ್ ದೇಹದ ಪ್ರಮಾಣಕ್ಕೆ ತಕ್ಕ ತೊಡೆಗಳಿಲ್ಲ. ಅವುಗಳ ಪ್ರಮಾಣಕ್ಕೆ ತಕ್ಕ ಪಾದಗಳಿಲ್ಲ ಹೀಗಾಗಿ ಭಾರತೀಯ ಸಮಾಜಪುರುಷನ ಸ್ವರೂಪವು ಅತ್ಯಂತ ವಿಕಾರವಾಗಿದೆ. ಪುರುಷಸೂಕ್ತಾದಿಗಳಲ್ಲಿ ಹೇಳಲಟ್ಟ ಪುರುಷನು ಸಮಾಜಪುರುಷನೆಂದು ಭಾವಿಸಿದರೆ ಅಂತಹ ಪುರುಷನಿಗೆ ತಲೆಯು ಮಾತ್ರ ಶ್ರೇಷ್ಠವಾದ ಅಂಗವೆಂದು

ಭುಜಗಳು ನಿರುಪಯೋಗವೆನ್ನಬಹುದೋ? ತೊಡಗಳು ಆವಶ್ಯಕವಿಲ್ಲವೆನ್ನಬಹುದೋ? ಪಾದಗಳು ಅನುಪಯೋಗವೆನ್ನಬಹುದೋ? ಅಥವಾ ಒಂದರೊಡನೊಂದು ಸಹಕರಿಸಿದೆ ಬೇರೆ ಬೇರೆಯಾಗಿಯೇ ಬೆಳೆಯಲು ಸಾಧ್ಯವೆನ್ನಬಹುದೋ? ಎಂತೂ ಈಗ ಕಾಲಕರ್ಮಸಂಯೋಗದಿಂದ ಎಲ್ಲವೂ ಕೆಟ್ಟು ಭಾರತೀಯ ಸಮಾಜಪುರುಷನ ದೇಹಸ್ಥಿತಿಯು ಅತ್ಯಂತ ಶೋಚನೀಯವಾಗಿದೆ.

ಅಲ್ಲದೆ ಲೋಕಗುರುವಾದ ಶ್ರೀ ಕೃಷ್ಣಪರಮಾತ್ಮನು ಗ್ರಂಥರಾಜವಾದ ಭಗವದ್ಗೀತೆಯಲ್ಲಿ ತಾನು ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಚತುರ್ವರ್ಣಗಳನ್ನೂ ಅವರವರ ಗುಣ ಮತ್ತು ಕರ್ಮಗಳಿಗೆ ತಕ್ಕಂತೆ ಪಿಂಗಡಿಸಿದ್ದೇನೆಂದು ಅಪ್ಪಣೆ ಕೊಡಿಸಿದ್ದಾನೆ ಈ ಸಿದ್ಧಾಂತವನ್ನು ಕುರಿತು ನಮ್ಮ ಸ್ಥಿತಿಯನ್ನು ವಿಚಾರಮಾಡೋಣ! ಒಂದು ಕುಟುಂಬದಲ್ಲಿ ನಾಲ್ವರಿದ್ದು ಅವರಲ್ಲಿ ಒಬ್ಬನಲ್ಲಿ ಸೂಕ್ಷ್ಮಬುದ್ಧಿಯೂ ಮತ್ತೊಬ್ಬನಲ್ಲಿ ಭುಜಬಲವೂ ಬೇರೊಬ್ಬನಲ್ಲಿ ಧನಧಾನ್ಯಸಂಗ್ರಹಣವೂ ನಾಲ್ಕನೆಯವನಲ್ಲಿ ಕಾಯಕಷ್ಟಪಡುವ ಸಾಮರ್ಥ್ಯವೂ ಇದ್ದ ಸಂದರ್ಭದಲ್ಲಿ ಅವರಲ್ಲೊಬ್ಬೊಬ್ಬನೂ ತನ್ನ ತನ್ನ ಬುದ್ಧಿಶಕ್ತಿ, ಭುಜಬಲ, ಧನಧಾನ್ಯಶಕ್ತಿ, ಕಾಯಕಷ್ಟಗಳನ್ನು ಉಪಯೋಗಿಸಿದರಲ್ಲವೆ, ನಾಲ್ವರ ಮೇಲ್ಮೆಯು ಮಾತ್ರವಲ್ಲದೆ ಕುಟುಂಬಯಾತ್ರೆಯೂ ಸುಗಮವಾಗುವುದು ಹಾಗಲ್ಲದೆ ಧನವಂತನು ಬಲವಂತನ ಕೆಲಸವನ್ನೂ ಬುದ್ಧಿವಂತನು ಕಾಯಕಷ್ಟ ಮಾಡುವವನ ಉದ್ಯೋಗವನ್ನೂ ಮಾಡುತ್ತಾ ಕಾಯಕಷ್ಟ ಮಾಡುವವನು ಕುಟುಂಬಕ್ಕೆ ಯೋಚನೆಯನ್ನು ಹೇಳುವವನೂ ಆದರೆ ಆ ಸಂಸಾರಯಾತ್ರೆಯು ಹೇಗೆ ಸಾಗುವುದು? ಹೀಗಾಯಿತು ನಮ್ಮ ಬಾಳು. ಬುದ್ಧಿವಂತನೂ ಬಲವಂತನೂ ಧನವಂತನೂ ಪರಿಶ್ರಮಿಯೂ ಆದ ಒಬ್ಬ ಮನುಷ್ಯನನ್ನು ಜಯಿಸಲು ಬಂದ ಶತ್ರುವು, ಅವನ ತಲೆಗೂ ಭುಜಗಳಿಗೂ ತೊಡೆಪಾದಗಳಿಗೂ ಸಂಬಂಧವನ್ನು ತಪ್ಪಿಸಿ ನಿಮ್ಮಲ್ಲೊಂದೊಂದೂ ಪ್ರತ್ಯೇಕ ಅಂಗಗಳಾಗಿರುವುದರಿಂದ ಒಂದುಮತ್ತೊಂದಕ್ಕೆ ಏಕೆ ಅಧೀನವಾಗಿರುವಿರೆಂದು ಬೋಧಿಸಿ, ಅರ್ಥಾತ್ ಒಂದೊಂದನ್ನೂ ತುಂಡುತುಂಡಾಗಿ ಭೇದಿಸಿ ತನ್ಮೂಲಕ ಆ ದೇಹವನ್ನು ಸ್ವಾಧೀನಪಡಿಸಿಕೊಂಡಂತಾಯಿತು ಇಂತು ಭರತವರ್ಷದ ಸಮಾಜಪುರುಷನು ಛಿದ್ರಛಿದ್ರವಾಗಿ ಕತ್ತರಿಸಲ್ಪಟ್ಟು ಪರಾಧೀನನಾಗಿ ನರಳು

ತ್ತಿರುವನು.

ಈ ಸ್ಥಿತಿಯು ದೇಶಭಕ್ತಿಯುತನಾದ ಯಾವನಿಗಾದರೂ ಪರಿತಾಪವನ್ನು ಉಂಟುಮಾಡದಿರದು! ಅವರಲ್ಲಿ ಕೇವರು ನಾವು ಸದ್ಯಃಕಾಲಕ್ಕೆ ಅವಶ್ಯಕವಾದ ಕಾರ್ಯಗಳೇನನ್ನೂ ಮಾಡದೆ ಕೇವಲ ಪೂರ್ವಿಕರ-ಪೂರ್ವಕಾಲದ ಉನ್ನತಿಯನ್ನೇ ಕುರಿತು ಹೊಗಳಿಕೊಳ್ಳುವುದರಿಂದ ಪ್ರಯೋಜನವೇನೆನ್ನುವರು! ಅದೂ ಸುಯುಕ್ತಿಕವಾದ ಮಾತೇ! ಆದರೆ ನಮ್ಮ ಸ್ಥಿತಿಯು ಈಗ ಕತ್ತಲುಮನೆಯಲ್ಲಿ ಕೈಕಾಲುಗಳು ಕಟ್ಟಿಹಾಕಲ್ಪಟ್ಟು ಬಿದ್ದಿರುವವನಂತಾಗಿದೆ. ಹೋಗುವ ಮಾರ್ಗ ತಿಳಿಯದು. ಎದ್ದು ನಡೆದುಹೋಗಲು ಕಾಲಿಲ್ಲ. ಇಂತಹ ಸಂದರ್ಭದಲ್ಲಿ ಮೊದಲು ದೀಪವನ್ನು ಮಾತ್ರ ತಂದರೆ ಮಾರ್ಗವಿಂಥದೆಂದೂ ಇಂತಹ ಸ್ಥಳದಲ್ಲಿ ಬಾಗಿಲಿದೆಯೆಂದೂ ಗೋಚರವಾಗುವುದು. ತರುವಾಯ ಅವನು ತೆವಳಿಕೊಂಡಾದರೂ ಮುಂದಕ್ಕೆ ಜರುಗಬಹುದು ಪೂರ್ವಿಕರ ಮಹಿಮಾವರ್ಣನೆ, ದೇಶದ ಪೂರ್ವ ವೈಭವದ-ಮಹತ್ವದ ಕಥನ ಮುಂತಾದುವು ಅಂತಹ ದೀಪವನ್ನು ತಂದಂತೆ ಇರುವುದೆಂದು ನಮ್ಮ ಭಾವನೆ! ಅದು ಸುಳ್ಳೆನ್ನಬಹುದೇ?

ಈ ಬೆಳಕು ಆ ಮನುಷ್ಯನ ಕಣ್ಣುಗಳಿಗೆ ಪ್ರಕಾಶವನ್ನುಂಟುಮಾಡುವುದು. ಬುದ್ಧಿಗೆ ಮಾರ್ಗವಿಂಥದೆಂಬ ಯೋಚನೆಯನ್ನು ಹುಟ್ಟಿಸುವುದು. ಆ ಯೋಚನೆಯು ಅವನು ತನ್ನ ಸ್ಥಿತಿಯನ್ನು ಸರಿಪಡಿಸಿಕೊಳ್ಳಬೇಕೆಂದು ನಿರ್ಧರಿಸುವಂತೆ ಮಾಡುವುದು ಆದರಿಂದ ಭುಜಗಳು ಬಲವಂತಗಳಾಗುವುವು ಮತ್ತು ಅವು ಕಾಲುಗಳಿಗಿರುವ ಕಟ್ಟುಗಳನ್ನು ಬಿಚ್ಚುವುವು ಆಗ ತೊಡೆಗಳ ಸಹಾಯದಿಂದ ದೇಹವು ಎದ್ದು ನಿಲ್ಲುವುದು ಮುಂದೆ ಕೇಳಬೇಕಾದುದೇನು! ಬೆಳಕಿನಲ್ಲಿ ನಡೆದು ಆ ಕಾರಾಗೃಹದ ಬಾಗಿಲನ್ನು ದಾಟಿ ಹೊರಕ್ಕೆ ಬರಬಹುದು ಶುದ್ಧ ವಾತಾವರಣವನ್ನು ಸೇವಿಸಬಹುದು ಬಾಲಸೂರ್ಯನ ಕಿರಣಗಳಲ್ಲಿ ಆನಂದಿಸಬಹುದು ಪಕ್ಷಿಗಳ ಮಧುರ ಗಾನವನ್ನು ಆಲಿಸಬಹುದು ದಿವ್ಯ ಪುಷ್ಪಗಳನ್ನು ಆಘ್ರಾಣಿಸಬಹುದು ಮಧುರವಾದ ರುಚಿಕರವಾದ ಅಮೃತ ಫಲಗಳನ್ನು ಭುಜಿಸಬಹುದು. ಬೇಕಾದಂತೆ ವಿಶಾಲವಾದ ಭೂಮಾತೆಯ ವಿಶಾಲ ವಕ್ಷಸ್ಥಲದಲ್ಲಿ ಆಡಿ ನಲಿಯಬಹುದು. ಅಹಾ! ಆ ಸ್ಥಿತಿಗೆ ಸಮಾನವಾದುದೆಂದರೆ ಆ ಸ್ಥಿತಿಯೇ! ಅದನ್ನು ಹೊಂದಿ ಅನುಭವಿ

ಸಬೇಕಲ್ಲದೆ ಶುಷ್ಕ ಮಾತುಗಳಿಂದ ವರ್ಣಿಸಿ ಹೇಳುವುದೆಂತು! ಹೀಗೆ ಅಂತಹ ಸ್ವಾತಂತ್ರ್ಯಸೌಭಾಗ್ಯವನ್ನು ಹೊಂದಲು ಮೊದಲು ಮಹಾಪುರುಷರ ಜೀವಿತಾದರ್ಶಗಳೆಂಬ ದಿವ್ಯ ಜ್ಯೋತಿಯ ಆವಶ್ಯಕವುಂಟು ಅದನ್ನು ಕರ್ಣಾಟಕ ಜನಾಂಗಕ್ಕೆ ಒದಗಿಸಿ ಯೋಗ್ಯತಾನುಸಾರ ಭಾಷಾ ಸೇವೆಗಾಗಿ ಹೆಣಗುತ್ತಿರುವ ಗ್ರಂಥಮಾಲೆಯ ಉದ್ಯಮಕ್ಕೆ ಕರ್ಣಾಟಕ ಮಹಾಜನರು ಸ್ವಹಸ್ತ ಪರಹಸ್ತಗಳಿಂದ ಸಹಕರಿಸಿ ಅದರ ಅಭಿವೃದ್ಧಿಯು ಕರ್ಣಾಟಕ ಜನಾಂಗಕ್ಕೆ ಯೋಗ್ಯರೀತಿಯಿಂದ ಪ್ರಯೋಜಕನಾಗುವಂತೆ ಅನುಕೂಲಪಡಿಸಬೇಕೆಂದು ಕೋರುತ್ತೇವೆ

---

ದ್ವಾಪರಾಂತ್ಯದಲ್ಲಿ ಭಾರತವರ್ಷದಲ್ಲಿ 'ಛಪ್ಪನ್' ಎಂದರೆ ಐವತ್ತಾರು ಪ್ರಸಿದ್ಧ ರಾಜ್ಯಗಳು ಕ್ಷತ್ರಿಯ ವೀರಾಗ್ರಣಿಗಳಿಂದ ಆಳಲ್ಪಡುತ್ತಾ ಮಹೋನ್ನತ ಸ್ಥಿತಿಯಲ್ಲಿದ್ದುವು ಒಂದೊಂದು ರಾಜ್ಯವೂ ಜನಸಮೃದ್ಧವಾಗಿ-ವ್ಯಾಪಾರಿಗಳಿಂದ ಕಿಕ್ಕಿರಿದು, ಕೈಕೆಲಸದವರಿಂದ ನಿಬಿಡವಾಗಿ-ಭವ್ಯವಾದ ಅನೇಕ ಪಟ್ಟಣಗಳಿಂದ ನೇತ್ರಾನಂದಕರವಾಗಿರುವುವು ರಾಜ್ಯದಲ್ಲಿ ಎಲ್ಲಿ ನೋಡಿದರೂ ಬಲವಾದ ಕೋಟೆ ಕೊತ್ತಲುಗಳೂ ದುರ್ಗಗಳೂ ಕಟ್ಟಲ್ಪಟ್ಟು ರಾಜ್ಯವು ಶತ್ರುರಾಜರಿಗೆ ಭೀಕರವಾಗಿರುವಂತೆ ತೋರುತ್ತಿದ್ದಿತು ಅಂತಹ ನಗರಗಳಲ್ಲಿ ಚಂಪಕಾಪುರವೆಂಬ ನಗರರಾಜವು ಸರ್ವಶ್ರೇಷ್ಠವೆನಿಸಿ ಶೋಭಿಸುತ್ತಿದ್ದಿತು ಅದನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಹಂಸಧ್ವಜನೆಂಬ ನರಾಗ್ರಣಿಯು ಸುತ್ತುಮುತ್ತಿನ ಪ್ರಾಂತಗಳನ್ನು ಪಾಲಿಸುತ್ತಿದ್ದನು

ಅತನು ಧೀರನು, ಧರ್ಮಾತ್ಮನು, ಏಕಪತ್ನೀವ್ರತಸ್ಥನು, ಜಿತೇಂದ್ರಿಯನು. ಆತನು ತನ್ನ ರಾಜ್ಯದಲ್ಲಿ ಯಾರಾದರೂ ತನ್ನಂತೆಯೇ ಏಕಪತ್ನೀವ್ರತಸ್ಥರಾಗಿರದೆ ವಿಷಯಲಂಪಟರಾಗಿದ್ದರೆ, ಯಾರಾದರೂ ದಾನವಾರಿಯಾದ ಶ್ರೀಕೃಷ್ಣಪರಮಾತ್ಮನ ಪೂಜಾನಿರತರಾಗಿರದಿದ್ದರೆ, ಯಾರಾದರೂ ಯೋಗ್ಯತಾನುಸಾರ ದಾನಧರ್ಮಾದಿಗಳಲ್ಲಿ ಆಸಕ್ತರಾಗಿರದಿದ್ದರೆ, ತಮ್ಮ ಕುಲಧರ್ಮ ಜಾತಿಧರ್ಮ ನೀತಿಧರ್ಮಗಳನ್ನು ಮೀರಿನಡೆಯುತ್ತಿದ್ದರೆ ಅಂಥವರನ್ನು ದಯಾದಾಕ್ಷಿಣ್ಯವರ್ಜಿತವಾಗಿ ಬಹು ಕಠಿಣವಾಗಿ ದಂಡಿಸುವನು ಧರ್ಮ

ಮಾರ್ಗೈಕತತ್ಪರನಾದ ರಾಜನ ಈ ಆಚರಣೆಗಳು ಸಕಲರಿಗೂ ಮೇಲ್ಪಂಕ್ತಿಯಾಗಿರಲು ಆ ರಾಜ್ಯದ ಪ್ರಜೆಗಳು, ಶೂರರೂ ವೀರರೂ ಧರ್ಮಾತ್ಮರೂ ಕಾಮಕ್ರೋಧವರ್ಜಿತರೂ, ಸದ್ಗುಣವಿಭೂಷಿತರೂ ಅಲ್ಲದೆ ನಿರೋಗಿಗಳೂ ನಿರ್ಮಲ ಮನಸ್ಕರೂ ವಿವೇಕಿಗಳೂ ದೈವಭಕ್ತರೂ ಪರೋಪಕಾರನಿರತರೂ ಪಾಪಭೀತರೂ ಆಗಿ ತಾವೂ ಬೇರೆಯವರಿಗೆ ಮೇಲ್ಪಂಕ್ತಿಗಳಾಗಿ ಇರುತ್ತಿದ್ದರು. ಆತನ ಧಾರ್ಮಿಕ ರಾಜ್ಯಭಾರದಿಂದ ದೇಶದಲ್ಲಿ ಕಾಲಕಾಲಕ್ಕೆ ಮಳೆಗಳು ಸುರಿಯುವುವು. ಸಮೃದ್ಧವಾಗಿ ಬೆಳೆಗಳಾಗುವುವು ದನ ಕರುಗಳಿಗೆ ಮೇವು ನೀರುಗಳು ನಿರಾತಂಕವಾಗಿ ದೊರೆಯುತ್ತಿರಲು ಆರಾಜ್ಯದಲ್ಲಿ ಧೃಷ್ಟಪುಷ್ಟಗಳಾದ ಲಕ್ಷಾಂತರ ಗೋವುಗಳು ನೇತ್ರಾನಂದಕರವಾಗಿ ಶೋಭಿಸುತ್ತಿದ್ದವು. ಪ್ರಜೆಗಳು ಉಂಡು ಉಟ್ಟು ತೊಟ್ಟು ಇಟ್ಟು ಕೊಟ್ಟು ದಣಿವಂತೆ ದವಸ ಧಾನ್ಯಗಳು ಬಂದುಬೀಳುತ್ತಿರಲು, ಸಕಲ ಬಗೆಗಳಿಂದಲೂ ಅವರು ಸಂತುಷ್ಟರಾಗಿ ನರಾಗ್ರಣಿಯಾದ ಹಂಸಧ್ವಜರಾಜೇಂದ್ರನನ್ನು ಓಲೈಸಿಕೊಂಡು ಸುಖವಾಗಿರುತ್ತಿದ್ದರು.



## ಅಧ್ಯಾಯ ೨ "ಧರ್ಮಜನ ಯಜ್ಞಾಶ್ವ"

ಪಾಂಡವಾಗ್ರಣಿ ಯುಧಿಷ್ಠಿರನು ಜ್ಞಾತಿಗಳಾದ ಕೌರವರನ್ನೂ ಭೀಷ್ಮದ್ರೋಣಾದಿ ಪೂಜ್ಯರನ್ನೂ ಸಂಹರಿಸಿ ಹಸ್ತಿನಾವತಿಯಲ್ಲಿ ರಾಜ್ಯಾಭಿಷಿಕ್ತನಾದನಷ್ಟೆ! ಕ್ಷಾತ್ರಧರ್ಮದೃಷ್ಟಿಯಿಂದ ಇದು ದೋಷಾವಹವಾದ ಕಾರ್ಯವಲ್ಲವಾದರೂ, ಧರ್ಮಾತ್ಮನಾದ ಯುಧಿಷ್ಠಿರನ ಮನಸ್ಸನ್ನು ಈ ಜ್ಞಾತಿವಧಾ ಕಾರ್ಯವು ಅತ್ಯಂತ ನೋಯಿಸಿತು. ಬಹುಪರಿಯಿಂದ ಹಲುಬಿಸಿತು ಆತನ ಅಂತಃಕರಣವನ್ನು ಶೋಷಿಸಿತು. ಸಂಕಟ ಪಡಿಸಿತು. ಆಗ ಶ್ರೀ ಬಾದರಾಯಣ ಮಹರ್ಷಿಗಳು ಪ್ರತ್ಯಕ್ಷರಾಗಿ. ಪೂರ್ವಿಕ ರಾಜವರೇಣ್ಯರು ಮಾಡಿದಂತೆ ಅಶ್ವಮೇಧ ಮಹಾಯಾಗವನ್ನು ಆಚರಿಸಿ, ಜ್ಞಾತಿವಧಾ ಬ್ರಹ್ಮವಧಾ ಕುಲವಧಾ ದೋಷಗಳಿಂದ ಮುಕ್ತನಾಗಬಹುದೆಂದು ಬೋಧಿಸಿದರು ಯುಧಿಷ್ಠಿರನ ದೇಹದಲ್ಲಿ ನವಜೀವನ ಸಂಚಾರವಾದಂತಾಯಿತು. ಭೀಮಸೇನ

ವೃಷಕೇತು ಮೇಘನಾದರು ಯೌವನಾಶ್ವ ರಾಜನಂ ಗೆಲ್ದು ಕುದುರೆಯನ್ನು ತಂದಿತ್ತರು. ಅರ್ಜುನ ನಕುಲ ಸಹದೇವರು ಸಕಲ ದೇಶದ ರಾಜಾಧಿರಾಜರನ್ನೂ ಜಯಿಸಿ ಅಸಂಖ್ಯ ಧನವನ್ನು ತಂದರು ಅಲ್ಲದೆ ವೇದವ್ಯಾಸರ ಆದೇಶದಂತೆ ಹಿಮಾಲಯ ಪ್ರಾಂತದಲ್ಲಿದ್ದ ಅಪಾರದ್ರವ್ಯವೂ ತರಲ್ಪಟ್ಟಿತು. ಅಪರಮಿತ ಯಜ್ಞ ಸಾಂಭಾರಗಳು ಸಿದ್ಧಗೊಳಿಸಲ್ಪಟ್ಟುವು ಲೀಲಾಮಾನುಷವಿಗ್ರಹನಾದ ಶ್ರೀಕೃಷ್ಣಪರಮಾತ್ಮನು ಸೂತ್ರಧಾರಕನಾಗಿರಲು ಯುಧಿಷ್ಠಿರನು, ಅಪೂರ್ವ ತೇಜಸ್ವಿಯಾದ ಆ ಯಜ್ಞಾಶ್ವವನ್ನು ವಿಧ್ಯುಕ್ತ ರೀತಿಯಿಂದ ಪೂಜಿಸಿ ವಸಂತ ಋತುವಿನ ಚೈತ್ರ ಶುದ್ಧ ಪೌರ್ಣಮಿಯ ಶುಭದಿನದಲ್ಲಿ ಭೂಪ್ರದಕ್ಷಿಣೆಗೆಂದು ಬಿಟ್ಟನು ಯಜ್ಞಾಶ್ವದ ರಕ್ಷಣೆಗಾಗಿ ಅಸಂಖ್ಯ ವೀರಪರವಾರದಿಂದ ಕೂಡಿದ ಪಾಂಡವ ಸೇನೆಯು, ಜಗದೇಕ ವೀರನಾದ ಧನಂಜಯನ ಕಾಪಿದಿಂದ ನಡೆಯಿತು.

ಪ್ರಾಚೀನ ಭಾರತವು ಈಗಿನಂತೆ ಪರಾಧೀನವಾಗಿರಲಿಲ್ಲ. ದೇಶದ ಸಕಲ ಭಾಗಗಳೂ ವೀರಾಗ್ರಣಿಗಳಾದ ಕ್ಷತ್ರಿಯ ರಾಜರಿಂದ ಪಾಲಿಸಲ್ಪಡುತ್ತಿದ್ದವು. ಒಂದೊಂದು ರಾಜ್ಯದ ಯುವಕರೂ ಶೌರ್ಯ ಧೈರ್ಯೌದಾರ್ಯ ಗುಣವಿಶಿಷ್ಟರಾಗಿರುತ್ತಿದ್ದರು. ಪ್ರತಿಯೊಬ್ಬನೂ ಆತ್ಮರಕ್ಷಣೆಗಾಗಿ ಮತ್ತೊಬ್ಬನ ಮುಖವನ್ನು ನೋಡುತ್ತಾ ಬೇರೊಬ್ಬನ ಸಹಾಯವನ್ನು ಅಪೇಕ್ಷಿಸುತ್ತಾ ನಿಸ್ತೇಜ ದೃಷ್ಟಿಯಿಂದ ನಿರಾಶನಾಗಿ ಕುಳಿತಿರುವಂತಹ ಹೇಡಿತನವು ಆಗ ಯಾವನಲ್ಲೂ ತೋರಿ ಬರುತ್ತಿರಲಿಲ್ಲ. ಪ್ರತಿಯೊಬ್ಬನೂ ಅಂಗಸಾಧನೆಯಿಂದಲೂ ಬ್ರಹ್ಮಚರ್ಯರಕ್ಷಣೆಯಿಂದಲೂ ದೃಢಾಂಗನಾಗಿರುತ್ತಿದ್ದನು. ಆದುದರಿಂದಲೇ ಅವರು ತಮ್ಮ ದೇಶದಲ್ಲಿ ಉತ್ಪನ್ನವಾದ ಗೋಧನವನ್ನೂ ಪುಷ್ಟಿಕರವಾದ ಧಾನ್ಯಾದಿಗಳನ್ನೂ ತಮ್ಮ ದೇಶೀಯರ ಉಪಯೋಗಕ್ಕಾಗಿ ಕಾಪಾಡಿಕೊಳ್ಳಲು ಶಕ್ತರಾಗಿದ್ದರು. ಬಲಕಾರಿಗಳಾದ ಆಹಾರ ಪದಾರ್ಥಗಳನ್ನು ಯಥೇಷ್ಟವಾಗಿ ಅನುಭವಿಸಿ ದೇಶೀಯರು ಪುಷ್ಟರಾಗಿ ಬಲಗೊಂಡಿದ್ದರು. ಆದರಿಂದ ತೇಜಸ್ಸಂಪನ್ನರಾಗಿದ್ದರು. ಧೈರ್ಯಶಾಲಿಗಳಾಗಿದ್ದರು ಪರರಿಗೂ ಅವರನ್ನು ಕಂಡರೆ, ಭಯವೂ ಭಕ್ತಿಯೂ ಉಂಟಾಗುತ್ತಿದ್ದಿತು. ಪ್ರಕೃತ ಪರಕೀಯರಿಂದ ನಮಗೂ ನಮ್ಮ ದೇಶಕ್ಕೂ ಗೌರವವನ್ನು ನಾವು ಅಪೇಕ್ಷಿಸುವೆದಾದರೆ, ಮೊದಲು, ಆ ಗೌರವವನ್ನು ಕೊಡಿರೆಂ

ದು ಬೇರೊಬ್ಬರನ್ನು ಯಾಚಿಸುವುದನ್ನು ಬಿಟ್ಟು ನಮ್ಮ ದೇಹದ ನರಗಳನ್ನೂ ಸ್ನಾಯುಗಳನ್ನೂ ಮಾಂಸಖಂಡಗಳನ್ನೂ ಬಲಗೊಳಿಸಿಕೊಳ್ಳಬೇಕು. ಧೃಷ್ಟಪುಷ್ಟರಾಗಬೇಕು, ಅಷ್ಟೆ! ಅಷ್ಟಾದರೆ ಸಾಕು ಆಗ ಪರಕೀಯರು ಮಾಡುವ ಅವಮಾನವನು ಸಹಿಸದೆ ಎದುರಿಸಲು ಶಕ್ತರಾಗುವೆವು. ಆಗ ಅವರೂ ನಮ್ಮ ವಿಷಯದಲ್ಲಿ ಭಯಭಕ್ತಿಗಳನ್ನು ಉಂಟಾಗಿ ನಡೆಯುವರು. ತನ್ಮೂಲಕ ನಮಗೂ ನಮ್ಮ ದೇಶಕ್ಕೂ ಗೌರವವು ಲಭ್ಯವಾಗುವುದು. "ಶಕ್ತನಾದರೆ ನೆಂಟರೆಲ್ಲ ಹಿತರು, ಅ | ಶಕ್ತನಾದರೆ ನೋಡಲವರೆ ವೈರಿಗಳು|| ಎಂದು ದಾಸರಾಯರು ನುಡಿದಿರುವರಲ್ಲವೆ?

ಹಸ್ತಿನಾವತಿಯಿಂದ ಹೊರಟ ಪಾಂಡವರ ಯಜ್ಞಾಶ್ವವು ದಕ್ಷಿಣಾಭಿಮುಖವಾಗಿ ನಡೆದು ಯಥೇಚ್ಛವಾಗಿ ಸಂಚರಿಸ ತೊಡಗಿತು ಕೆಲವು ದಿನಗಳೊಳಗಾಗಿಯೇ ಅದನ್ನು ಮಾಹಿಷ್ಮತೀ ನಗರದ ನೀಲಧ್ವಜ ರಾಜೇಂದ್ರನು ಹಿಡಿದು ಕಟ್ಟಿ, ಪಾಂಡವ ಸೇನೆಯನ್ನು ಎದುರಿಸಿದನು. ಅರ್ಜುನನಿಗೂ ನೀಲಧ್ವಜನ ಅಜೇಯವಾದ ಸೇನೆಗೂ ಭಯಂಕರ ಯುದ್ಧವಾಗಿ ಕೊನೆಗೂ ಅರ್ಜುನನೇ ಜಯಶಾಲಿಯಾದನು ಯಜ್ಞಾಶ್ವವು ಮುಂದೆ ಹೊರಟು ಸಂಚರಿಸುತ್ತಾ ಹಂಸಧ್ವಜನಿಂದ ಪಾಲಿತವಾದ ಸೀಮೆಯ ಮೇರೆಯನ್ನು ಪ್ರವೇಶಿಸಿತು. ತನ್ನ ರಾಜ್ಯದ ಗಡಿಯನ್ನು ಹೊಕ್ಕು ಸಂಚರಿಸುತ್ತಿದ್ದ ಪಾಂಡವ ಮಧ್ಯನಾದ ಅರ್ಜುನನಿಂದ ರಕ್ಷಿತವಾದ ಯಜ್ಞಾಶ್ವದ ವಿಚಾರವನ್ನು ದೂತ ಮುಖದಿಂದ ತಿಳಿದು ಹಂಸಧ್ವಜ ರಾಜೇಂದ್ರನು, ಪ್ರಭುಭಕ್ತರೂ ಪ್ರಾಜ್ಞರೂ ಆದ ಶ್ರದ್ಧಾಯ, ಸುಮತಿ ಪ್ರಮತಿಗಳೆಂಬ ತನ್ನ ಆಪ್ತಮಂತ್ರಿಗಳನ್ನು ಕುರಿತು, "ಎಲೈ ಮಂತ್ರಿ ಶ್ರೇಷ್ಠರೇ ಈಗ ಪಾಂಡವ ವೀರನಾದ ಅರ್ಜುನನಿಂದ ರಕ್ಷಿತವಾದ ಧರ್ಮಜನ ಯಜ್ಞಾಶ್ವವು ನಮ್ಮ ನಾಡನ್ನು ಪ್ರವೇಶಿಸಿದೆ. ಪಾಂಡವರನ್ನು ಶ್ರೀಕೃಷ್ಣಪರಮಾತ್ಮನು ರೆಪ್ಪೆಗಳು ಕಣ್ಣುಗಳನ್ನು ಹೇಗೋ ಹಾಗೆ ಕಾಪಾಡುತ್ತಿರುವನೆಂಬ ವಿಷಯವು ಲೋಕಪ್ರಸಿದ್ಧವಷ್ಟೆ! ನಾವು ಇಷ್ಟು ದಿನಗಳವರೆಗೆ ಈ ಭೂಮಿಯಲ್ಲಿ ಜೀವಿಸಿದ್ದರೂ, ನರಲೀಲೆಗಾಗಿ ಅವತರಿಸಿರುವ ಆ ಪುಣ್ಯಪುರುಷನನ್ನು, ಆ ಪಾವನ ಮೂರ್ತಿಯನ್ನು, ದೇವಕೀನಂದನನಾದ ಆ ಕೃಷ್ಣಮೂರ್ತಿಯನ್ನು ದರ್ಶನ ಮಾಡಲಿಲ್ಲ. ಈಗ ಅದಕ್ಕೆ ಸಕಾಲ ಒದಗಿದಂತಿದೆ. ಧರ್ಮಜನ ಈ ಯಜ್ಞಾಶ್ವವನ್ನು ಕಟ್ಟಿ, ಅರ್ಜು

ನನನ್ನು ಎದುರಿಸಿದರೆ, ಅವನ ರಕ್ಷಣೆಗಾಗಿ ಶ್ರೀಕೃಷ್ಣನು ಬಂದೇ ಬರುವನು. ತನ್ಮೂಲಕ ಬಹು ಸುಲಭವಾಗಿ ಶ್ರೀಹರಿಯ ಮಾನುಷದೇಹವನ್ನು ದರ್ಶನ ಮಾಡಿ ಧನ್ಯರಾಗಬಹುದು ಹಾಗಲ್ಲದೆ ಅನೇಕ ಬಗೆಯ ಆಧಿವ್ಯಾಧಿಗಳಿಗೊಳಪಟ್ಟು ಈ ದೇಹದಲ್ಲಿ ಎಷ್ಟು ದಿವಸಗಳು ವಾಸಿಸಿದ್ದು ಏನು ಸಾರ್ಥಕ?" ಎಂದು ನುಡಿದನು. ಈ ಮಾತು ಆ ಮಂತ್ರಿಗಳಿಗೂ ಸಮ್ಮತ ವೆನಿಸಿತು. ಒಡನೆ, ರಾಜಾಜ್ಞೆಯಿಂದ ದೂತರು ಧರ್ಮಜನ ಆ ಯಜ್ಞಾಶ್ವವನ್ನು ಹಿಡಿ ತಂದು ರಾಜನ ಎದುರಿಗೆ ನಿಲ್ಲಿಸಿದರು

ಆ ಕುದುರೆಯ ಶುಭ್ರವಾದ ಅತಿ ಮನೋಹರವಾದ ಧವಳ ವರ್ಣವೂ ಪ್ರಪಂಚಕ್ಕೆ ಹೊಸದೆಂದು ತೋರುವ ಅದರ ಹಳದಿ ಬಣ್ಣದ ಬಾಲವೂ ಒಂದು ಭಾಗದ ಕವಿಯು ಮಾತ್ರ ಶುದ್ಧ ಸೀಲ ವರ್ಣದಿಂದ ಶೋಭಿಸುತ್ತಿದ್ದ ಸೌಂದರ್ಯವೂ ರಾಜನನ್ನೂ ಪರಿವಾರವನ್ನೂ ಆಶ್ಚರ್ಯಮಗ್ನರನ್ನಾಗಿ ಮಾಡಿತು. ಅದರ ನೆತ್ತಿಯಲ್ಲಿ ವಿಶಾಲವಾದ ಸುವರ್ಣದಹಲಗೆಯಲ್ಲಿ "ಚಂದ್ರವಂಶಶ್ರೇಷ್ಠನಾದ ಪಾಂಡುಭೂಪತಿಯ ಸುವನ ಯುಧಿಷ್ಠಿರ ಧರಾನಾಥನ ಯಜ್ಞಾಶ್ವವಿದು! ಇದನ್ನು ಧಿಟರಾದವರು ಕಟ್ಟಿ ನಿರ್ವಹಿಸಿಕೊಳ್ಳಬಹುದು" ಎಂಬ ಲಿಖಿತವು ಕಂಗೊಳಿಸುತ್ತಿದ್ದಿತು ಅದನ್ನು ನೋಡಿ ಹಂಸಧ್ವಜನು, ಕುದುರೆಯನ್ನು ತನ್ನ ಲಾಯದಲ್ಲಿ ಕಟ್ಟಿ, ಅದರ ಕಾವಲಿಗಾಗಿ ಬಂದಿದ್ದ ಅರ್ಜುನನ ಸೇನೆಯೊಂದಿಗೆ ಯುದ್ಧಕ್ಕೆ ಸನ್ನದ್ಧನಾಗತೊಡಗಿದನು.

ಆತನ ಸೇನಾಬಲವನ್ನು ಏನೆಂದು ವರ್ಣಿಸಬಹುದು! ಆತನ ಚತುರಂಗ ಸೈನ್ಯದಲ್ಲಿ ಎಪ್ಪತ್ತು ಮಂದಿ ವೀರಶಿರೋಮಣಿಗಳೆನಿಸಿದ ಸೇನಾಧಿಪರಿರುವರು ಅವರಲ್ಲಿ ಒಬ್ಬೊಬ್ಬನೂ ಎಪ್ಪತ್ತೊಂದು ಸಾವಿರ ರಥಗಳನ್ನೂ ಇಪತ್ತೊಂದು ಸಾವಿರ ಗಜಗಳನ್ನೂ ಒಂದು ಲಕ ಕುದುರೆಗಳನ್ನೂ ತೊಂಬತ್ತೊಂಬತ್ತುಸಹಸ್ರ ಪದಾತಿಸೈನ್ಯವನ್ನೂ ಇಟ್ಟುಕೊಂಡು ಯಾವ ಕಾಲಕ್ಕೆಂದರೆ ಆ ಕಾಲಕ್ಕೆ ರಾಜಾಜ್ಞೆಯಂತೆ ಶತ್ರುನಾಶಕ್ಕೆ ಹೊರಡಲು ಸಿದ್ಧನಾಗಿ ರಾಜನನ್ನು ಓಲೈಸಿಕೊಂಡಿರುತ್ತಿದ್ದನು ಅಲ್ಲದೆ ರಾಜನಿಗೆ ಧನಬಲ, ಚಂದ್ರಸೇನ, ಚಂದ್ರಕೇತು, ಚಂದ್ರದೇವ, ವಿಡೂರಥ, ಧರ್ಮವಾಹ, ನ್ಯಾಯವರ್ತಿಗಳೆಂಬ ಏಳುಮಂದಿ ಮಹಾವೀರಾಗ್ರಣಿಗಳಾದ ತಮ್ಮಂದಿರೂ ಸುದರ್ಶನ, ಸುಧನ್ವ, ಸುಮನಸ, ಸುರಥರೆಂಬ ನಾಲ್ಕುಮಂದಿ ಶತ್ರುಭಯಂಕರರಾದ ಮಕ್ಕಳೂ ಬೆಂಬಲರಾಗಿದ್ದರು

ಹಂಸಧ್ವಜ ರಾಜೇಂದ್ರನು, ಎಪ್ಪತ್ತುಮಂದಿ ಸೇನಾಧಿಪರು, ಏಳು ಮಂದಿ ತಮ್ಮಂದಿರು, ನಾಲ್ಕುಮಂದಿ ಪುತ್ರರು ಇವರೆಲ್ಲರನ್ನೂ ಕುರಿತು, ''ಪಾಂಡವರ ಯಜ್ಞಾಶ್ವವನ್ನು ಕಟ್ಟಿದುದಾಯಿತು. ಇನ್ನು ಶ್ರೀಕೃಷ್ಣದರ್ಶನವಾಗುವವರೆಗೂ ಅರ್ಜುನನಿಗೆ ಹಿಮ್ಮೆಟ್ಟದಂತೆ ಕುದುರೆಯನ್ನು ರಕ್ಷಿಸಿಕೊಳ್ಳಬೇಕು. ಅದಕ್ಕೆ ಲೋಪವಿಲ್ಲದಂತೆ ಪ್ರತಿಯೊಬ್ಬನೂ ತನ್ನ ತನ್ನ ಸೇನೆಯನ್ನು ಸರ್ವ ವಿಧದಿಂದಲೂ ಸಿದ್ಧಗೊಳಿಸಿಕೊಂಡು ಯುದ್ಧಸನ್ನದ್ಧರಾಗಿರತಕ್ಕದ್ದು'' ಎಂದು ಆಜ್ಞಾಪಿಸಿದನು ಅಷ್ಟುಮಾತ್ರವಲ್ಲದೆ, "ಯಾವನು ಯುದ್ಧರಂಗಕ್ಕೆ ಹೊರಡಬೇಕೆಂದು ಸೂಚಿಸಲು ಬಾರಿಸಲ್ಪಡುವ ದುಂದುಭಿಯ ಶಬ್ದವನ್ನು ಕೇಳಿದ ಮೇಲೂ ಯುದ್ಧರಂಗಕ್ಕೆ ಹೊರಡದೆ ಅಲಸನಾಗಿ ಹಿಂದುಳಿಯುವನೋ ಅವನನ್ನು ಕಾಯ್ದು ಉಕ್ಕುವ ಎಣ್ಣೆಯ ಕೊಪ್ಪರಿಗೆಯಲ್ಲಿ ಹಾಕಿಸಲಾಗುವುದು'' ಎಂದು ಡಂಗೂರವನ್ನು ಹೊಡೆಯಿಸಿದನು. ಆ ಆಜ್ಞೆಯನ್ನು ಕೇಳಿದ ಮೇಲಂತೂ ಪ್ರತಿಯೊಬ್ಬನೂ ರಾಜಾಜ್ಞೆಯನ್ನು ಪಾಲಿಸುವ ವಿಚಾರದಲ್ಲಿ ಅತ್ಯಂತ ಶ್ರದ್ಧಾಭಕ್ತಿ-ಭಯಗಳಿಂದ ಕೂಡಿ ಸಿದ್ಧನಾಗತೊಡಗಿದನು. ಹೀಗೆ ಯಜ್ಞಾಶ್ವವನ್ನು ಕಾಯ್ದುಕೊಳ್ಳಲು ಮಾಡಬೇಕಾದ ಸನ್ನಾಹಗಳನ್ನೆಲ್ಲಾ ಮಾಡಿ ವೀರಾಗ್ರಣಿಯೂ ಶ್ರದ್ಧಾವಂತನೂ ಆದ ಆ ನರಪಾಲನು ಶ್ರೀಕೃಷ್ಣ ದರ್ಶನದಿಂದ ತನ್ನ ಕಣ್ಣುಗಳಿಗೆ ಹಬ್ಬವನ್ನುಂಟುಮಾಡಲು ಅತ್ಯಂತ ಉತ್ಸುಕನಾಗಿ ಯುದ್ಧಾರಂಭವನ್ನೇ ಎದುರು ನೋಡುತ್ತಿದ್ದನು.



## ಅಧ್ಯಾಯ ೩ "ತಪ್ತತೈಲ ಕಟಾಹ"

ಚಂಪಕಾಪುರಿಯಲ್ಲಿ ಪರಮ ಸಂಭ್ರಮ ಕ್ಷತ್ರಿಯವೀರರಿಗೆ ವೀರಸ್ವರ್ಗ ಪ್ರದಾಯಿನಿಯಾದ ಧರ್ಮಯುದ್ಧಕ್ಕಿಂತಲೂ ಮತ್ತಾವುದೂ ಪ್ರೀಕರವಾಗದಷ್ಟೆ! ಅವರು ಅದನ್ನು ಪರಿಣಯದ ಪ್ರಥಮ ಸಂದರ್ಶನದಲ್ಲಿ ಪ್ರಿಯೆಯ ಕಂಠಾಲಿಂಗನದಂತೆ ಬಯಸುವರು ಖಡ್ಗಪ್ರಹಾರಗಳಿಗೆ ನವವಧುವು ಅರ್ಪಿಸುವ ಪುಷ್ಪಹಾರಗಳಿಗೋ ಎಂಬಂತೆ ಕಂಠಗಳನ್ನೊಡ್ಡುವರು.

ಅವರಿಗೆ ಮರಣವೆಂಬ ಭಯವೇ ಇಲ್ಲ ನಿರ್ಭೀತರವರು! ನಿರ್ಭೀತಿಯೇ ಸಕಲ ಸುಖಗಳ ತಳಹದಿಯು ಭಯಭರಿತನು-ಭೀರುಸ್ವಭಾವದ ರಣ ಹೇಡಿಯು ನಿಶ್ಚಯವಾದ ಮರಣವು ಪ್ರಾಪ್ತವಾಗುವುದಕ್ಕಿಂತಲೂ ಮುಂದೆಯೇ ಅನೇಕಸಾರಿ ಮರಣವನ್ನು ಅನುಭವಿಸುವನೆಂಬುದು ನಿಶ್ಚಯವಾದ ಮಾತು!

ಚಂಪಕಾಪುರಿಯ ವೀರಾಗ್ರಣಿಗಳಲ್ಲಿ ಒಬ್ಬೊಬ್ಬನೂ ಯುದ್ಧಕ್ಕೆ ಸಿದ್ಧನಾಗ ತೊಡಗಿದನು. ತನ್ನ ಅಂಬು ಬಿಲ್ಲು ಬತ್ತಳಿಕೆ ಕತ್ತಿಗುರಾಣಿ ಮುಸಲ ಕುಂತಮುದ್ಗರ ಪರಶು ತೋಮರಾದಿ ಆಯುಧಗಳನ್ನು ಸಮಯಕ್ಕೊದಗುವಂತೆ ಸಿದ್ಧಪಡಿಸಿಕೊಂಡು ಮನೆಯಲ್ಲಿ ತಾಯ್ತಂದೆಗಳಿಗೆ ವಂದಿಸುವನು ಆ ವೀರಮಾತೆಯರು, 'ಅಪ್ಪಾ ಜಯಶೀಲನಾಗು. ಯುದ್ಧದಲ್ಲಿ ಹಿಂದಿರುಗದೆ ಶತ್ರುವನ್ನು ಎದುರಿಸು. ನಿನ್ನ ದೇಶದ-ಕುಲದ ಮಾನಸಂರಕ್ಷಣಾ ಕಾರ್ಯವು ನಿನ ಕೈಯಲ್ಲಿದೆ. ಹೋಗು, ಸಮಯಬಂದರೆ ದೇಶದ ಮತ್ತು ನಿನ್ನ ಪ್ರಭುವಿನ ಮಾನಸಂರಕ್ಷಣೆಗಾಗಿ ಪ್ರಾಣಕೊಡಲು ಹಿಂತೆಗಯಬೇಡ.' ಎಂದು ಆಶೀರ್ವದಿಸುವರು. ಆ ಕ್ಷಾತ್ರಗುಣವಿಭೂಷಿತರಾದ ತಂದೆಗಳು "ಮಗನೇ ವಿಜಯಿಯಾಗು. ಕ್ಷತ್ರಿಯರಿಗೆ ಸ್ವಧರ್ಮದಲ್ಲಿ ಸದ್ಗತಿಯನ್ನು ಸಂಪಾದಿಸಲು ಇದಕ್ಕಿಂತಲೂ ಉತ್ತಮ ಸಂದಿಯು ದೊರೆಕದು ಶತ್ರುವಿಗೆ ಬೆನ್ನು ತೋರಿಸಿ, ನಿನ್ನನ್ನು ಹೆತ್ತವರನ್ನು ಅಪಮಾನಗೊಳಿಸದಿರು" ಎಂದು ಆಶೀರ್ವದಿಸುವನು. ವೀರ ಪತ್ನಿಯರು "ರಮಣಾ ನೀನು ಶತ್ರುವಿಗೆ ಹೆದರಿ ಜೀವಗಳ್ಳನಾದರೆ ನನ್ನ ಸರೀಕ ಹಂಗಸರು ಹೇಡಿಯ ಹೆಂಡತಿಯೆಂದು ನನ್ನನ್ನು ಹಂಗಿಸುವರು. ಪ್ರಿಯಾ ನನ್ನನ್ನು ಅಂತಹ ಅಪಮಾನಕ್ಕೆ ಒಳಗಾಗದಂತೆ ರಕ್ಷಿಸು" ಎಂದು ನಮಸ್ಕರಿಸಿ ವಿಜ್ಞಾಪಿಸುವಳು. ಇಂತು ಎಲ್ಲರನ್ನೂ ಸಮಾಧಾನಗೊಳಿಸಿ ಮಕ್ಕಳು ಮರಿಗಳನು ಆಲಂಗಿಸಿ, ಆಶೀರ್ವದಿಸಿ ಆವೀರರು ತಂಡ ತಂಡವಾಗಿ ತಮ್ಮ ತಮ್ಮ ವಾಹಿನಿಗಳನ್ನು ಸೇರಿ ಎಂದಿಗೆ ಯುದ್ಧ ಪ್ರಾರಂಭವಾಗುವುದೋ ಎಂದು ಮಳೆಗಾಲದ ಮುಂಗಾರು ಹನಿಗಾಗಿ ಕಾದಿರುವ ಚಾತಕ ಪಕ್ಷಿಗಳಂತೆ ಯುದ್ಧಾಕಾಂಕ್ಷಿಗಳಾಗಿದ್ದರು.

ಪ್ರಿಯ ವಾಚಕ ಮಹಾಶಯ, ಪ್ರಿಯ ಭಗನೀವೃಂದ ಈ ಸಂಧರ್ಭದಲ್ಲೊಂದು ಮಾತು ಇಲ್ಲಿ 'ಯುದ್ಧ'ವೆಂದರೆ ಕೇವಲ ಶತ್ರುವಿನೊಂದಿಗೆ ಆ

ಯುಧ ಹಸ್ತನಾಗಿ ಹೋರಾಡುವಿಕೆಯೆಂದು ಮಾತ್ರ ಸಂಕುಚಿತಾರ್ಥವನ್ನು ಮಾಡದಿದ್ದರೆ, ಆ ಪದಕ್ಕೆ ಅನೇಕಾರ್ಥಗಳನ್ನು ಮಾಡಬಹುದು. ಮನುಷ್ಯನು ತನ್ನ ಲೌಕೀಕ ಜೀವಿತದಲ್ಲಿ ಅಭಿವೃದ್ಧಿಗಾಗಿ ಹೆಣಗುವ ಪ್ರತಿಯೊಂದು ವೃತ್ತಿಯಲ್ಲೂ ಯುದ್ಧವೀರನು ರಣರಂಗದಲ್ಲಿ ಜಯ ಸಂಪಾದನೆಗಾಗಿ ಹೆಣಗುವಂತೆ ಉತ್ಸಾಹ ಸಾಹಸ ಧೈರ್ಯ ಪರಾಕ್ರಮಾದಿಗಳಿಂದ ಕೂಡಿ ಪ್ರಯತ್ನಿಸದಿದ್ದರೆ ತತ್ತತ್ಕಾರ್ಯಗಳಲ್ಲಿ ಜಯವನ್ನು ಹೊಂದಲೆಳಿಸುವುದು ಸುಲಭವಲ್ಲ. ಇದೂ ಒಂದು ಜೀವನಸಂಗ್ರಾಮವು ಈ ಸಂಗ್ರಾಮದಲ್ಲಿ ಹೋರಾಡುವುದಕ್ಕೂ ನಮ್ಮವರು ಮೊದಲು ನಿರ್ಭೀತರಾಗಿರಬೇಕು ಆಶಾಮೋಹಗಳನ್ನು ಒದಿಗೊತ್ತಲು ಕಲಿಯಬೇಕು! ಅಂಜಿಕೆ ಅಲಸಿಕೆ ಸುಲಭಜೀವನಾದಿಗಳಿಗೆ ತಿಲಾಂಜಲಿಯನಿತ್ತು ಯುದ್ಧವೀರರಂತೆ ಹೆಣಗತೊಡಗಿದರೆ ಮಾತ್ರ ಯಾವ ಕೆಲಸದಲ್ಲಾದರೂ ಜಯ ಹೊಂದಬಹುದಲ್ಲದೆ, ಅನ್ಯಥಾ ಮಾರ್ಗವಿಲ್ಲ ರಾಷ್ಟ್ರವು ಪರಾಧೀನವಾಗಿ ದೇಶೀಯರು ಪರದಾಸರಾಗಿರುವ ಈ ಸಂದರ್ಭದಲ್ಲಂತೂ ಪ್ರತಿಯೊಬ್ಬನೂ ಸ್ವಾರ್ಥವನ್ನು ಕಡೆಮೆಮಾಡಿ ದೇಶದ ಶ್ರೇಯಸ್ಸಾಧನೆಗಾಗಿ ಪ್ರಯತ್ನಿಸಬೇಕಾದುದು ಅನಿವಾರ್ಯಧರ್ಮವಾಗಿದೆ. ಇಂತಹ ಧರ್ಮಸಂಗ್ರಾಮದಲ್ಲಿ ಪ್ರವೇಶಿಸಲು ಉತ್ಸಾಹಿ ತರುಣರನ್ನು ಅವರ ಮಾತಾಪಿತೃಗಳೂ ಯುಕ್ತರೀತಿಯಿಂದ ಆಶೀರ್ವದಿಸಬೇಕು. ಪತ್ನಿಯರೂ ಅವರ ಕಾಲುಗಳಿಗೆ ಆಶಾಮೋಹಗಳೆಂಬ ಸಂಕಲೆಗಳನ್ನು ತಗುಲಿಸಿ ನಿರ್ಬಂಧಿಸದಂತೆ ವೀರ್ಯೋತ್ಪಾದಕ ಉತ್ಸಾಹಪೂರ್ಣ ವಾಕ್ಯಗಳನ್ನು ನುಡಿದು ಅವರವರು ತಮ್ಮ ತಮ್ಮ ಕಾರ್ಯಗಳಲ್ಲಿ ಅಧಿಕೋತ್ಸಾಹ ಪೂರ್ಣ ಶ್ರದ್ಧೆಗಳಿಂದ ಪ್ರವೇಶಿಸಲು ಅನುಕೂಲಗೊಳಿಸಬೇಕು. ಶುಷ್ಕವಾದ ಆಸೆ ಮೋಹ ನಿಷ್ಕಾರಣಭೀತಿ ಮುಂತಾದುವುಗಳನ್ನು ತ್ಯಜಿಸಬೇಕು ಹುಟ್ಟಿದೆಡೆಯಿಂದ ಹೊರಹೊರಟರೆ ಎಲ್ಲಿ ಸಾಯುವೆನೋ ಏನಪಾಯ ಬರುವುದೋ ಎಂಬ ಅಂಜಿಕೆಯನ್ನು ತ್ಯಜಿಸಿ ಪ್ರಪಂಚದಲ್ಲಿ ಧೀರನಾಗಿ 'ಮನುಷ್ಯ'ನಾಗಿ ಬದುಕುವಂತಾಗಲೆಂದು ಆಶೀರ್ವದಿಸಿ ಕಳುಹಿಸುವಂತಹ ಸ್ಥೈರ್ಯವು ನಮ್ಮ ಮಾತೆಯರಲ್ಲುಂಟಾಗಲಿ! ಮನುಷ್ಯನಾಗಿ ಹುಟ್ಟಿದವನು, ಹೆಚ್ಚೇನು ಬೇಡ ಮನುಷ್ಯನಂತಾದರೂ ಬದುಕಲು ಯೋಗ್ಯನಾಗದಿದ್ದರೆ ಅವನು ಬದುಕಿತಾನೆ ಪ್ರಯೋಜನವೇನು? ಭೂಮಿಭಾರಕರಾದ ಅಂತಹ ಹೇಡಿಗಳನ್ನು ಹೆರು

ವುದಕ್ಕಿಂತಲೂ ನಮ್ಮ ಕರ್ಣಾಟಕ ಮಾತೆಯುರು ಬಂಜೆಗಳಾಗಿದ್ದರೂ ಮೇಲಲ್ಲವೇ?

ಅತ್ತ ಚಂಪಕಾಪುರಿಯ ಯುದ್ಧವೀರರು ಅಂತು ಯುದ್ಧಾಪೇಕ್ಷಿಗಳಾಗಿ ತೆರಳಿರಲು ಇತ್ತ ಹಂಸಧ್ವಜನ ದ್ವಿತೀಯ ಪುತ್ರನೂ ಮಹಾಪರಾಕ್ರಮಿಯೂ ಆದ ಸುಧನ್ವನು ಧನುರ್ಬಾಣಗಳನ್ನು ಧರಿಸಿ ಆತುರದಿಂದ ಯುದ್ಧಭೂಮಿಗಾಗಿ ಹೊರಟು, ಅಷ್ಟರಲ್ಲಿ ಜ್ಞಾಪಕಬರಲು ತನ್ನ ತಾಯಿಯನ್ನು ಕಂಡು ನಮಸ್ಕರಿಸಿ ಆಶೀರ್ವಾದ ಪಡೆದು ಹೋಗಬೇಕೆಂದು ಅಂತಃಪುರವನ್ನುಹೊಕ್ಕನು ಅಲ್ಲಿ ಆ ಸಾಧ್ವಿಯು ಸಂವಕ್ಕೆರಗಿದ ಆ ತನ್ನ ಪುತ್ರನ ಮುಂಡೆಯನ್ನು ಹಿಡಿದೆತ್ತಿ ಜಯಶಾಲಿಯಾಗೆಂದು ಆಶೀರ್ವದಿಸಿ "ಮಗುವೇ ಇದೇನು, ಧನುರ್ಬಾಣಗಳನ್ನು ಧರಿಸಿ ಕವಚಕುಂಡಲಗಳಿಂದ ಅಲಂಕೃತನಾಗಿ ಹೊರಟಿರುವೆಯಲ್ಲಾ! ಈಗಾವ ಶತ್ರುವಿನೊಂದಿಗೆ ಯುದ್ಧವೊದಗಿರುವುದು?" ಎಂದು ಪ್ರಶ್ನಿಸಿದಳು ಆಗಲಾ ಸುಧನ್ವನು "ತಾಯೇ ಪಾಂಡವಾಗ್ರಣಿ ಯುಧಿಷ್ಠಿರನು ಭೂಪ್ರದಕ್ಷಿಣೆಗಾಗಿ ಬಿಟ್ಟ ಯಜ್ಞಾಶ್ವವು ನಮ್ಮ ರಾಜ್ಯದ ಗಡಿಯೊಳಕ್ಕೆ ಪ್ರವೇಶಿಸಿದೆ ಅದನ್ನು ಕಟ್ಟಿ, ಅದರ ರಕ್ಷಣೆಗಾಗಿ ಬಂದಿರುವ ಭಾರತಯುದ್ಧದಕಲಿಯೆಂದು ಪ್ರಖ್ಯಾತನಾದ ಅರ್ಜುನನೊಂದಿಗೆ ನನ್ನ ಸಾಹಸ ಪರಾಕ್ರಮಾದಿಗಳನ್ನು ತೋರಿಸಿ ಯುದ್ಧ ಮಾಡಲು ಹೋಗುತ್ತಿದ್ದೇನೆ. ನನ್ನನ್ನು ಆಶೀರ್ವದಿಸಿ ಕಳುಹಿಸು" ಎಂದು ಪುನಃ ನಮಸ್ಕರಿಸಿದನು ಮಗನ ಆ ಮಾತನ್ನು ಕೇಳಿದ ಆ ವೀರಮಾತೆಯು "ವುತ್ರಾ ಅರ್ಜುನನು ನಾಲ್ಕು ಕಾಲಿನ ಒಂದು ಹರಿ (ಕುದುರೆ) ಯನ್ನು ಪಾಲಿಸುತ್ತಿರುವನು. ನಿನಗೆ ಅದರ ಚಿಂತೆಯೇಕೆ? ಆ ಅರ್ಜುನನನ್ನೇ ಪಾಲಿಸುತ್ತಿರುವ ಹರಿ (ಶ್ರೀ ಕೃಷ್ಣ) ಯೊಬ್ಬನುಂಟು ನೀನು ಅವನನ್ನು ಹಿಡಿದು ಬಂಧಿಸುವ ಯೋಚನೆಯನ್ನು ಮಾಡು ಹಿಂದೆ ನಾರದ ಮಹರ್ಷಿಗಳು ಬಂದಾಗ್ಗೆ ವರ್ಣಿಸಿದ ಮುರಮರ್ದನನಾದ ಆ ಗೋವಿಂದನ ಅನಂತ ಲೀಲಾವಿನೋದಗಳನ್ನು ಕೇಳಿದ್ದುಂಟು. ಈಗ ಆ ಪರಾತ್ಪರನ ದರ್ಶನ ಭಾಗ್ಯವು ಲಭಿಸಿದರೆ ಜನ್ಮವೇ ಧನ್ಯವಾದೀತು!" ಎಂದಳು. ಆ ಮಾತನ್ನು ಕೇಳಿ ಸುಧನ್ವನು "ತಾಯೇ ಹಾಗೆ ಶ್ರೀಕೃಷ್ಣಸ್ವಾಮಿಯನ್ನೇ ಬರಮಾಡುವುದಕ್ಕೆ ಒಂದುಪಾಯವಿದೆ. ಕೈಯನ್ನು ಹಿಡಿದೆಳೆದರೆ ಮೈಯು ತಾನೇ ಮುಂದೆಬರು

ವಂತೆ ಅರ್ಜುನನನ್ನು ಇಲ್ಲಿ ಚೆನ್ನಾಗಿ ನೋಯಿಸಿದರೆ ಕೃಷ್ಣನು ತಾನಾಗಿಯೇ ಬರುತ್ತಾನೆ. ಆಗ ಅಂಬುಜಾಕ್ಷನಾದ ಶ್ರೀಹರಿಯ ಮುಂದೆ ನನ್ನ ಪೌರುಷ ವನ್ನು ತೋರಿಸುತ್ತೇನೆ" ಎನ್ನುತ್ತಿರಲು, "ಮಗುವೇ ಎಳೆಗಂದಿಯ ಕರು ವನ್ನು ಹುಡುಕಿಕೊಂಡು ತಾಯಿ ಹಸುವು ನಡೆತರುವಂತೆ, ಅರ್ಜುನನನ್ನು ಕಾ ಪಾಡಲು ಪಾಂಡವಪ್ರಾಣನೆನಿಸುವ ಶ್ರೀಕೃಷ್ಣಸ್ವಾಮಿಯು ಬಾರದಿರನು. ಆತನಿಗೆ ನೀನು ಹಿಮ್ಮೆಟ್ಟಿಬಂದೆಯಾದರೆ ನನ್ನನ್ನು ಸರಿಯವರು ಜರಿದು ಪರಿ ಹಾಸ್ಯಮಾಡುವರು. ಇನ್ನು ಆ ದಾನವಧ್ವಂಸಿಗೆ ಎದುರಾಗಿ ಜಯಿಸುವ ವರುಂಟೆ! ಕಂದಾ, ನಾನಿನ್ನು ಮನಸ್ಸಿನ ಮರುಕ ಕಳವಳ ಪುತ್ರವ್ಯಾಮೋ ಹಗಳನ್ನು ಬಿಟ್ಟೆನು. ಇನ್ನು ಹೊರಡು ಶೌರಿಗೆ ವಿಮುಖನಾಗಬೇಡ. ಕುಲ ಗೌರವಕ್ಕೆ ಕಳಂಕವನ್ನು ತರಬೇಡ ಹೊರಡು, ನಿನಗೆ ಶುಭವಾಗಲಿ" ಎಂ ದು ಆಶೀರ್ವದಿಸಿದಳು.

ತನ್ನ ತಾಯಿಯು ಆಡಿದ ಮಾತನ್ನು ಕೇಳಿ ವೀರಶಿರೋಮಣಿಯಾದ ಆ ಸುಧನ್ವನು ಸಿಂಹನಾದಮಾಡಿ "ಮಾತೆಯೇ ಏನು ನುಡಿದೆ! ನಾನು ಚಕ್ರಿಗೆ ವಿಮುಖನಾಗುವನೆಂಬೆಯಾ! ಛೆ ಛೆ ಇದೆಂತಹ ಹೀನವಾಕ್ಯ! ನಾನು ಹಾಗೆ ಶ್ರೀ ಕೃಷ್ಣಾರ್ಜುನರಿಗೆ ಬೆನ್ನು ತೋರಿಸಿ ಜೀವಗಳ್ಳನಾಗಿ ಬಂದೆನಾದರೆ, ವೀರಪತ್ನಿ ಯೂ ವೀರಮಾತೆಯೂ ಆದ ನಿನ್ನ ಉದರದಲ್ಲಿ ಜನಿಸಿದವನೆನಿಸಿಕೊಳ್ಳಲು ಹೇ ಗೆ ಯೋಗ್ಯನಾಗುವೆನು ? ವೀರಾಗ್ರಣಿಯಾದ ಹಂಸಧ್ವಜನ ಪುತ್ರನೆನಿಸಿಕೊ ಳ್ಳುವೆನದೆಂತು? ಹಾಗೆ ಯೋಚಿಸಬೇಡ! ತಾಯೆ, ನಾನು ಈ ಧರ್ಮಯುದ್ಧದ ಲ್ಲಿ ಹಿಮ್ಮೆಟ್ಟಿ ಓಡುವವನಾದರೆ ಎಂತು ಹರಿಕಿಂಕರನೆನಿಸಿಕೊಳ್ಳಲು ಅರ್ಹನಾ ಗುವೆನು ? ಇಲ್ಲ, ಹಿಮ್ಮೆಟ್ಟೆನು. ಪಾಂಡವವಾಹಿನಿಯನ್ನು ಕೊಂದು, ವೀರಾ ದಿ ವೀರರನ್ನು ಸೋಲಿಸಿ, ಅರ್ಜುನನ ಪರಾಕ್ರಮವನ್ನು ಅಡಗಿಸಿ, ಚಕ್ರಿಯನ್ನು ಬರಮಾಡಿ ಆತನೆದುರಿಗೆ ನನ್ನ ಶೌರ್ಯವಿಜೃಂಭಣೆಯನ್ನು ತೋರಿಸುವೆನು. ಇನ್ನು ಜಯಾಪಜಯಗಳು ಪುಣ್ಯಾಧೀನವು!" ಎಂದು ನುಡಿದು, ಕೊನೆಯ ಸಾರಿ ಅಪ್ಪಣೆ ಪಡೆದು ಅಲ್ಲಿಂದ ಹೊರಹೊರಟನು.

ಅಷ್ಟರಲ್ಲಿ ಅವನ ಸಹೋದರಿಯಾದ ಕುವಲೆ ಎಂಬ ಬಾಲಿಕಾಮಣಿಯು ಅಣ್ಣನಿಗೆ ಜಯದ ಆರತಿಯನ್ನು ತಂದು, ಬೆಳಗಿ ,ಹಣೆಗೆ ರಕ್ಷೆಯನ್ನಿಟ್ಟು "ಅ ಣ್ಣಯ್ಯಾ ನೀನು ದುರ್ಜಯನಾದ ಕಂಸಾಂತಕನೊಂದಿಗೆ ಯುದ್ಧಕ್ಕಾಗಿ ನಡೆ

ಯುತ್ತಿರುವೆ! ಆದರೆ ಈ ಯುದ್ಧದಲ್ಲಿ ನೀನು ಹಿಮ್ಮೆಟ್ಟದಿರು ಮಾತ್ರ! ಹಾಗೆ ನೀನು ಹಿಮ್ಮೆಟ್ಟುವುದಾದರೆ, ನಾನು ನನ್ನ ಮಾವನ ಮನೆಯಲ್ಲಿ ತಲೆಯತ್ತಿಕೊಂಡು ತಿರುಗದಂತಾಗುವುದು! ನಿನಗೆ ಜಯವಾಗಲಿ!" ಎಂದು ಹಾರೈಸಿದಳು. ಸುಧನ್ವನು, ಆಕೆಯ ಮಾತುಗಳಿಗೆ ಹಸನ್ಮುಖದಿಂದ ತಲೆಯಾಡಿಸುತ್ತಾ ಪ್ರತ್ಯುತ್ತರವಿತ್ತು, ತಾಯಿ ತಂಗಿಯರಿಂದ ಕಳುಹಿಸಿಕೊಂಡು ತನ್ನ ಪತ್ನಿಯನ್ನೂ ಕೊನೆಯಸಾರಿ ನೋಡಿ ಹೋಗೋಣವೆಂದು ತನ್ನ ಅಂತಃಪುರಕ್ಕೆ ಬಂದನು. ಆಗ ಅಲ್ಲಿ ಕಾಮನ ಕೈಗನ್ನಡಿಯೋ ಮದನನ ಮದವಾನೆಯೋ ಮಾಗನೇರಿ ಮೆರೆವ ಮೋಹದತೇರೋ ಎಂಬಂತೆ ತೋರುತ್ತಾ ನಿಂತ ನಡೆದ ನೋಡಿದ ಸ್ಥಳಗಳನ್ನು ಜಲಿಸುವ ಮಿಂಚುಬಳ್ಳಿಯೋ ಎಂಬಂತೆ ತನ್ನ ಕಾಂತಿಯಿಂದ ಜಳಗುತ್ತಾ ಕೈಯಲ್ಲೊಂದು ಕುಸುಮ ಗುಚ್ಛವನ್ನು ಹಿಡಿದು ಹಸನ್ಮುಖದಿಂದ, ಕುಡಿನೋಟದಿಂದ, ಮಂದಗಮನದಿಂದ ನಡೆತಂದು, ಪ್ರಭಾವತಿಯೆಂಬ ಆ ಸುಧನ್ವನ ರಾಣಿಯು ಪ್ರಿಯವಯಸ್ಯನಾದ ತನ್ನಾ ರಮಣನಿಗೆ ಪಾದಾಭಿವಾದನವಮಾಡಿ ಮಸ್ತಲಾಘವ ಹಸನ್ಮುಖಗಳಿಂದ ಸ್ವಾಗತವನ್ನಿತ್ತು ಒಳಕ್ಕೆ ಕರೆದುಯ್ದಳು ಕಾಂತೆಯೊಂದಿಗೆ ಒಳಹೊಕ್ಕ ಸುಧನ್ವನು ಕುಳ್ಳಿರಲು ಸಮಯವಿಲ್ಲದೆ ಆಕೆಯ ಕೈಯಲ್ಲಿದ್ದ ಕುಸುಮಗುಚ್ಛವನ್ನು ಕೈಯಿಂದತ್ತಿಕೊಂಡು ಸ್ನೇಹಪೂರ್ಣ ದೃಷ್ಟಿಯಿಂದ ಆ ತನ್ನ ಮಡದಿಯನ್ನು ನೋಡುತ್ತಾ,—'ಕಾಂತೆ ಪ್ರಭಾವತಿ ನಮಗೀಗ ಅರ್ಜುನನೊಂದಿಗೆ ಸಮರ ಕಾರ್ಯವು ಸಂಘಟಿಸಿದೆ ಪಾಂಡವ ಸೇನೆಯೊಂದಿಗೆ ಯುದ್ಧಕ್ಕಾಗಿ ಹೊರಟಿದ್ದೇನೆ ಯುದ್ಧದಲ್ಲಿ ನನ್ನ ಭುಜಬಲವಿಕ್ರಮಾದಿಗಳಿಂದ ಅವನನ್ನು ಸೋಯಿಸಿ ಮುರಾಂತಕನಾದ ಶ್ರೀಹರಿಯು ಎದುರಾದರೆ ಆತನೆದುರಿಗೆ ನನ್ನ ಶೌರ್ಯ ಪ್ರತಾಪಗಳನ್ನು ತೋರಿಸುತ್ತೇನೆ. ಯುದ್ಧದಲ್ಲಿ ಜಯಾಪಜಯಗಳು ಸ್ಥಿರವಲ್ಲವಾದುದರಿಂದ ಒಂದುವೇಳೆ ಶ್ರೀಕೃಷ್ಣನ ಸನ್ನಿಧಿಯಲ್ಲಿ ನಾನು ಭವಾಂತರವನ್ನು ಹೊಂದುವ ಯೋಗವು ಪ್ರಾಪ್ತಿಸಿದರೆ ನೀನು ತಳಮಳಿಸದಿರು. ನಾನಿನು ಹೊರಡುತ್ತೇನೆ" ಎಂದು ನುಡಿದು ಬಾಗಿಲ ಕಡೆಗೆ ಹೆಜ್ಜೆಗಳನ್ನಿಟ್ಟನು

•

ಆಗಲಾರಮಣಿಯು ಯುದ್ಧೋನ್ಮುಖನಾಗಿ ತೆರಳುತ್ತಿರುವ ತನ್ನಾ ಪುರುಷನನ್ನು ಕುರಿತು 'ಪ್ರಾಣನಾಯಕನೇ ಪರಸೇನಾಪರೆ ಮುರಾಂತಕನಾದ

ಶ್ರೀಕೃಷ್ಣನೊಂದಿಗೆ ಯುದ್ಧಮಾಡುವ ಅಭಿಲಾಷೆಯಿಂದ ರಣರಂಗಕ್ಕೆ ಹೋಗುತ್ತಿರುವೆ. ಶ್ರೀಕೃಷ್ಣನೊಂದಿಗೆ ಯುದ್ಧವೆಂದರೆ ಮುಕ್ತಿಯಿಲ್ಲದ ಜನುವುಂಟಾಗುವುದೆಂದು ಯೋಚಿಸಬಹುದೆ! ರಮಣಾ ಹಾಗಾದಲ್ಲಿ ನಿನಗೆ ಸಂತತಿಯುಂಟಾಗುವ ಮಾರ್ಗವಾವುದು! ಇದುವರೆಗೆ ಪುತ್ರಸಂತಾನವಿಲ್ಲದ ನಮಗೆ ಸಂತತಿಯಾದರೂ ಹೇಗೆ ಲಭ್ಯವಾದೀತು? ಸಮರ ಸನ್ನದ್ಧನಾಗಿ ಹೊರಡುತ್ತಿರುವ ವೀರನಿಗೆ ಸಂತಾನವಿಲ್ಲದಿರುವಿಕೆ ಎಂತು ಶೋಭಿಸೀತು! ಪ್ರಾಣಪ್ರಿಯನೆ! ಅದುದರಿಂದ ಈಗ ಋತುಧರ್ಮದಿಂದ ಸಂಸಿದ್ಧವಾಗಿರುವ ನಿನ್ನೀ ಕ್ಷೇತ್ರದಲ್ಲಿ ಬೀಜವನ್ನು ಬಿತ್ತಿದಿರಾದರೆ ಅದು ಮುಂದೆ ಉತ್ತಮ ಫಲಪ್ರದವಾಗದೆ ಇರುವುದೇ? ಇದನ್ನು ನೀನು ಯೋಚಿಸಬೇಕಷ್ಟೆ!" ಎಂದು ನುಡಿದಳು. ಕಾಂತೆಯ ನುಡಿದ ಆ ಮಾತುಗಳಿಗೆ ಸುಧನ್ವನು "ರಮಣೀ ನೀನಾಡುವ ಮಾತು ಯುಕ್ತವಾದುದು. ಆದರೂ ಇದು ಆಧಾನವನ್ನು ಮಾಡುವ ಸಮಯವಲ್ಲ. ಯುದ್ಧಭೇರಿಯು ಮೊಳಗುತ್ತಿದೆ, ಕೇಳು. ನನ್ನ ತಂದೆಯು ಯುದ್ಧರಂಗಕ್ಕೆ ನಡೆಯುತಿರುವನು. ಈಗ ನಾನು ಅಲ್ಲಿ ಕಾಣದಿದ್ದರೆ ರಾಜಾಜ್ಞೆಗೂ, ತಂದೆಯ ಕೋಪಕ್ಕೂ ಒಳಗಾಗಬೇಕಾಗುವುದು. ಕ್ಷತ್ರಿಯ ಕನ್ಯೆಯಾದ ನಿನಗೆ ಈ ಯುದ್ಧ ನಿಯಮಗಳು ತಿಳಿಯವೆ! ಈ ಸಂದರ್ಭದಲ್ಲಿ ನನ್ನ ಪ್ರಯಾಣಕ್ಕೆ ಈ ಬಗೆಯಲ್ಲಿ ವಿಘ್ನವನ್ನುಂಟುಮಾಡುವುದು ಯುಕ್ತವಲ್ಲ!" ಎಂದು ನುಡಿದು ಆ ಕಾಂತಾಮಣಿಯನ್ನು ಬಗೆಬಗೆಯಿಂದ ಸಮಾಧಾನಗೊಳಿಸಿ ಕುರುಳ್ಗಳನ್ನು ತಿದ್ದಿ ಮುದ್ದಿಸಿ ಅಲ್ಲಿಂದ ಹೊರಡಲು ಸಿದ್ಧನಾದನು.

ಆದರೆ ಸುಧನ್ವನ ಈ ಮಾತುಗಳು ಆಕೆಗೆ ರುಚಿಸಲಿಲ್ಲ. ಪ್ರೌಢೆಯಾದ ಆ ಕಾಂತಾಮಣಿಯು ಪ್ರಿಯನನ್ನು ಆ ವೇಳೆಯಲ್ಲಿ ಧರ್ಮಯುದ್ಧಕ್ಕಾಗಿ ಬಿಟ್ಟುಕೊಡದಾದಳು. ಧರ್ಮಮಾರ್ಗೈಕ ತತ್ಪರನಾದ ಆ ತರುಣ ವೀರನು ತಂದೆಯ ಆಜ್ಞೆಯನ್ನು ಮೀರಿ ನಿಲ್ಲಲಾರನೆಂದು ತೋರಿತು. ಆಗಲಾಕೆಯು ಮಾರ್ಗಾಂತರವು ತೋರದಿರಲು ಎಂತಾದರೂ ಆತನನ್ನು ಅಲ್ಲಿ ಆ ದಿನ ನಿಲ್ಲಿಸಿಕೊಳ್ಳಬೇಕೆಂದು ಕೃತಸಂಕಲ್ಪಳಾಗಿ ಧೈರ್ಯದಿಂದ ಪುರುಷವಶ್ಯಕ್ಕೆ ಅತ್ಯುತ್ತಮ ಸಾಧನಗಳಾದ ಓರೆನೋಟ, ಹುಸಿಕೋಪ, ಬೆಡಗುಬಿಂಕಗಳು, ಲಲ್ಲೆಮಾತುಗಳು ಮುಂತಾದ ಶೃಂಗಾರ ಚೇಷ್ಟೆಗಳಿಂದ ಆತನನ್ನು ಜಯಿಸ

ಲು ಯತ್ನಿಸಿದಳು. ಸಮೀಪಕ್ಕೆ ಬಂದಳು, ಮೈಗೊತ್ತಿನಿಂದಳು, ಕುಡಿನೋಟದಿಂದ ನೋಡಿದಳು, ಮತ್ತು ಮೋಹಪರವಶನನ್ನು ಸೂರೆಗೊಳಿಸುವಂತಹ ಲಲ್ಲೆವಾತುಗಳಿಂದ "ರಮಣಾ ಇದೇನು ವಿಜಯನೊಂದಿಗೆ ಯುದ್ಧಮಾಡಿ ಜಯಿಸುವೆನೆಂದು ಹೊರಡಲನುವಾದ ವೀರನಾದ ನೀನು ಅನಂಗನ ಯುದ್ಧರಂಗದಲ್ಲಿ ನಿಂತು ಕಾದಾಡಲು ಅಂಜುವುದು ಉಚಿತವೇ" ಎಂದು ಹಂಗಿಸಿ ನುಡಿದಳು ಅತ್ಯಧಿಕ ಸ್ನೇಹ ಪ್ರೇಮಗಳಿಂದ ಅವನನ್ನು ಆಲಿಂಗಿಸಿದಳು ಕಿರುನಗೆಯ ಶೃಂಗಾರ ರಸವನ್ನು ತೋರಿಸಿದಳು. ಅವನ ಮನಸ್ಸನ್ನು ತನ್ನ ಕಡೆಗೆ ತಿರುಗಿಸಿಕೊಂಡಳು.

ಸುಧನ್ವನು ವಿಜಿತನಾದನು. ತನ್ನ ರಮಣಿಯ ಬಾಹು ಪಾಶದಲ್ಲಿ ಸಿಕ್ಕಿ ಆ ತರುಣವೀರನು ಆಕೆಯನ್ನು ಮೀರಿ ಹೊರ ಹೊರಡಲಸಮರ್ಥನಾದನು. ನವ ಪ್ರೌಢೆಯೂ ಅನುಕೂಲೆಯೂ ಆದ ಆಕೆಯ ಅಂಗಪ್ರತ್ಯಂಗಗಳು ದೃಷ್ಟಿಗೋಚರರಾಗಿ ಅವನನ್ನು ಮೇಲೆ ಮೇಲೆ ಅಧೀರನನ್ನಾಗಿ ಮಾಡಿದುವು ಆಗಲವನು ಮಾರ್ಗಾಂತರವನ್ನರಿಯದ ವಿಚಾರಯುಕ್ತನಾದನು. "ಧರ್ಮಪತ್ನಿಗೆ ಋತುಕಾಲವೂ, ಅಲಂಘ್ಯವಾದ ಏಕಾದಶಿಯ ಮಹಾವ್ರತವೂ, ಪಿತೃಶ್ರಾದ್ಧವೂ ಈ ಮೂರೂ ಒಂದೇ ದಿನದಲ್ಲಿ ಪ್ರಾಪ್ತವಾದರೆ ಆಗಿನ ಕರ್ತವ್ಯವು ಹೇಗೆ-" ಎಂಬ ಧರ್ಮಸೂಕ್ಷ್ಮವನ್ನು ವಿಮರ್ಶಿಸತೊಡಗಿದನು ಇಂತು ಯೋಚಿಸತೊಡಗಿ, ಧರ್ಮಮಾರ್ಗೈಕ ತತ್ಪರನಾದ ಆ ಸುಧನ್ವನು, "ಪೈತೃಕದ ಶೇಷಾನ್ನವನ್ನು ಆಘ್ರಾಣಿಸುವುದರಿಂದ ಏಕಾದಶಿಯ ವ್ರತವನು ಪಿತೃಶೇಷವನ್ನು ಭುಜಿಸಿದುದರ ಫಲವೂ, ಏಕಾದಶಿಯಾದ ಆ ದಿನದ ನಡುರಾತ್ರಿಯು ಕಳೆದಮೇಲೆ ಧರ್ಮಪತ್ನಿಯನ್ನು ಒಡಗೂಡುವುದರಿಂದ ಋತುಸಮಯವನ್ನು ಮೀರದ ಫಲವೂ ಪ್ರಾಪ್ತವಾಗುತ್ತದೆಂದು" ನಿರ್ಧರಿಸಿದನು ಆದುದರಿಂದ ಆ ಸಮಯದಲ್ಲಿ ಅಲ್ಲಿನಿಂತು, ಸಂತಾನಾಕಾಂಕ್ಷೆಯಾದ ಆಕೆಯ ಅಪೇಕ್ಷೆಯನ್ನು ನೆರವೇರಿಸುವುದು ದೋಷಾವಹವಾದುದಲ್ಲವೆಂದು ಆಕೆಯ ಇಷ್ಟಕ್ಕೆ ಒಡಂಬಟ್ಟನು. ಹೀಗೆ ಋತುಸ್ನಾತೆಯಾದ ಧರ್ಮಪತ್ನಿಯಲ್ಲಿ ಸಂತಾನಾಕಾಂಕ್ಷಿಯಾಗಿ ಬೆರೆಯತಕ್ಕದು ಧರ್ಮ ವಿರುದ್ಧವಲ್ಲವೆಂದು ಹೇಳಿದ ಸ್ಮೃತಿಕಾರರಾದ ಮನ್ವಾದಿ ಮಹರ್ಷಿಗಳ ವಚನದಲ್ಲಿ ದೃಢವಿಶ್ವಾಸವಿಟ್ಟ ಆ ಸುಧನ್ವನು ತನ್ನ ರಮಣಿಯ ಇಷ್ಟವನ್ನು ಸಲ್ಲಿಸಿ ತರುವಾಯ ಶುಚಿ

ಧೂರ್ತನಾಗಿ, ತಂದೆಯು ಎಲ್ಲಿ ಕೋಪಿಸಿಕೊಳ್ಳುವನೋ ಎಂದು ಮನಸ್ಸಿನಲ್ಲಿ ಶಂಕಿಸುತ್ತಾ ಅಗಲಲಾರದೆ ಮರುಗುತ್ತಿದ್ದ ಆಕೆಯನ್ನು ಪರಿಪರಿಯಿಂದ ಸಮಾಧಾನಗೊಳಿಸಿ, ಆಕೆಯನ್ನು ಬೀಳ್ಕೊಂಡು ಸಮರಭೂಮಿಯನ್ನು ಕುರಿತು ಹೊರಡಲು ಸಿದ್ಧನಾದನು.

ಅಷ್ಟರಲ್ಲಿ ಅತ್ತ ಪಾಂಡವ ಸೇನೆಯೊಂದಿಗೆ ಯುದ್ಧವನ್ನು ಹೂಡಿ ಸೈನ್ಯ ಸಮೂಹದೊಂದಿಗ ಸಮರಭೂಮಿಯನ್ನು ಕುರಿತು ನಡೆಯುತ್ತಿದ್ದ ಮರಾಳಧ್ವಜರಾಜೇಂದ್ರನು, ಸೈನ್ಯದಲ್ಲಿ ಮಹಾಬಲ ಪರಾಕ್ರಮ ಸಂಪನ್ನನಾದ ತನ್ನ ಮಗ ಸುಧನ್ವನನ್ನು ಕಾಣದ ತನ್ನ ಆಜ್ಞೆಗೆ ತನ್ನ ಮಗನೇ ಭಂಗವನ್ನು ತಂದುದಕ್ಕಾಗಿ ಕೆರಳಿ ಕಣ್ಣುಗಳನ್ನು ಕೆಂಪುಮಾಡಿಕೊಂಡು ಮಹಾ ರೋಷದಿಂದ ಹತ್ತಿರದಲ್ಲಿದ್ದ ಮಂತ್ರಿಗಳ ಮುಖವನ್ನು ನೋಡಿ " ಸುಧನ್ವನೆಲ್ಲಿ ? ಭೇರೀಧ್ವನಿಯನು ಕೇಳಿದ ಮೇಲೂ ಬಾರದೆ ಇನ್ನೂ ತಡೆದಿರಲು ಕಾರಣವೇನು ! ದೂತರನ್ನು ಕಳುಹಿಸಿ ಒಡನೆ ಅವನನ್ನು ಪಾಶಗಳಿಂದ ಬಂಧಿಸಿ ಹಿಡಿತರಿಸಿರಿ " ಎಂದು ನುಡಿದನು. ಕೋಪಾಕ್ರಾಂತನಾದ ರಾಜನ ಆ ಆಜ್ಞೆಯನ್ನು ಕೇಳಿ ಸುಮತಿಯೆಂಬ ಮಂತ್ರಿಯು ಸಾವಕಾಶಮಾಡದೆ ದೂತರನ್ನು ಕಳುಹಿಸಲು ಅವರು ಅಲ್ಲಿಂದ ಹೊರಟು ಸುಧನ್ವನ ಅರಮನೆಯ ಸಮೀಪವನ್ನು ಸೇರಿ, ಆಗತಾನೆ ಅಲ್ಲಿಂದ ಹೊರಟು, ಯುದ್ಧಭೂಮಿಗಾಗಿ ನಡೆಯುತ್ತಿದ್ದ ಆ ರಾಜಪುತ್ರನನ್ನು ಕಂಡರು

ಅವನನ್ನು ಕಂಡೊಡನೆಯೇ ರಾಜಾಜ್ಞಾ ಪ್ರೇರಿತರಾದ ಆ ದೂತರು ರಾಜಪುತ್ರನೆಂದು ಗಮನಿಸದ, ತಡೆಬಡೆಯಿಲ್ಲದ ಅವನನ್ನು ಹಿಡಿದು, ಎರಡು ಕೈಗಳನ್ನೂ ಹಗ್ಗಗಳಿಂದ ಕಟ್ಟಿ ಸಮಸ್ತ ಪ್ರಜಜನರೂ ಆಶ್ಚರ್ಯಭಯಗಳಿಂದ ನೋಡುತ್ತಿರಲು ಕಳ್ಳನನ್ನು ಕರೆತರುವಂತೆ ರಾಜನೆಡೆಗೆ ಕರೆತರುತ್ತಿದ್ದರು. ಆಹಾ, ಮಹಾಶೂರನಾದ ಸುಧನ್ವನು ತಂದೆಯ ಆಜ್ಞೆಯಿಂದ ಬಂದ ಸೇವಕರನ್ನು [illegible] ಹಸು ಮಗುವಿನಂತ ವಶನಾದವನಲ್ಲನೇ ! [illegible]—ದೂತರು ಸುಧನ್ವನನ್ನು ಕರೆತಂದು ಮಹಾರಾಜನ ಸಮ್ಮುಖದಲ್ಲಿ ನಿಲ್ಲಿಸಿದರು ಕಳ್ಳನಂತೆ ಬಂಧಿಸಲ್ಪಟ್ಟು ನಿಂತಿದ್ದ ತನ್ನ ಮಗನನ್ನು ಹಂಸಧ್ವಜನು ಕಂಡು, ಕಣ್ಣುಗಳಿಂದ ಕಿಡಿಗೆದರುತ್ತ " ಎಲವೋ ಮೂರ್ಖ ಭೇರೀಧ್ವನಿಯನ್ನು ಕೇಳಿ [illegible] ತಡಯುದೆ ಯು

ದ್ಧರಂಗಕ್ಕೆ ಹೊರಡಬೇಕೆಂಬ ನನ್ನ ಆಜ್ಞೆಯನ್ನು ತಿಳಿದಿದ್ದೂ ಶ್ರೀಕೃಷ್ಣದರ್ಶನದ ದೀಕ್ಷೆಯನ್ನು ಅರಿತಿದ್ದೂ, ಕ್ಷತ್ರಿಯನಾದ ನೀನು ಯುದ್ಧದಲ್ಲಿ ಉತ್ಸಾಹವನ್ನು ತೊರೆದು ಪಟ್ಟಣದಲ್ಲಿ ನಿಂತು ಏಕೆ ಇಷ್ಟು ಸಾವಕಾಶ ಮಾಡಿದೆ ?'' ಎಂದು ಕೇಳಿದನು. ತಂದೆಯಮಾತನ್ನು ಕೇಳಿ ಸುಧನ್ವನು ಅಂಜುತ್ತಂಜುತ್ತಾ ಲಜ್ಜೆಯಿಂದಕೂಡಿದ ಮೆಲ್ಲುಡಿಯಿಂದ ತಲೆಯನ್ನು ತಗ್ಗಿಸಿ ಕೈಮುಗಿದುಕೊಂಡು "ನನ್ನ ಪತ್ನಿಯು ಸಂತತಿಯನ್ನು ಅಪೇಕ್ಷಿಸಿ, ಋತುಸಮಯವು, ಮುಂದೆ ಅವಕಾಶ ವೂದಗಲಾರದೆಂದು ಬಿನ್ನೈಸಿಕೊಳ್ಳಲು ಅಲ್ಲಿದ್ದೆನು'' ಎಂದು ಬಿನ್ನವಿಸಿದನು ಆ ಮಾತು ಧರ್ಮಿಷ್ಠನಾದ ರಾಜನಿಗೆ ಸಹಜವೆಂದು ತೋರಲಿಲ್ಲ. ತನ್ನಾ ಮಗನು ಕಾಮಪೀಡಿತನಾಗಿಯೇ, ಪತ್ನಿಯೊಂದಿಗೆ ನಿಂತನೆಂದು ಭಾವಿಸಿ, "ತಪ್ಪು ಅದು. ಇತ್ತ ಶ್ರೀಕೃಷ್ಣಮೂರ್ತಿಯ ದರ್ಶನದ ಸಮಯವು ಒದಗಿಸುತ್ತಿರಲಾಗಿ ಇತರ ಧರ್ಮಗಳನ್ನು ಗಮನಿಸತಕ್ಕ ವೇಳೆಯಲ್ಲವಿದು. ಇವನನ್ನು ಆಚೆಗೆನೂಕು ಪುರೋಹಿತ ಶಂಖಲಿಖಿತರನ್ನು ಕರೆ, ಇವನ ಈ ಅಪರಾಧಕ್ಕೆ ಪ್ರತೀಕಾರವೇನೆಂದು ವಿಚಾರಿಸೋಣ'' ಎಂದನು. ಒಡನೆ, ಶಂಖಲಿಖಿತರೆಂಬ ಪುರೋಹಿತರು ಬಂದು, ರಾಜನನ್ನು ಕುರಿತು, "ರಾಜೇಂದ್ರ, ನೀನು ಮೊದಲು ಮಾಡಿದ ಅಪ್ಪಣೆಯೇನು ? ಈಗ ಯೋಚಿಸುತ್ತಿರುವುದೇನು ? ಮಗನಮೇಲಿನ ಆಸೆಯಿಂದ ನೀನು ನಿನ್ನ ಪ್ರತಿಜ್ಞೆಗೆ ತಪ್ಪುವುದಾದರೆ ನಾವು ಅನ್ಯಾಯಮಯವಾದ ಈ ರಾಜ್ಯದಲ್ಲಿ ನಿಲ್ಲಲಾರೆವು ಸತ್ಯಾಚರಣೆಗಾಗಿ ರುಕ್ಮಾಂಗದ ಹರಿಶ್ಚಂದ್ರಾದಿಧರಾರಮಣರು ತಮ್ಮ ಮಕ್ಕಳನ್ನು ನೀಗಲಿಲ್ಲವೆ ?'' ಎಂದು ನಿಷ್ಠುರತೆಯಿಂದ ನುಡಿದರು.

ಪುರೋಹಿತರಾಡಿದ ಆ ಮಾತನ್ನು ಕೇಳಿ, ಹಂಸಧ್ವಜನು ಸುಮತಿಯೆಂಬ ಮಂತ್ರಿಯನ್ನು ಕರೆದು, "ಈ ಖೂಳನನ್ನು ಕಾದ ಎಣ್ಣೆಯ ಕೊಪ್ಪರಿಗೆಯಲ್ಲಿ ಮುಳುಗಿಸು. '' ಎಂದು ಆಜ್ಞಾಪಿಸಿದನು ಸುಮತಿಯು ರಾಜಾಜ್ಞೆಯನ್ನು ಮೀರಲರಿಯದೆ, ಅಲ್ಲೇ ನಿಂತಿದ್ದ ಸುಧನ್ವನ ಎರಡು ಕೈಗಳನ್ನು ಕಟ್ಟಿಸಿ, ಗಳಘಳನೆಂದು ಕುದಿಯುತ್ತಿದ್ದ ಎಣ್ಣೆಯಿಂದ ತುಂಬಿದ ಕೊಪ್ಪರಿಗೆಯ ಸಮೀಪಕ್ಕೆ ಕರೆತಂದು, ಕೆಳಗೆ ಉರಿಯುತ್ತಿದ್ದ ಒಲೆಗೆ ಮತ್ತೆನಾಲ್ಕು ಕೊರಡುಗಳನ್ನು ಹಾಕಿಸಿ ಅಗ್ನಿಯನ್ನು ಅಗಾಧವಾಗಿ ಹುತಗೊಳಿಸಿ, ಆಗ

ಲಜಿ ಹಸನ್ಮುಖದಿಂದಲೇ ನಿಂತಿದ್ದ ಸುಧನ್ವನನ್ನು ಕುರಿತು “ ಮಗೂ, ಸುಕುಮಾರನಾದ ನಿನ್ನ ವಿಷಯದಲ್ಲಿ ನಿನ್ನ ತಂದೆಯು ಇಷ್ಟು ಕ್ರೂರನಾಗಬಹುದೆ? ಅಲ್ಲದೆ ನೀನೇನು ಸಾಮಾನ್ಯನೇ? ಮಹಾಶೂರನು, ಸ್ವಾಭಿಮಾನಶೀಲನು, ಹರಿಭಕ್ತನು, ಮಾತಾಪಿತೃಭಕ್ತಿಯಲ್ಲಿ ನಿಸ್ಸೀಮನು, ನೀತಿವಿದನು, ಆಚಾರಶೀಲನು, ಸತ್ಯಸಂಕಲ್ಪನು, ಉತ್ತಮಗುಣ ಮಂಡಿತನು, ಇಂತಹ ನಿನ್ನನ್ನು ನಿಷ್ಕರುಣಿಯಾಗಿ ಹೀಗೆ ತಪ್ತತೈಲಕಟಾಹದಲಿ, ಕೆಡಹಲಿ, ಅಕಟಾ ಎಂತಹ ದುಷ್ಟಮನಸ್ಸು! ” ಎಂದು ಮರುಗುತ್ತಿದ್ದನು.

ಆಗ ಸುಧನ್ವನು ಮಂತ್ರಿಯನ್ನು ಕುರಿತು “ ಮಂತ್ರಿಶೇಖರಾ, ಇದಕ್ಕಾಗಿ ನೀನೇಕೆ ಇಷ್ಟು ವ್ಯಸನಗೊಂಡಿರುವೆ? ಈ ಸ್ಥಿತಿಗಾಗಿ ನಾನು ಧೈರ್ಯಗೆಡುವನಲ್ಲ! ನಾನು ಈವರೆಗೆ ಧರ್ಮಮಾರ್ಗವನ್ನು ತಪ್ಪಿ ನಡೆದುದಿಲ್ಲ. ಆದರೆ ಕ್ಷತ್ರಿಯನಾದವನು ಯುದ್ಧರಂಗದಲ್ಲಿ ಹೊಡೆದಾಟ ತೋರಿಸಬೇಕಾದ ಈ ಕ್ಷತ್ರಿಯತನವನ್ನು ಇಂತಹ ರೀತಿಯಲ್ಲಿ ತೋರಿಸಬೇಕಾಗಿ ಬಂದುದಕ್ಕಾಗಿ ಮರುಗುವನಲ್ಲದೆ ಬೇರೆಯಲ್ಲ. ಆದ್ದರಿಂದ ಬೆದರಬೇಡ. ನಾನು ಹರಿಯ ಪಾದಕಮಲಗಳನ್ನೇ ಶರಣುಹೋಗುತ್ತೇನೆ. ಹೇಗಾದರೂ ಜನಕನಾಜ್ಞೆಯು ಮೀರತಕ್ಕುದಲ್ಲ. ನೀನೂ ರಾಜಾಜ್ಞೆಯನ್ನು ನೆರವೇರಿಸತಕ್ಕುದು ಕರ್ತವ್ಯವು! ಚಿಂತಿಸದೆ, ಆ ರೀತಿ ಮಾಡು ” ಎಂದು ನುಡಿದು ನಿಶ್ಚಿಂತನಾಗಿದ್ದನು.

ಆ ಮಾತನ್ನು ಕೇಳಿ ಸುಮತಿಯು ನಾವಕಾಶಮಾಡದೆ, ಸುಧನ್ವನನ್ನು ಎತ್ತಿಸಿ ಥಳಥಳನೆಂದು ಕುದಿಯುತ್ತಿದ್ದ ಎಣ್ಣೆಯ ಕೊಪ್ಪರಿಗೆಯಲ್ಲಿ ಹಾಕಿಸಿದನು. ಆಹಾ! ಅದೇನಾಟವು! ಎಣ್ಣೆಯು ಕಾಯ್ದು ಸಳಸಳನೆಂದು ಕುದಿಯುತಿದೆ. ಸುತ್ತಲೂ “ ಹಾಯ್, ಅಯ್ಯೋ, ಅಕಟಾ ನಮ್ಮ ನಗರದಲ್ಲಿ ಇಂತಹ ಅನಾಹುತವೇ! ರಾಜನು ಹೆತ್ತಮಗನಮೇಲೂ ಇಷ್ಟು ನಿಷ್ಕರುಣಿಯಾಗಬಹುದೇ? ಅಕಟಾ ರಾಜನಿಗೆ ಯೋಜನೆಯನ್ನು ಹೇಳಿದ ಯಮೋಪಮರಾದ ಈ ಶಂಖಲಿಖಿತರು ಭೂಸುರಕುಲದಲ್ಲಿ ಏಕೆ ಜನಿಸಿದರೋ? ಇದೇನೀ ಅನ್ಯಾಯವು? ,, ಎಂದು ಪುರಜನ ಪರಿಜನರು ಪರಿಪರಿಯಿಂದ ಮರುಗುತ್ತಾ ಕಣ್ಣೀರಿಡುತ್ತಾ ನಿಂತಿದ್ದಾರೆ. ಸುಧನ್ವನು ಕಾಯ್ದು ಮರಳುತ್ತಿರುವ ಎಣ್ಣೆಯ ಕೊಪ್ಪರಿಗೆಯಲ್ಲಿ ಬಿದ್ದೊಡನೆಯೇ, ಎಲ್ಲರೂ ‘ ಹೋ ’ ಎಂದು

ಒಂದೇಆರ್ಭಟದಿಂದ ಕೂಗಿಕೊಂಡು, ' ಅಕಟಾ ಸತ್ತನು. ತಂದೇ, ಸುಕು ಮಾರಾ ರಾಜಪುತ್ರಾ, ನಿನಗೆ ಇಂತಹ ಮರಣವು ಸಂಭವಿಸಬಹುದೆ ! " ಎಂದು ಹಲುಬಿಕೊಂಡರು.

ಆದರೆ ಸುಧನ್ವನು ಮಹಾಭಕನು ವಿಷ್ಣುಭಕ್ತಾಗ್ರೇಸರನು ಆತನ ಆಪತ್ಕಾಲದಲ್ಲಿ ಯಾರೂ ತನ್ನನ್ನು ಕಾಪಾಡಲಾರರೆಂದೂ, ಮುರವೈರಿಯಾದ ದನುಜಾಂತಕನಾದ, ಪುರುಷೋತ್ತಮನಾದ ಶ್ರೀಹರಿಯೊಬ್ಬನಲ್ಲದೆ ತನ್ನನ್ನು ಬೇರೆಯಾರೂ ರಕ್ಷಿಸಲಾರರೆಂದೂ ತಿಳಿದನು. ದಹಕ್ಕಾದ ಎಣ್ಣೆಯಿಂದ ಆಗುತ್ತಿದ್ದ ಬಾಧೆಯನು ವನೋದಾರ್ಢ್ಯದಿಂದ ಮರೆದನು ಹೃದಯದಲ್ಲಿ ಶ್ರೀಹರಿಯ ದಿವ್ಯಸ್ವರೂಪವನ್ನು ನೆಲೆಗೊಳಿಸಿ ಬಾಯಲ್ಲಿ ಆ ಪಸದ್ಬಾಂಧವನ ದಿವ್ಯನಾಮಾವಳಿಗಳನ್ನು ಕೀರ್ತಿಸತೊಡಗಿದನು ' ಭಕ್ತವತ್ಸಲ, ಜನಾರ್ದನ, ಮುರಮರ್ದನ, ಗೋವಿಂದ, ದೇವಾದಿದೇವ, ಶರಣಾಗತರಕ್ಷೈಕಪರಾಯಣನಾದ ನೀನು, ಹಿಂದೆಬಾಲಕನಾದ ಪ್ರಹ್ಲಾದನನ್ನು ಪಾಲಿಸಿದೆಯಲ್ಲವೆ, ! ದ್ರುಪದರಾಜಕನ್ಯೆಯಾದ ಪಾಂಚಾಲಿಯ ಮಾನರಕ್ಷಣೆಗಾಗಿ ಅಕ್ಷಯವಸ್ತ್ರಗಳನ್ನು ಅನುಗ್ರಹಿಸಿದಯಲ್ಲವೆ ! ಜಯಲಕ್ಷ್ಮೀರಮಣ, ಜಯ ಗಜೇಂದ್ರ ಮೋಕ್ಷದಾಯಕ

ಜಯ ಜಯಜನಾರ್ದನ ಮುಕುಂದ ಮುರಮರ್ದನ ವಿ |
ಜಯಮಿತ್ರ ಗೋವಿಂದ ಪಕ್ಷಿವಾಹನ ಕಮಲ | [ಯಣ ||
ನಯನ ಪೀತಾಂಬರ ಘನಶ್ಯಾಮ ಹರಿಕೃಷ್ಣ ವೆಕುಂಠ ನಾರಾ
ಕ್ಷಯರಹಿತ ರಾಮ ಲಕ್ಷ್ಮೀರಮಣ ನತಜನಾ |
ಶ್ರಯಧೇನು ಭಕ್ತವತ್ಸಲ ಕೃಪಾಕರ ಮಹಾ | [ಮರೆಯದೆ ||
ಭಯನಿವಾರಣ ನೃಸಿಹ್ಮ ತ್ರಾಹಿಯೆನುತಿರ್ದ ನಾ ಸುಧನ್ವಂ

ಇಂತೆಂದು ಸುಧನ್ವನು ಭವಭಯ ನಿವಾರಕನಾದ ಶ್ರೀಹರಿಯ ಪಾದಪದ್ಮಗಳನ್ನು ಎಡೆಬಿಡದೆ ಧ್ಯಾನಿಸುತ್ತಿದ್ದನು ಆಹಾ ! ಆ ಆಶ್ಚರ್ಯವನ್ನೇನೆಂದು ಹೇಳೋಣ ! ಹತ್ತಿರ ನೂರುಗಜದ ಅಂತರದಲ್ಲಿ ಯಾರನ್ನೂ ನಿಲ್ಲಗೊಡಿಸದಷ್ಟು ಉಷ್ಣತೆಯಿಂದ ಕಾಯ್ದು ಕುದಿದು ಉಕ್ಕುತ್ತಿದ್ದ ಆ ಎಣ್ಣೆಯು ಆ ಹರಿಭಕ್ತಾಗ್ರೇಸರನಾದ ಸುಧನ್ವನ ಮೈಗೆ ತಣುವಾದ ಚಂದನಲೇಪದಂತಾಯಿತು. ಆ ರಾಜಪುತ್ರನ ಕೊರಳಲ್ಲಿದ್ದ ಎಳೆಯತುಲಸೀ ಮಾಲೆಯು ಹಾರವಾಗಲೀ, ಪತ್ತ

ಯು ಸಮರ್ಪಿಸಿದ್ದ ದಿವ್ಯ ಪರಿಮಳ ಕುಸುಮಹಾರವಾಗಲೀ ಒಂದೆಸಳೂ ಬಾಡ ಲಿಲ್ಲ. ಮುಖವು ಕಳಕಳಿಸುವ ಚಂದ್ರಮಂಡಲದಂತೆ ಶೋಭಿಸುತ್ತಿದೆ. ಇಂ ತು ಒಂದು ಹನಿಯು ಮೈಮೇಲೆ ಬಿದ್ದರೂ ಬೊಬ್ಬೆಏಳುವಂತೆ ಇದ್ದ ಆ ತಪ್ತ ತೈಲದ ಕಟಾಹದಲ್ಲಿ ಹರಿಭಕ್ತನಾದ ಸುಧನ್ವನು, ಜಲಕೇಳಿಗಾಗಿ ಪನ್ನೀರು ಕೊಳದಲ್ಲಿಳಿದು ಲೋಲನಾಗಿರುವವಂತೆ ತೋರುತ್ತಾ ಸುತ್ತಲಿದ್ದ ಸಕಲರಿಗೂ ಪರಮಾಶ್ಚರ್ಯವನ್ನುಂಟು ಮಾಡುತ್ತಿದ್ದನು.



## ಅಧ್ಯಾಯ ೪ "ಸುಧನ್ವ"

ಸಚ್ಚರಿತ್ರೆಯೆಂಬುದು ಯಾವನೊಬ್ಬನ ಕುಲಸ್ವಾಸ್ಥ್ಯವಲ್ಲ; ಅಥವ ಯಾವನೊಬ್ಬನು ಉತ್ತಮವರ್ಣದಲ್ಲಿ ಹುಟ್ಟಿರುವನಾದುದರಿಂದ ಅವನು ಸಚ್ಚ ರಿತನೆಂದು ಅರ್ಥವಲ್ಲ. ಅಂತೆಯೇ ಒಬ್ಬನು ಕೀಳುವರ್ಣದಲ್ಲಿ ಹುಟ್ಟಿರುವನಾ ದುದರಿಂದ ಮಾತ್ರವೇ ಅವನನ್ನು ದುಶ್ಚರಿತನೆಂದೂ ಹೇಳಲಾಗದು. ಉತ್ತ ಮ ಕೀಳುವರ್ಣಗಳು ಪ್ರಾಪಂಚಿಕ ವ್ಯವಹಾರದಲ್ಲಿ ಏರ್ಪಟ್ಟ ವ್ಯವಸ್ಥೆಗಳು. ಭಗವಂತನ ಎದುರಿನಲ್ಲಿ ಗಣ್ಯವಾಗತಕ್ಕುವು ವರ್ಣ ಜಾತಿ ಮತ ಕುಲಗಳಲ್ಲ; ಗುಣ ನಡತೆಗಳು ! ಗುಣ ನಡತೆಗಳಲ್ಲಿ ಶ್ರದ್ಧಾ ಭಕ್ತಿಗಳಲ್ಲಿ ದಯೆ ದಾತೃತ್ವ ಗಳಲ್ಲಿ, ಪಾಪಭೀತಿ ಭೂತ ದಯೆಗಳಲ್ಲಿ ಶ್ರೇಷ್ಠನೆನಿಸತಕ್ಕವನು ಪ್ರಾಪಂಚಿಕ ಜಾತಿ ಕುಲಗಳ ದೃಷ್ಟಿಯಿಂದ ಕೀಳ್ಪಟ್ಟವನಾದರೂ ಭಗವದ್ದೃಷ್ಟಿಯಲ್ಲಿ ಉ ತ್ತಮನೇ ! ಅವುಗಳಲ್ಲಿ ಅಧಮನೆನಿಸತಕ್ಕವನು ತನ್ನ ಜನ್ಮಸಿದ್ಧ ಜಾತಿ ಕುಲ ಗಳಿಂದ ಮಾತ್ರವೇ ಪೂಜ್ಯತೆಯನ್ನು ಹೊಂದಲಾರನು.

ಹಂಸಧ್ವಜರಾಜನ ಸಮೀಪದಲ್ಲಿ ಪುರೋಹಿತರಾಗಿದ್ದ ಶಂಖಲಿಖಿತರೆಂಬಿ ಬ್ಬರೂ ಅಣ್ಣತಮ್ಮಂದಿರು, ತಪಸ್ವಿಗಳು, ಬ್ರಹ್ಮನಿಷ್ಠರು. ಸತ್ಯವಾಕ್ಸಂಪ ನ್ನರು. ಪೂರ್ವಯುಸ್ಸಿನಲ್ಲಿ ಅವರಿಬ್ಬರೂ ಹಂಸಧ್ವಜನ ಆಡಳಿತಕ್ಕೆ ಒಳಪ ಟ್ಟಿದ್ದ ಒಂದಾನೊಂದು ತಪೋವನ ಪ್ರಾಂತದಲ್ಲಿ ವಾಸಿಸಿ, ತಪೋನುಷ್ಠಾನ- ವೇದಾಭ್ಯಾಸಗಳನ್ನು ಮಾಡಿ ಕೊಂಡಿದ್ದರು, ಒಂದಾನೊಂದುದಿನ ಲಿಖಿತನು,

ಶಂಖನು ಆಶ್ರಮದಲ್ಲಿಲ್ಲದಿದ್ದ ವೇಳೆಯಲ್ಲಿ ಅಕಸ್ಮಾತ್ತು ಆತನ ಆಶ್ರಮವನ್ನು ಪ್ರವೇಶಿಸಿದನು. ಅಲ್ಲಿ ಚೆನ್ನಾಗಿ ಕಳಿತು ಆಗತಾನೆ ಮರದಿಂದ ಉದಿರಿದ್ದ ಮನೋಹರವಾದ ಮಾವಿನ ಹಣ್ಣುಗಳು ಅವನ ಕಣ್ಣಿಗೆಬಿದ್ದುವು. ಅವುಗಳನ್ನು ಕಂಡೊಡನೆಯೇ ಬಾಯಲ್ಲಿ ನೀರೂರ ತೊಡಗಿತು. ತಿನ್ನಬೇಕೆಂದು ಆಸೆಯಾಯಿತು. ಒಡನೆ ಅವುಗಳನ್ನು ತೆಗೆದುಕೊಂಡು ತಿನ್ನಲಾರಂಭಿಸಿದನು ಅಷ್ಟರಲ್ಲಿ ಅಣ್ಣನಾದ ಶಂಖನು ಆಶ್ರಮವನ್ನು ಹೊಕ್ಕು ತಾನು ಇಲ್ಲದಿದ್ದ ವೇಳೆಯಲ್ಲಿ ತನ್ನ ತಮ್ಮನು ಮಾಡಿದ ಕೆಲಸಕ್ಕಾಗಿ ಕೋಪಿಸಿ ಅವನು ಮಾಡಿದ ಆ ಕಳುವಿನ ತಪ್ಪಿತಕ್ಕೆ ಧರ್ಮಶಾಸ್ತ್ರ ರೀತ್ಯಾ ಆಗಬೇಕಾದ ಶಿಕ್ಷೆಯನ್ನು ರಾಜನಿಂದ ಅನುಭವಿಸಿ ಬರಬೇಕೆಂದು ತಮ್ಮನನ್ನು ರಾಜನಲ್ಲಿಗೆ ಕಳುಹಿಸಿದನು ಹಂಸಧ್ವಜನು ಲಿಖಿತನ ವಾಙ್ಮೂಲವನ್ನು ಕೇಳಿ ವಿಷಾದಪಟ್ಟು 'ಅಕಟಾ ತಮ್ಮಂತಹ ತಪೋನಿಷ್ಠರಿಗೆ ಅಂತಹ ಘೋರಶಿಕ್ಷೆಯನ್ನು ವಿಧಿಸುವುದೆಂತು !' ಎಂದು ನಿವಾರಿಸಲು ಯತ್ನಿಸಿದನಾದರೂ ಪ್ರಯೋಜನವಾಗಲಿಲ್ಲ ಲಿಖಿತನು ತನಗೆ ಶಿಕ್ಷೆಯನ್ನು ವಿಧಿಸಿಯೇ ತೀರಬೇಕೆಂದು ಹಟಹಿಡಿದನು ಕೊನೆಗೆ ಉಪಾಯವಿಲ್ಲದೆ ರಾಜನು ಕಳುವಿಗೆ ಧರ್ಮಶಾಸ್ತ್ರದಲ್ಲಿ ವಿಧಿಸಿದ್ದ ಮೇರೆಗೆ ಆತನ ಹಸ್ತಗಳೆರಡನ್ನೂ ಛೇದಿಸಿಬಿಟ್ಟನು. ತರುವಾಯ ಲಿಖಿತನು ಕತ್ತರಿಸಲ್ಪಟ್ಟ ಕೈಗಳೊಂದಿಗೆ ತನ್ನ ಅಣ್ಣನಲ್ಲಿಗೆ ಬಂದು, ತಾನು ತನ್ನ ತಪ್ಪಿಗಾಗಿ ರಾಜದಂಡದಿಂದ ಶುದ್ಧನಾದೆನೆಂದು ತಿಳಿಸಲು, ಶಂಖನು ತನ್ನ ತಮ್ಮನ ಸ್ಥಿತಿಗಾಗಿ ಮರುಗಿ ಪುನಃ ಅದಕ್ಕಾಗಿ ಘೋರವಾದ ತಪಸ್ಸನ್ನು ಮಾಡಿ ದೇವತೆಗಳನ್ನು ಮೆಚ್ಚಿಸಿ ತನ್ನ ತಮ್ಮನ ಕೈಗಳೆರಡನ್ನೂ ಪಡೆದುಕೊಟ್ಟನು ಹಂಸಧ್ವಜನು ಆ ವೃತ್ತಾಂತವನ್ನು ಕೇಳಿ ಪರಮಸಂತೋಷದಿಂದ ಅವರ ಆಶ್ರಮಕ್ಕೆ ಬಂದು ನ್ಯಾಯಪಕ್ಷಪಾತಿಗಳಾದ ಆ ಅಣ್ಣತಮ್ಮಂದಿರಾದ ತಪಸ್ವಿಗಳನ್ನು ಪ್ರಾರ್ಥಿಸಿ ತನ್ನಲ್ಲಿ ಪುರೋಹಿತರಾಗಿರಬೇಕೆಂದು ಒಡಂಬಡಿಸಿ ತನ್ನೊಂದಿಗೆ ರಾಜ್ಯಕ್ಕೆ ಕರೆದುಕೊಂಡು ಹೋದನು

ಪೂರ್ವಾಧ್ಯಾಯದ ಅಂತ್ಯಭಾಗದಲ್ಲಿ ಕಂಡಂತೆ ಕಾದೆಣ್ಣೆಯ ಕೊಪ್ಪರಿಗೆಯಲ್ಲಿದ್ದರೂ ಸೂರ್ಯೋದಯದಿಂದ ಪ್ರಕಾಶಗೊಂಡ ಕಮಲವೋ ಎಂಬಂತೆ ಹಸನ್ಮುಖದಿಂದ ಶೋಭಿಸುತ್ತಿದ್ದ ಸುಧನ್ವನನ್ನು ಕಂಡು ಸುತ್ತಲಿದ್ದ ಸಮಸ್ತ ಪರಿವಾರವೂ ಆಬಾಲವೃದ್ಧರಾಗಿ ಭಕ್ತರ ಆಪನ್ನಿವಾರಕನಾದ ಪುಂಡರೀಕಾ

ಕ್ಷನಾದ ಶ್ರೀಹರಿಯನ್ನು ಪರಮಾನಂದದಿಂದ ಪರಿಪರಿಯಾಗಿ ಸ್ತುತಿಸತೊಡ ಗಿದರು ಅದನ್ನು ಕಂಡು ಲಿಖಿತನು ಕುಪಿತನಾದನು ಹರಿಭಕ್ತಿಯ ಮಹಿ ಮೆಯಿಂದ ಹೀಗಾಯಿತೆಂಬುದೂ, ಭಕ್ತನಾದ ಸುಧನ್ವನು ತನ್ನ ಆತ್ಮದೈ ವವನ್ನು ಪ್ರಾರ್ಥಿಸಿ ತನ್ಮೂಲಕ ಸುರಕ್ಷಿತನಾಗಿದ್ದಾನೆಂಬುದೂ ಆತನ ಸ್ಮರ ಣೆಗೆ ಬರಲಿಲ್ಲ, ಅವನು ಅಗ್ನಿಸ್ತಂಭವಿದ್ಯೆಯ ಬಲದಿಂದ ತನ್ನ ಸಲಹೆಯನ್ನು ನಿರಾಕರಿಸಲು ಈ ರೀತಿ ಮಾಡಿದ್ದಾನೆಂದು ಭಾವಿಸಿ, ನೂರಾರು ಎಳನೀರುಗಳ ನ್ನು ತರಿಸಿ ಅವುಗಳ ನೀರನ್ನು ಆ ಕಾದಎಣ್ಣೆಯಲ್ಲಿ ಸುರಿಸಿದನು, ಒಡನೆ ಅ ಗಾಧವಾದ ಜ್ವಾಲೆಯು ಅಂತರಿಕ್ಷದವರೆಗೂ ಎದ್ದಿತು ಆಗಲೂ ಸುಧನ್ವನು ಹಾಗೆ ಕಾಯ್ದು ಕುದಿಯುತ್ತಿರುವ ಎಣ್ಣೆಯ ಕಟಾಹದ ಮಧ್ಯದಲ್ಲಿದ್ದರೂ ನಿ ಶ್ಚಲಸ್ವದಮನನಾಗಿ ವಿಷ್ಣುನಾಮಗಳನ್ನು ಪುನಶ್ಚರಣೆ ಮಾಡಿಕೊಳ್ಳುತ್ತಾ, ನಿ ಶ್ಚಿಂತನಾಗಿದ್ದುದನ್ನು ಕಂಡು, ಧೂರ್ತನಾದ ತನ್ನ ದುಶ್ಚೇಷ್ಟೆಗಾಗಿ ಮರುಗಿ "ಛೀ ನನ್ನ ಜನ್ಮಕ್ಕೆ ಧಿಕ್ಕಾರವು, ಹರಿಭಕ್ತನಾದ ಈತನ ವಿಷಯದಲ್ಲಿ ಇಂತಹ ದ್ರೋಹವನ್ನು ಆಚರಿಸಿದ ನನಗೆ ಪ್ರಾಣಾಂತ ಶಿಕ್ಷೆಯಲ್ಲದ ಬೇರೇ ನಿಷ್ಕೃತಿ ಯೇ ಇಲ್ಲವೆಂದು ಒಡನೆಯೇ ತಾನೂ ಆ ಕೊಪ್ಪರಿಗೆಯಲ್ಲಿ ಧುಮುಕಿಬಿಟ್ಟನು

ಆಹಾ ಆಗಿನ ಆ ಆಶ್ಚರ್ಯವನು ಏನೆಂದು ಹೇಳುವುದು! ಸುತ್ತಲೂ ಇ ದ್ದ ಪರಿವಾರವೂ, "ಹಾ ಘಾತವಾಯಿತು. ನಮ್ಮ ರಾಜನಿಗೆ ಈ ಬ್ರಹ್ಮಹತ್ಯೆ ಯು ಘಟಿಸಿವಿರಸು, ಅಕಟಾ, ಇದೇನು ಅನ್ಯಾಯವು ಅಯ್ಯೋಬ್ರಾಹ್ಮ ಣರು ಬೆಂದು ಹೋದರಲ್ಲಾ" ಎಂದು ಮರುಗುತ್ತಿದರು ಆದರೆ, ಆ ತೈ ಲವು, ವಾಸ್ತವವಾಗಿ ಭೌತಿಕ ಉಷ್ಣದಿಂದ ಹತ್ತಿರ ನಿಲ್ಲಲಾರದಷ್ಟು ಮಟ್ಟಿ ಗೆ ಕಾಯ್ದಿದ್ದರೂ ಹರಿಭಕ್ತನಾದ ಸುಧನ್ವನ ದೇಹಸ್ಪರ್ಶದಿಂದ ಶೀತಳತೆಯ ನ್ನು ಹೊಂದಿದ್ದುದರಿಂದ ಲಿಖಿತನ ದೇಹಕ್ಕೂ ಯಾವ ಬಾಧೆಯನ್ನೂ ಉಂಟು ಮಾಡಲಿಲ್ಲ ಆ ಇಬ್ಬರೂ ಕುದಿವ ಎಣ್ಣೆಯ ಕೊಪ್ಪರಿಗೆಯಲ್ಲಿ ಸುರಕ್ಷಿತವಾಗಿ ದ್ದುದನ್ನು ಕೇಳಿ ಹಂಸಧ್ವಜನು ಅಲ್ಲಿಗೆ ಬಂದು, ಹೊರಕ್ಕೆ ತೆಗೆಯಿಸಿ, ಪ್ರೀತಿ ಯಿಂದ ಇಬ್ಬರನ್ನೂ ತಕ್ಕೈಸಿ ಆದರಿಸಿದನು

ಆಗ ಲಿಖಿತನು ರಾಜನನ್ನು ಕುರಿತು, "ರಾಜೇಂದ್ರಾ, ಹರಿಭಕ್ತನಾದ ನಿನ್ನೀ ಮಗನ ಸಾನ್ನಿಧ್ಯದಿಂದ ಈ ರಾಜ್ಯವೂ, ಇಲ್ಲಿ ವಾಸಿಸುವ ಪ್ರಜೆಪರಿವಾರ ಗಳೂ ನಿನ್ನ ಈ ಆನೆ ಕುದುರೆಗಳೂ ಪಶುಪಕ್ಷಿ ಮೃಗಾದಿಗಳೂ, ಈ ರಾಜ್ಯದ

ಲ್ಲಿರುವ ತರುಗುಲ್ಮ ಲತೆಗಳೂ ಸಮಸ್ತವೂ ಪಾವನವಾದುವು. ಎಲ್ಲರೂ ಅನುಗೃಹೀತರಾದೆವು. ಇಂತಹ ಈ ಮಹಾನುಭಾವನ ಭಕ್ತಿ ಭಾಗ್ಯವನ್ನು ಕಾಣಲಾರದೆ ಅಂಧನಾದ ನಾನು, ಈ ವೈಷ್ಣವ ಶಿರೋಮಣಿಗೆ ದ್ರೋಹ ಮಾಡಿದೆನು,” ಎಂದು ಪರಿಪರಿಯಿಂದ ಮರುಗಿದನು. ರಾಜನು, ಅವಕ್ಕಾಗಿ ಚಿಂತಿಸಲಾಗದೆಂದು ಆತನನ್ನು ಸಮಾಧಾನಗೊಳಿಸಿ ಮಗನನ್ನೂ ಯುಕ್ತ ವಚನಗಳಿಂದ ಆದರಿಸಿದನು. ತರುವಾಯ ಸುಧನ್ವನು ಮಂಗಳಮಜ್ಜನವನ್ನು ಮಾಡಿ, ದಿವ್ಯವಸ್ತ್ರಾಭರಣ ಗಂಧಪುಷ್ಪಾದಿಗಳಿಂದ ಅಲಂಕೃತನಾಗಿ ರಾಜಸನ್ನಿಧಿಗೆ ಬರಲು, ಆತನನು ಕಂಡ ಸಭೆಯೆಲ್ಲವೂ ಮಹದಾನಂದದಿಂದ ಆ ರಾಜಪುತ್ರನನ್ನು ಹಾಡಿ ಹರಸಿದರು. ಆಗ ಶಂಖನು, “ರಾಜೇಂದ್ರಾ, ಶುಭಕರವಾದ ಸಜ್ಜನರಿಗೆ ಕಷ್ಟವು ಪ್ರಾಪ್ತವಾಗುವುದೇ? ಒಂದುವೇಳೆ ಪ್ರಾಪ್ತವಾದರೂ ಸೂರ್ಯನ ಮುಂದಿನ ಮಂಜಿನರಾಶಿಯಂತೆ ಕ್ಷಣಮಾತ್ರದಲ್ಲಿ ಕರಗಿ ಹೋಗದೆ ಅವರನ್ನು ನಿರಂತರವಾಗಿ ಬಾಧಿಸುವುದೇ? ಪ್ರಕೃತಿಯಲ್ಲಿ ಗ್ರೀಷ್ಮ ಕಾಲದ ಬಿಸಿಲಬೇಗೆಯಾದರೂ ಅದರಿಂದ ಬೆಳೆಗಳಿಗೆ ಬೆಸುಗೆಯೇ? ಅಂತೆಯೇ ಗುಣವಾಗಿದೆ. ಮಹಾಹರಿಭಕ್ತನಾದ ಈ ನಿನ್ನ ಮಗನ ಸತ್ವಸ್ಥಿತಿಯನು ತಿಳಿಯಲಾರದೆ ನಾವು ಈವರೆಗೂ ಮರುಳರಾಗಿದ್ದೆವು. ಇನ್ನು ಹೆಚ್ಚು ಮಾತುಗಳಿಂದಲೇನು! ಈತನನ್ನು ಸ್ವೀಕರಿಸಿ, ಯುದ್ಧರಂಗಕ್ಕೆ ಕಳುಹು” ಎಂದು ನುಡಿದನು.

ಗುಣಪಕ್ಷಪಾತಿಯಾದ ತನ್ನ ಪುರೋಹಿತನಾಡಿದ ಆ ಹಿತವಾಕ್ಯವನ್ನು ಕೇಳಿ ಸಂತುಷ್ಟನಾದ ಹಂಸಧ್ವಜನು ಮಗನನ್ನು ಸಮೀಪಕ್ಕೆ ಕರೆದು ಅಪ್ಪಿ ಆದರಿಸಿ “ಅರಿವೀರರನ್ನು ಜಯಿಸು, ಶುಭವಾಗಲಿ, ಇನ್ನು ಹೊರಡು” ಎಂದು ಆಶೀರ್ವದಿಸಿ, ಯುದ್ಧರಂಗಕ್ಕೆ ಹೋಗಲು ಅನುಮತಿಯನ್ನು ಕೊಟ್ಟನು. ಆಗ ಸುಧನ್ವನು, ಪುನಃ ತಂದೆಯ ಮತ್ತು ಗುರುವರ್ಯರಾದ ಪುರೋಹಿತ ಶಂಖಲಿಖಿತರ ಪಾದಗಳಿಗೆ ನಮಸ್ಕರಿಸಿ ಅವರ ಆಶೀರ್ವಾದಗಳನ್ನು ಪಡೆದು ವಂದಿಮಾಗಧರು, ಜಯಜಯವೆಂದು ಕೀರ್ತಿ ಹೊಗಳುತ್ತಿರಲು, ತನ್ನ ಎತ್ತರವಾದ ಹೊಂದೇರಬಳಿಗೆ ಬಂದು ಕುದುರೆಗಳನ್ನು ಸೇವಿಸಿ, ಸಾರಥಿಯನ್ನು ಆದರಿಸಿ, ರಥಾರೂಢನಾಗಿ ಪಾಂಡವಾಗ್ರಣಿಯಾದ ಧನಂಜಯನೊಂದಿಗೆ ಯುದ್ಧಕ್ಕೆ ನಡೆದನು.

ನಾನಾವಿಧ ವರ್ಣಯುಕ್ತವಾಗಿ ರಂಜಿಸುತ್ತಿದ್ದ ದಿವ್ಯಪತಾಕೆಗಳಿಂದ ಶೋಭಿಸುವ ರಥಗಳು, ಮದೋದಕವನ್ನು ಧಾರಾಳವಾಗಿ ಸುರಿಸುತ್ತಿದ್ದ ಪರ್ವತಸಮಾನವಾದ ಆನೆಗಳು, ವೇಗಶಾಲಿಗಳಾದ ಕುದುರೆಗಳು, ಸ್ವಾಮಿ ಭಕ್ತರಾದ ಪದಾತಿವರ್ಗ ಇವುಗಳಿಂದ ಕೂಡಿದ ತನ್ನ ಸೈನ್ಯವನ್ನು ಸುಧನ್ವನು ಪದ್ಮವ್ಯೂಹವಾಗಿ ನಿಲ್ಲಿಸಿ, ಯಜ್ಞಾಶ್ವವನ್ನು ಅದರ ಮಧ್ಯದಲ್ಲಿ ಬಿಟ್ಟುಕೊಂಡು, ಪಾರ್ಥನಸೇನೆಯೊಂದಿಗೆ ಯುದ್ಧವನ್ನು ಆರಂಭಿಸುವ ಸಿದ್ಧತೆಯನ್ನು ಸೂಚಿಸುವಂತೆ ರಣಭೇರಿಯನ್ನು ಹೊಡೆಯಿಸಿದನು.

ಇತ್ತ ಹಂಸಧ್ವಜನ ಸೇನೆಯಲ್ಲಾಗುತ್ತಿದ್ದ ಈ ಯುದ್ಧಸಿದ್ಧತೆಯನ್ನು ಕಂಡು ಅರ್ಜುನನು ಶ್ರೀಕೃಷ್ಣಪುತ್ರನೂ ತನ್ನ ಸೈನ್ಯಾಧಿಪತಿಯೂ ಆದ ಪ್ರದ್ಯುಮ್ನನನ್ನು ಕರೆದು, ಈಗ ಪ್ರಾಪ್ತವಾದ ಈ ವಿಘ್ನಕ್ಕೆ ಪರಿಹಾರವೇನೆಂದು ಪ್ರಶ್ನಿಸಿದನು ಆ ಮಾತಿಗೆ ಪ್ರದ್ಯುಮ್ನನು ಹುಸಿನಗುವನ್ನು ನಕ್ಕು, "ಇದೇನು ವಿಘ್ನವು ! ಇದಕ್ಕಾಗಿ ಅಷ್ಟುಮಟ್ಟಿಗೆ ಯೋಚಿಸಬೇಕಾದುದೇಕೆ ?" ಎಂದು ತನ್ನ ಯಾದವಸೇನೆಯ ಮುಖ್ಯ ಮುಖ್ಯ ವೀರರಾದ, ಸಾತ್ಯಕಿ, ಸಾಂಬ, ಕೃತವರ್ಮ, ಅನಿರುದ್ಧ ಮುಂತಾದವರನ್ನೂ ಲೆಕ್ಕವಿಲ್ಲದಷ್ಟು ಆನೆ ಕುದುರೆ ರಥ ಕಾಲಾಳುಗಳ ಸೇನೆಯನ್ನೂ ಸೇರಿಸಿಕೊಂಡು ಸರ್ವಸನ್ನಾಹದಿಂದ ಸುಧನ್ವನ ಸೇನೆಗೆದುರಾಗಿ ನಡೆಯಲನುವಾದನು. ಅಷ್ಟರಲ್ಲಿ, ಕರ್ಣಸುತನಾದ ವೃಷಕೇತುವು, ಅರ್ಜುನನ ಸಮೀಪಕ್ಕೆ ಬಂದು, "ತಂದೆಯೇ ಈ ಕ್ಷುದ್ರ ಶತ್ರುವಿನೊಂದಿಗೆ ಕಾದುವುದಕ್ಕೆ ಇಷ್ಟುಮಂದಿ ಸೈನಿಕರನ್ನೂ ಆನೆ ಕುದುರೆಗಳನ್ನೂ ನೋಯಿಸಲೇಕೆ ? ನನಗೆ ಅಪ್ಪಣೆಯನ್ನು ಕೊಟ್ಟು ಕಳುಹಿಸಿರಿ, ಕ್ಷಣಮಾತ್ರದಲ್ಲಿ ಇವನ ಬಿಂಕವನ್ನು ಮುರಿದು ಕುದುರೆಯನ್ನು ತಂದು ಕೊಡದಿದ್ದರೆ ನಾನು ವೀರಾಗ್ರಣಿಯಾದ ಕರ್ಣನ ಮಗನೆನಿಸಿಕೊಳ್ಳಲು ಯೋಗ್ಯನೆ" ಎಂದು ಮುಂತಾಗಿ ವೀರಾಲಾಪಗಳನ್ನು ಹೇಳಿಕೊಂಡನು. ಆ ಮಾತಿಗೆ ಅರ್ಜುನನು ಅತ್ಯಂತ ಸಮಾಧಾನಪಟ್ಟು, ಅನುಮತಿಯನ್ನು ಕೊಡಲು, ವೃಷಕೇತುವು ಸಿಂಹನಾದ ಮಾಡುತ್ತಾ, ತನ್ನ ಧನುಸ್ಸನ್ನು ಜೇವಡೆಯುತ್ತಾ, ರಥಾರೂಢನಾಗಿ ಸುಧನ್ವನಿಗೆ ಎದುರಾಗಿ ನಡೆದನು.

ಸುಧನ್ವನು ದೂರದಿಂದಲೇ ವೃಷಕೇತುವಿನ ರಥವನ್ನು ಕಂಡನು. ತನ್ನ ಮೇಲೆ ಏಕಾಕಿಯಾಗಿ ಬರುತ್ತಿರುವ ವೀರನಾರೆಂಬುದು ತಿಳಿಯಲಿಲ್ಲ, "ಇವ

ನಾರಿರಬಹುದು ! ಅರ್ಜುನನಲ್ಲ, ಅರ್ಜುನನಿಗೆ ಕಪಿಧ್ವಜವಿರುವುದು ! ಈ ರಥವು ವೃಷಭಾಂಕಿತದಿಂದ ಶೋಭಿಸುತ್ತಿರುವುದು ಪಾಂಡವರಲ್ಲಿ ಯಾವನೋ ವೀರನಿರಬಹುದು." ಎಂದುಕೊಂಡು ಸರ್ವಸಿದ್ಧತೆಯಿಂದ ಇದ್ದನು ಅಷ್ಟರಲ್ಲಿ ಬಂದು ಪ್ರಾಪ್ತನಾದ ವೃಷಕೇತುವನ್ನು ಕುರಿತು "ಎಲೈವೀರನೇ ನೀನಾರು, ಯಾರಮಗನು, ಯಾವಋಷಿಕುಲಕ್ಕೆ ಸೇರಿದವನು ! ನನ್ನ ಕುಲಶೀಲಗಳನ್ನು ಹೇಳುವೆನು ಕೇಳು, ನಾನು ವೀರಾಗ್ರಣಿಯಾದ ಹಂಸಧ್ವಜನ ಮಗನು, ನನ್ನ ಹೆಸರು ಸುಧನ್ವನು. ಮಹಾತ್ಮನಾದ ಮುಚುಕುಂದನೆಂಬ ಮುನಿಶ್ರೇಷ್ಠನಿಂದ ನಮ್ಮ ಕುಲವು ಪ್ರಸಿದ್ಧವಾಯಿತು." ಎಂದು ಹೇಳಿಕೊಳ್ಳಲು, ವೃಷಕೇತುವು, ಆವನನ್ನು ಕುರಿತು, "ಎಲೈ ಯುದ್ಧಕ್ಕೆ ಸಿದ್ಧರಾಗಿರುವಾಗ, ನಮ್ಮ ನಮ್ಮ ಸತ್ವದಿಂದ ಪರಿಚಿತರಾಗತಕ್ಕುದು ಸಹಜವಲ್ಲದೆ, ಈ ಕುಲಶೀಲಾದಿಗಳ ವಿಚಾರದಿಂದ ಪ್ರಯೋಜನವೇನು ! ಆದರೂ ಕೇಳು ಮಹಾಪುರುಷನಾದ ಕಶ್ಯಪಪ್ರಜಾಪತಿಯಿಂದ ಪ್ರತಿಷ್ಠಿತವಾದ ಕುಲದಲ್ಲಿ ದಿನಮಣಿಯೆಂಬ ರೂಢನಾಮದಿಂದ ಪ್ರಖ್ಯಾತನಾದ ಸೂರ್ಯಭಗವಾನನನ್ನು ಕೇಳಿಬಲ್ಲೆಯಷ್ಟೆ ! ಆತನ ಮಗನೂ, ಮಹಾವೀರಾಗ್ರಣಿಯೂ ಆದ ಕರ್ಣನೇ ನನ್ನ ತಂದೆಯು, ನನ್ನ ಹೆಸರು ವೃಷಕೇತುವು" ಎಂದು ಪ್ರತ್ಯುತ್ತರವಿತ್ತನು

ಹೀಗೆ ಆ ವೀರರಿಬ್ಬರೂ ಪರಸ್ಪರ ಪರಿಚಿತರಾಗಲು, ಸುಧನ್ವನು, "ಓಹೋ ನೀನು ಕರ್ಣಸುತನಾದ ವೃಷಕೇತುವೋ ಹಾಗಿದ್ದರೆ ವೀರನೇಸರಿ." ಎಂದು ನುಡಿದು, ಹೊಸದಾಗಿ ಸಾಣೆಹಿಡಿದ ಹರಿತವಾದ ಬಾಣಗಳನ್ನು ಆಕರ್ಣಾಂತವಾಗಿ ಎಳೆದು ಆ ವೀರನಮೇಲೆ ಪ್ರಯೋಗಿಸಿದನು ಇಂತು ಯುದ್ಧ ಪ್ರಾರಂಭವಾಯಿತು ಸರಿ ಬಡಸಿ ಹೇಳುವುದೇನು ? ಉಭಯರೂ ವೀರರು, ಉಭಯರೂ ಅಸಹಾಯಶೂರರು, ಬಲಪೂರ್ಣರು ! ವರ್ಷಕಾಲದ ಎರಡು ಮೇಘಗಳು ಒಂದಕ್ಕೊಂದು ಎದುರಾದಂತೆ ತೋರಿತು ಆ ಎರಡು ಮೇಘಗಳು ಒಂದಾದಾಗ ಪರಸ್ಪರ ಘರ್ಷಣೆಯಿಂದ ಎಂತು ಸಿಡಿಲುಗಳು ಉದ್ಭವಿಸಿ, ಮಳೆಯು ಸಾಗೋದ್ದಾನಗಳಾಗುವಂತೆ, ಉಭಯ ವೀರರೂ ಗುಡುಗಿನಂತೆ ಆರ್ಭಟಿಸಿ ಸಿಂಹನಾದವಮಾಡುತ್ತಾ, ಮಿಂಚಿನಂತೆ ಹೊಳೆಹೊಳೆವ ದಿವ್ಯಾಯುಧಗಳನ್ನು ಒಬ್ಬರಮೇಲೊಬ್ಬರು ಅವಿರಳವಾಗಿ ಪ್ರಯೋಗಿಸುತ್ತಾ, ಶಿವಲಿನಂತೆ ಒಬ್ಬರಮೇಲೊಬ್ಬರು ಎರಗುತ್ತಿರಲು, ಆ ಇಬ್ಬರ ಧನುಸ್ಸುಗಳಿಂದಲೂ

ಬಾಣವರ್ಷಗಳು ಅವಿರಳವಾಗಿ ಸುರಿಯುತೊಡಗಿದುವು. ಒಬ್ಬರನ್ನೊಬ್ಬರು ಮೂದಲಿಸುವರು, ಒಬ್ಬರನ್ನೊಬ್ಬರು ಜಯಿಸಲು ಹೆಣಗುವರು. ವೃಷಕೇತುವು "ಎಲವೋ ಭೂಮಿಯಲ್ಲಿ ಅತಿಭಯಂಕರನಾದ ನಾನು ಅನ್ವರ್ಥನಾಮಧೇಯನಾಗಿ ಸುಧನ್ವನೆನಿಸಿ ಇರುತ್ತಿರುವಲ್ಲಿ ಪುನಃ ಸುಧನ್ವನೆಂಬ ಈ ನಿನ್ನ ಹೆಸರಿನಿಂದ ಪ್ರಯೋಜನವೇನು" ಎಂದು ಮೂದಲಿಸಿ, ಹರಿತವಾದ ಬಾಣಗಳನ್ನು ಆಕರ್ಣಾಂತವಾಗಿ ಸೆಳೆದುಬಿಡುವನು. ಸುಧನ್ವನು, "ಎಲವೋ ಮರುಳೆ, ಭೂಮಿಯಲ್ಲಿ ಶತ್ರುಗಳೆಂಬ ಸಂಚಬಾಣನಿಗೆ ವೃಷಭಧ್ವಜಸದೃಶನಾದ ನಾನಿರುತ್ತಿರಬಾಗಿ ಕೇವಲ ನಾಮಧಾರಿಯಾದ ನಿನ್ನ ಈ ಹೆಸರು ಅಸಾರ್ಥಕವಲ್ಲವೆ!" ಎಂದು ಮೂದಲಿಸಿ, ದೇಹದಲ್ಲಿ ರಕ್ತದಾರೆಯು ಚಿಲಿಮೆಯಾಗಿ ಹೊರಡುವಂತೆ ಬಾಣಪ್ರಯೋಗ ಮಾಡಿದನು. ಇನ್ನು ವಿನೋದ ಯುದ್ಧವು ಕೊನೆಯಾಗಿ ವಿರಸಪ್ಪಟಿತು. ಇಬ್ಬರವೈಗಳಲೂ ಕನ್ನೀರು ಹೊರಟಿತ. ಇಬ್ಬರೂ ನೊಂದರು. ಉಭಯರೂ ಜಯಾಭಿಲಾಷೆಯಿಂದ ಪರಸ್ಪರರ ಛತ್ರ ಚಾಮರ ಸೀಗುರಿಗಳನ್ನು ಖಂಡಿಸಿದರು. ವೃಷಕೇತುವಿನ ಬಾಣದ ಎಸಗೆಯಿಂದ ಸುಧನ್ವನ ರಥವು ಪುಡಿಪುಡಿಯಾಯಿತು. ಒಡನೆ ಬೇರೊಂದು ತೇರನ್ನೇರಿ ಸುಧನ್ವನು ವೃಷಧ್ವಜನ ಅಶ್ವ ಸಾರಥಿ ಪತಾಕೆ ಮುಂತಾದುವುಗಳನ್ನು ಒಂದೊಂದನ್ನಾಗಿ ಕತ್ತರಿಸಿ, ರಥವನ್ನು ಚೂರುಚೂರಾಗಿಮಾಡಿ ಆ ವೀರನ ಕೈಯಲ್ಲಿನ ಕೋದಂಡವನ್ನು ಖಂಡಿಸಿದನು. ಉಭಯರಿಗೂ ಕೋಪರೋಷಗಳು ಮೇರೆವಾರಿದುವು. ಕರ್ಣಸೂನುವು ವಿರಥನಾಗಿ, ಆದರೂ ಧೈರ್ಯಗೆಡದೆ, ಶಕ್ತಿ ಮುದ್ಗರ ಮುಸುಂಡಿ ತೋಮರ ಖಡ್ಗ ಪರಶು ಗದೆ ಚಕ್ರ ಕುಂತ ಶೂಲಿ ಭಿಂಡಿವಾಳ ಮುಂತಾದ ಆಯುಧ ವಿಶೇಷಗಳಿಂದ ಶತ್ರುವನೂ, ಶತ್ರುಸೈನ್ಯವನ್ನೂ ನೋಯಿಸಿದನು. ಅಷ್ಟರಲ್ಲಿ ಅವನ ಸಾರಥಿಯು ಬೇರೊಂದು ರಥವನ್ನು ಸಿದ್ಧಮಾಡಿಕೊಂಡು ಬರಲು, ಪುನಃ ಘೋರರೂಪವು ಪ್ರಾರಂಭಿಸಿತು. ಭೂಮಿಯಲ್ಲಿದ್ದು ಯುದ್ಧಮಾಡುವರು, ನೆಲದಿಂದ ಕುಪ್ಪಳಿಸಿ ಹಾರಿ ಯುದ್ಧಮಾಡುವರು, ಎಡಬಲಗಳಲ್ಲಿ ಹೊಂಚಿ ಶತ್ರುಮರ್ಮಗಳನ್ನು ಭೇದಿಸುವರು. ಅನೇಕಾನೇಕ ಆಯುಧಗಳ ಪ್ರೌಢಿಮೆಯ ಪ್ರಯೋಗಗಳಲ್ಲಿ ಒಬ್ಬರಿಗೊಬ್ಬರು ಹಿಂದೆಗೆಯದೆ ಯುದ್ಧಮಾಡುತ್ತಿರಲು, ಸುಧನ್ವನು ಒಂದುಸಾರಿ ಒಂಬತ್ತು ಬಾಣಗಳನ್ನು ಧನುಸ್ಸಿನಲ್ಲಿ ಹೂಡಿ ವೃಷಕೇತುವಿಗೆ

ಗುರಿಯಿಟ್ಟು ಹೊಡೆಯಲು, ಅವು ವೃಷಕೇತುವನ್ನು ಅತಿಶಯವಾಗಿ ನೋಯಿಸಿದುವು. ಕರ್ಣಸುತನು ಮೈಮರೆದು ರಥದಲ್ಲಿ ಮಲಗಿದನು. ಸಾರಥಿಯು ತನ್ನ ಸ್ವಾಮಿಯನ್ನು ಒಡನೆ ಅಲ್ಲಿಂದ ಸುರಕ್ಷಿತವಾದ ಸ್ಥಳಕ್ಕೆ ಕೊಂಡೊಯ್ದನು. ಕೂಡಲೆ ಪ್ರದ್ಯುಮ್ನನು ಚಾಪಧಾರಿಯಾಗಿ ಬಿಲ್ಲನ್ನು ಜೇವಡೆಯುತ್ತಾ, "ಕರೆಸು, ಕರೆಸು, ಸುಧನ್ವಾ, ನಿನ್ನ ಸಹಾಯಕರನ್ನು ಕರೆಸಿಕೋ" ಎಂದು ಬೊಬ್ಬಿಡುತ್ತಾ ಎದುರಾದನು.

ವೃಷಕೇತುವಿನ ತರುವಾಯ ತನಗೆ ಎದುರಾದ ವೀರನಾರೆಂಬುದು ಸುಧನ್ವನಿಗೆ ಅವನ ಧ್ವಜದಚಿಹ್ನೆಯಿಂದ ತಿಳಿಯಿತು. ಆಗಲಾತನು, "ಎಲವೋ ನೀನು ವಿರಹವ್ಯಥೆಗೆ ಒಳಗಾದ ಕಾಮುಕರನು ಸ್ತ್ರೀಯರ ಬೆಂಬಲದಿಂದ ಅಳುಕಿಸಲು ಶಕ್ತನಲ್ಲದೆ, ಈ ವೀರವೃಂದದಲ್ಲಿ ನಿನ್ನ ಪಂಚಬಾಣಗಳ ಎಸುಗೆಯಿಂದ ಅಳುಕುವವರುಯಾರು!" ಎಂದು ಮೂದಲಿಸಲು, ಪ್ರದ್ಯುಮ್ನನು "ಎಲವೋ ಮರುಳೆ, ಜಯವಧುವನ್ನು ಸಹಾಯಕಳನ್ನಾಗಿ ಹಿಂದಿಟ್ಟುಕೊಂಡು ಬಂದಿರುವೆನೆಂಬುದು ತೋರಲಿಲ್ಲವೋ" ಎಂದು ಹೂಗಿಸಿ ನಿಶಿತಬಾಣ ಪರಂಪರೆಗಳನ್ನು ಪ್ರಯೋಗಿಸಿದನು. ಶರಸಂಧಾನವು ಮಿಗಿಲಾಯಿತು. ಪ್ರದ್ಯುಮ್ನನ ಎಸುಗೆಯಿಂದ ಸುಧನ್ವನು ನೊಂದನು. ಒಡನೆ ಮೂಡಿಗೆಯಲ್ಲಿನ ಹೊಸ ಅಂಬುಗಳನ್ನು ತೆಗೆದು "ಎಲವೋ, ಶ್ರೀಕೃಷ್ಣಪುತ್ರನೆಂದು ಇದುವರೆಗೂ ಅಭಿಮಾನಿಸಿ ಸೈರಿಸಿಕೊಂಡಿದ್ದರೆ, ನಿನ್ನ ಪರಾಕ್ರಮವು ಹೆಚ್ಚಿ ಬಂತಲ್ಲವೆ" ಎಂದು ಜರೆದು, ಅವುಗಳನ್ನು ಆಕರ್ಣಾಂತವಾಗಿ ಸೆಳೆದು ಆ ವೀರನ ಮೇಲೆ ಪ್ರಯೋಗಿಸಿ, ಅವನ ಕೈಯ ಕೋದಂಡವನ್ನು ಏಳ ತುಂಡಗಳನ್ನಾಗಿ ಖಂಡಿಸಿದನು. ಸುಧನ್ವನ ಬಾಣಗಳ ಎಸುಗೆಯ ರಭಸಕ್ಕೆ ಸೈರಿಸಲಾರದೆ ಪ್ರದ್ಯುಮ್ನನು ಹಿಂಸರಿಯಲು, ಕೃತವರ್ಮನು ಎದುರಾದನು. ಅವರಿಬ್ಬರಿಗೂ ಪುನಃ ಒಂದು ಗಳಿಗೆಯ ಕಾಲ ಭಯಂಕರ ಯುದ್ಧವಾಯಿತು. ಕೃತವರ್ಮನು ಹತ್ತಂಬುಗಳನ್ನು ಪ್ರಯೋಗಿಸಿ, ಸುಧನ್ವನ ಮೈಯಲ್ಲಿ ರಕ್ತದ ಒರತೆಯನ್ನು ಹೊರಡಿಸಿದನು. ಒಡನೆ ಮರಾಳಧ್ವಜನ ಸುತನು ನೊಂದು ಇಪ್ಪತ್ತು ನಾಲ್ಕು ಬಾಣಗಳನ್ನು ಪ್ರಯೋಗಿಸಿ ಅವನ ತೇರು ಬಿಲ್ಲು ಸಾರಥಿ ಮುಂತಾದುವುಗಳನ್ನು ಪರಿಹರಿಸಿ ಕೃತವರ್ಮನನ್ನು ನೋಯಿಸಲು, ಆತನು ಶತ್ರುಮುಖದಿಂದ ಕೆಲಸಾರ್ದನು. ತರುವಾಯ ಅನುಸಾಲ್ವನು ಸುಧನ್ವನ ಎದುರಾಗಿ

ಣಿಯು ತೊಡಗಿದುವು. ರಣರಂಗವು ಭಯಂಕರವಾಯಿತು. ತರುವಾಯ ಸುಧನ್ವನ ಈ ಆಟೋಪವನ್ನು ಕಂಡು ಸಹಿಸಲಾರದೆ ಸಾತ್ಯಕಿಯು ಎದುರಾದನು. ಸಾತ್ಯಕಿ ಸುಧನ್ವರಿಗೆ ಕಾಳಗವು ಒಹುಸ್ಫೂರ್ತಿನವರಿಗೆ ನಡೆಯಿತು ಸಮಾನಪರಾಕ್ರಮದ ಆ ವೀರರಿಬ್ಬರೂ ಒಬ್ಬರಿಗೊಬ್ಬರು ಮಣಿಯದೆ ಕದನವು ನಡೆಯುತ್ತಿರಲು, ಕೊನೆಗೆ ಸುಧನ್ವನು ಮಹಾರೋಷದಿಂದ ಸಾತ್ಯಕಿಯ ಕೈಯ ಕೋದಂಡವನ್ನು ಖಂಡಿಸಿ, ಬಾಣವರ್ಷದಿಂದ ಅವನನ್ನು ಮೂರ್ಛೆಗೊಳಿಸಿದನು. ಅರಿವೀರನ ಸಾಮರ್ಥ್ಯವನ್ನು ಕಂಡು, ಪಾಂಡವ ಸೇನೆಯಲ್ಲಿ ಕಳವಳವುಂಟಾಯಿತು. ಯೌವನಾಶ್ವ, ಕೃತವರ್ಮ, ಶರಪ್ರದ್ಯುಮ್ನ ಸಾಂಬ, ಮುಂತಾದ ಪ್ರಮುಖವೀರರು ಒಬ್ಬೊಬ್ಬರಾಗಿ ಸುಧನ್ವನೊಡನೆ ಕಾದಿದರು. ಆದರೂ ಹರಿಭಕ್ತನೂ ವ್ರತನಿಷ್ಠನೂ, ಸತ್ಯಸಂಕಲ್ಪನೂ ಆದ ಸುಧನ್ವನೇ ವಿಜಯಿಯಾದನು ಆಗ ಧನಂಜಯನು ಮಹಾಕ್ರೋಧದಿಂದ ಅರಿಸೈನ್ಯದ ಮೇಲೆ ಹೋಗುತ್ತಿದ್ದ ತನ್ನ ಕಡೆಯ ವೀರರನ್ನು ನಿಲ್ಲಿಸಿ ವೀರಕಾಚೆಯನ್ನು ಬಿಗಿದು, ಶತ್ರುವೀರನಾದ ಸುಧನ್ವನನ್ನು ಜಯಿಸಬೇಕೆಂದು ಇಚ್ಛೆಗೊಂಡು ತಾನೇ ಎದುರಾದನು



## ಅಧ್ಯಾಯ ೫ "ಸುಧನ್ವಾರ್ಜುನರು"

ತನ್ನ ಕಡೆಯ ಸಮಸ್ತ ವೀರರನ್ನೂ ಮೂರ್ಛೆಗೆಡಹಿ, ಇನ್ನೂ ರಣೋತ್ಸಾಹದಿಂದ ಮೆರೆಯುತ್ತಾ ನಿಂತಿದ್ದ ಸುಧನ್ವನನ್ನು ಜಯಿಸಬೇಕೆಂದು ಇಚ್ಛಿಸಿ, ಅರ್ಜುನನು ವೀರಕಾಚೆಯನ್ನು ಕಟ್ಟಿದನು ತಲೆಗೆ ದಿವ್ಯವಾದ ಶಿರಸ್ತ್ರಕವನ್ನು ಧರಿಸಿದನು. ದೇವಗಣಕ್ಕೆ ಕೈಯೆತ್ತಿ ಮುಗಿದನು ಧ್ವಜದಲ್ಲಿದ್ದ ಆಂಜನೇಯನಿಗೆ ವಂದಿಸಿದನು ತನ್ನ ರಥಕ್ಕೆ ಪ್ರದಕ್ಷಿಣೆಯಾಗಿಬಂದು, ಕುದುರೆಗಳ ಭುಜಗಳನ್ನು ತಟ್ಟಿ ಆದರಿಸಿದನು ವಂದಿಮಾಗಧರು ಜಯಜಯವೆಂದು ಹೊಗಳುತ್ತಿರಲು, ಅತಿಭಯಂಕರವಾದ ತನ್ನಾ ರಥವನ್ನು ಶತ್ರುವಿನ ಮೇಲೆ ನೂಕಿದನು. ಧನಂಜಯನ ಯುದ್ಧದ ಆಟೋಪವು ಸಾಮಾನ್ಯವಾದುದಲ್ಲ! ರಥವೋ ಅಗ್ನಿದತ್ತವಾದುದು, ಅದ್ವಿತೀಯವಾದ ನಾಲ್ಕು ಶ್ವೇತಾಶ್ವ

ಗಳು, ಧ್ವಜದಲ್ಲಿ ಮೂರ್ತಿಮತ್ತಾದ ಆಂಜನೇಯು, ಅಜೇಯವಾದ ಗಾಂಡೀವ ಧನುಸ್ಸು, ಕೇಳುವುದೇನು! ಕುದುರೆಗಳ ಖುರಪುಟಧ್ವನಿಯೂ, ರಥ ಚಕ್ರಗಳ ನಿನಾದವೂ, ದೇವದತ್ತದ ಶತ್ರುಭೀಕರವಾದ ಘೋಷವೂ, ಧ್ವಜದ ಕಪಿಯ ಅಬ್ಬರಣೆಯೂ, ಗಾಂಡೀವದ ಝೇಂಕಾರವೂ, ಮೂರುಲೋಕದ ಗಂಡನೆನಿಸಿ ಕೊಂಡ ಅರ್ಜುನನ ಸಿಂಹಗರ್ಜನೆಯೂ ದಶದಿಕ್ಕುಗಳನೂ ಕಿವುಡಾಗಿಸಿದು ವು. ಈ ಆರ್ಭಟವನ್ನು ಕಂಡು ಇದು ತ್ರೈಲೋಕ್ಯವಲ್ಲಭನಾದ ಫಲ್ಗುಣನ ಕದನದ ಆಟೋಪವೆಂದು ಆ ಯುದ್ಧವನ್ನು ನೋಡವೆ ಉತ್ಸುಕತೆಯಿಂದ ಬ್ರಹ್ಮೇಂದ್ರಾದಿದೇವತೆಗಳೂ ತಮ್ಮತಮ್ಮ ವಾಹನಗಳನೇರಿ ಅಂತರಿಕ್ಷದಲ್ಲಿ ನೆರೆದರು ಸುಧನ್ವನೂ, ತನ್ನೊಂದಿಗೆ ಯುದ್ಧಕ್ಕಾಗಿ ಬರುತ್ತಿರುವವನು ವೀರ ವೃಂದದಲ್ಲಿ ಸುಪ್ರಸಿದ್ಧನಾದ ಅರ್ಜುನನು ಎಂಬದಾಗಿ ತನ್ನ ಸಾರಥಿಗೆ ಸೂಚಿಸಿ, ಅವನಿಗೆ ತಕ್ಕ ಯುದ್ಧವನ್ನು ಕೊಡಲು ಸಿದ್ಧನಾಗಿದನು.

ಮೇಲ್ಕಂಡಂತೆ ಸಿದ್ಧನಾಗಿ ಸುಧನ್ವನಿಗೆ ಇದಿರಾದ ಒಡನೆಯೇ ಆತನು ನಿ ಶಿತಬಾಣ ಪರಂಪರೆಗಳನ್ನು ಅರ್ಜುನನಮೇಲೆ ಪ್ರಯೋಗಿಸಿದನು ಆಗ ಅ ರ್ಜುನನು ಮುಗುಳ ಗೆಯಿಂದ ಪ್ರತಿಬಾಣಗಳನ್ನು ಬಿಟ್ಟು ಅವುಗಳನ್ನು ನಿವಾ ರಿಸಿಕೊಂಡು ಶತ್ರುವೀರನನ್ನು ಕುರಿತು—"—ಅಕಟಾ, ಇದೇನಾಶ್ಚರ್ಯವು! ನಮ್ಮೊಂದಿಗೆ ಯುದ್ಧವು ಇತರರೊಂದಿಗೆ ನಡೆದಂತೆ ಸಾಮಾನ್ಯವೆಂದು ತಿಳಿದು ನೀನು ಇದಿರಾಗ ಬಹುದೇ? ನಮ್ಮೊಡನೆ ವೈರವನ್ನು ಸಾಧಿಸಿ ಗೆದ್ದವರು ದೇವ ದಾನವ ಮಾನವರಲ್ಲಿ ಯಾರಾದರೂ ಉಂಟೇ! ನೀನು ಅಸಬುದ್ಧನು ಘೋ ರ ಭಾರತಯುದ್ಧದಲ್ಲಿ ಸಮರಸನ್ನದ್ಧರಾಗಿ ಇದಿರಾದ ಭೀಷ್ಮ ದ್ರೋಣ ಕರ್ಣ ಕೃಪಾಶ್ವತ್ಥಾಮಾದಿ ವೀರರೇನಾದರೆಂಬುದು ನಿನಗೆ ತಿಳಿಯದೇ'' ಎಂದು ನು ಡಿಯಲು, ಸುಧನ್ವನು ಗಹಗಹಿಸಿನಗುತ್ತಾ "ಏನು, ಏನೆಂದೆ ಭೀಷ್ಮಾದಿಗಳ ನ್ನು ಜಯಿಸಿದೆನೆಂದು ಹೆಮ್ಮೆಪಡುವೆಯಾ! ಭಾರತಯುದ್ಧದಲ್ಲಿ ಕುರುವೀರರ ನ್ನು ನೀನು ನಿನ್ನ ಸಾರಥಿಯಾಗಿದ್ದ ಶ್ರೀಕೃಷ್ಣನಬೆಂಬಲದಿಂದ ಗೆದ್ದಿಯಲ್ಲದೆ, ವೀರವೃಂದದಲ್ಲಿ ನಿನ್ನನ್ನೂ ಒಬ್ಬ ವ್ಯಕ್ತಿಯೆಂದು ತಿಳಿಯುವವರು ಯಾರಿದ್ದರು! ಹಿಂದೆ ಇಲ್ಲಿಯವರೆಗೆ ಜಯ ದೊರೆತಂತೆಯೇ ನಮ್ಮಲ್ಲಿಯೂ ಆಗುವುದೆಂದು ತಿಳಿಯಬೇ ಡ'' ಎಂದು ಬಾಣಪ್ರಯೋಗಮಾಡಲು ಕಪಿಧ್ವಜಸಹಿತವಾದ ಅರ್ಜುನನತೇರು ಬುಗುರಿಯೋ ಎಂಬಂತೆ ತಿರುಗತೊಡಗಿತು. ಈ ಅದ್ಭುತವನ್ನು ಕಂಡು ಉಭ

ಯ ಸೇನಾಯುವೀರರೂ ಬೆರಗಾದರು. ಅರ್ಜುನನು ಮೂಗಿನಮೇಲೆ ಬೆರಳಿಟ್ಟು ಪರಮಾಶ್ಚರ್ಯದಿಂದ, "ಭಲಾ ಸುಧನ್ವಾ, ನಿನ್ನಂತೆ ನನ್ನ ಈ ರಥವನ್ನು ತಿರುಗಿಸಿದ ವೀರರನ್ನು ಸ್ವರ್ಗ ಮರ್ತ್ಯ ಪಾತಾಳ ಲೋಕಗಳಲ್ಲೂ ಕಾಣೆನು. ನೀನು ವೀರವೃಂದದಲ್ಲಿ ಗಣ್ಯನಾಗತಕ್ಕವನೇ! ಆದರೇನು! ಇನ್ನೂ ಬಾಲಕನು. ನಿಮ್ಮ ತಂದೆಯನ್ನು ಕರೆಸಿಕೋ! ಕುದುರೆಯನ್ನು ಒಪ್ಪಿಸಿ ಯಜ್ಞಕಾರ್ಯಕ್ಕೆ ಸಹಾಯಕರಾಗಿ ಸುಖಿಸುವುದುಮೇಲು" ಎಂದು ನುಡಿಯುತ್ತಿರಲು, ಸುಧನ್ವನು "ಅರ್ಜುನಾ, ಕುದುರೆಯನ್ನು ಬಿಡುವ ಮಾತೇಕೆ! ನಮ್ಮ ತಂದೆಯನ್ನು ಕರೆಯಿಸಿಕೊಳ್ಳಬೇಕೆಂದೆಯಲ್ಲವೆ? ಅಷ್ಟೇಕೆ! ಮುರಾಂತಕನ ಸಹಾಯವನ್ನು ಪಡೆದುಕೊಳ್ಳದೆ, ನನ್ನ ಯುದ್ಧವನ್ನೇ ನೀನು ನಿರ್ವಹಿಸಿಕೊಳ್ಳಲಾರೆ. ಈ ಬಿಂಕವೇಕೆ? ನರೇಂದ್ರಾಗ್ರಣಿಯಾದ ಹಂಸಧ್ವಜ ಮಹಾರಾಜನು ಯಜ್ಞದೀಕ್ಷಿತನಾಗುವನು ಆಗ ನಮಗೆ ಸಾಮಂತನಾಗಲುಳ್ಳ ನೀನೇ ನಮಗೆ ಸಹಾಯಕನಾಗಿ ನಿನ್ನ ವಿಕ್ರಮದಿಂದ ಭೂಮಿಯನ್ನು ಜಯಿಸುವೆಯಂತೆ" ಎಂದು ಮೂದಲಿಸಿ ನುಡಿದನು. ಹೀಗೆ ಕಟುಭಾಷಣೆಯ ವಾಗ್ಯುದ್ಧವು ತೆರಪಿಲ್ಲದೆ ನಡೆಯ ತೊಡಗಿತು. ಕೇವಲ ಒಬ್ಬ ತರುಣವೀರನು ತನ್ನನ್ನು ಸಡ್ಡೆಗೆ ತಾರದೆ ನುಡಿಯುತ್ತಿದ್ದ ಮಾತುಗಳು ಮಾನಧನನಾದ ಅರ್ಜುನನಿಗೆ ಮೇಲೆ ಮೇಲೆ ರೋಷವನ್ನು ಹೆಚ್ಚಿಸುತ್ತಿದ್ದುವು. ಆಗಲಾತನು, "ಎಲವೋ ಮರುಳೆ, ಹುಲುಪ್ರಾಣಿಯಂತಿರುವ ನಿನ್ನನ್ನು ಜಯಿಸದಿದ್ದರೆ ನನಗೆ ಈ ಗಾಂಡೀವ ಧನುಸ್ಸೂ, ಅಕ್ಷಯಬಾಣಗಳೂ, ಈ ದಿವ್ಯರಥವೂ, ಸಮೀರನಂದನನಿಂದ ಅಲಂಕೃತವಾದ ಧ್ವಜವೂ, ನರಲೋಕಕ್ಕೇ ಅಸಾಮಾನ್ಯವಾದ ಈ ದಿವ್ಯಾಶ್ವಗಳೂ, ಸವ್ಯಸಾಚಿತ್ವವೂ, ದೇವದತ್ತ ಶಂಖವೂ, ಇವುಗಳೆಲ್ಲವೂ ವ್ಯರ್ಥವಲ್ಲದೆ! ಛೀ, ಹದಿನಾಲ್ಕು ಲೋಕಗಳನ್ನೂ ಏನು ಪದಾರ್ಥವೆಂದೂ ಗಣನೆಗೆ ತಾರದ ನನ್ನ ಶೌರ್ಯಾಗ್ನಿಯ ಎದುರಿಗೆ ಅಣುಸ್ವರೂಪನಾದ ನೀನೆಷ್ಟರವನು!" ಎಂದು ಹೀಯಾಳಿಸುತ್ತಾ, ನಿಶಿತಗಳಾದ ಏಳುನೂರು ಬಾಣಗಳನ್ನು ಆ ಅತಿವೀರನಮೇಲೆ ಪ್ರಯೋಗಿಸಿದನು. ಆಗ ಸುಧನ್ವನು ಕೆರಳಿ "ಎಲವೋ, ನೀನು ಬಹುಪ್ರೀತಿಯಿಂದ ಮೇಲೆ ಹೇಳಿಕೊಂಡ ಈ ಯುದ್ಧಸಾಧನಗಳೆಲ್ಲವೂ, ಅವ್ಯಯನಾದ ಸಾರಥಿಯು ಬಳಿಯಲ್ಲಿದ್ದು ಸಾರಥ್ಯವನ್ನು ಮಾಡಿದುದರಿಂದ ಲಭ್ಯವಾದುವಲ್ಲದೆ ಬೇರೆಯಲ್ಲ. ಘೋರ ಪ್ರಳಯಮಾರುತನಿಂದಲ್ಲದೆ ಅತ್ತಿ

ತ್ರ ಕದಲದ ಕಾರ್ಮೋಡದ ಸಮೂಹವು ಬೀಸಣಿಗೆಯ ಗಾಳಿಯಿಂದ ಚಲಿಸೀತೇ! ಏಕೆ ಹೆಮ್ಮೆಪಡುವೆ?" ಎಂದು ಹಂಗಿಸಿ ಬಾಣಗಳಿಂದ ಆವನನ್ನು ನೋಯಿಸಿದನು.

ಅರ್ಜುನನಿಗೆ ಮೇಲೆ ಮೇಲೆ ಕೋಪವು ಮಿತಿಮೀರಿತು. ಅರಿವೀರನು ಸಾಮಾನ್ಯನಲ್ಲವೆಂದೂ, ಅವನನ್ನು ಜಯಿಸದಿದ್ದರೆ ತನ್ನ ಕೀರ್ತಿ ಪ್ರತಿಷ್ಠೆಗಳಿಗೆ ಕೊರತೆಯುಂಟಾಗದಿರದೆಂದೂ ತೋರಿತು. ಒಡನೆ ಸಾವಕಾಶಮಾಡದೆ ಖಾಂಡವ ವನ ದಹನಕಾಲದಲ್ಲಿ ಲಬ್ಧವಾಗಿದ್ದ ದಿವ್ಯ ಶಕ್ತಿಯೊಂದನ್ನು ಮೂಡಿಗೆಯಿಂದ ತೆಗೆದು ಅದನ್ನು ಧನುಸ್ಸಿನಲ್ಲಿ ಸಂಧಿಸಿದನು. ಆಹಾ! ಅದರ ತೇಜಸ್ವಿತೆಯನ್ನು ಕುರಿತು ಏನೆಂದು ಹೇಳಬಹುದು! ಅದು ಬಡಬಾಗ್ನಿಯಂತೆಯೂ ಪರಮೇಶ್ವರನ ಪ್ರಳಯಕಾರಿಯಾದ ಫಾಲನೇತ್ರದಂತೆಯೂ ತೋರುತ್ತಾ ಉಭಯ ಸೈನ್ಯಗಳಿಗೂ ಭಯವನ್ನುಂಟುಮಾಡಿತು. ಅದರಿಂದ ಕಿಡಿಗಳು ಉದುರುತ್ತಿದ್ದವು ಅದು ಇನ್ನೂ ಅರ್ಜುನನ ಕೈಯಲ್ಲಿರುವಾಗಲೇ ಪರಬಲದ ಅರಿವೀರರ ಕೈಗಳಲ್ಲಿದ್ದ ಧನುರ್ಬಾಣಗಳು ಕಾಯ್ದು ಹೋದುವು. ಹಸ್ತಿ ಅಶ್ವರಥ ಪದಾತಿಗಳು ಆ ಜ್ವಾಲೆಯನ್ನು ತಾಳಲು ಅರಿದಾದರು ಹೀಗೆ ಎಲ್ಲರೂ ಕಂಗೆಟ್ಟಿದ್ದುದನ್ನು ಕಂಡು ಸುಧನ್ವನು, ತನ್ನ ಮೂಡಿಗೆಯಿಂದ ಒಂದು ಉತ್ತಮಾಸ್ತ್ರವನ್ನು ತೆಗೆದು ಅದನ್ನು ವರುಣಮಂತ್ರ ಪುರಶ್ಚರಣೆಯಿಂದ ಮಂತ್ರಿಸಿ ಬಿಡಲು, ಅದು ಅರ್ಜುನನ ಆಗ್ನೇಯಾಸ್ತ್ರವನ್ನು ಶಾಂತಗೊಳಿಸಿತು. ಎಲ್ಲೆಲ್ಲೂ ಜಲಮಯವಾಯಿತು. ಆನೆ ಕುದುರೆಗಳೂ, ರಥಾದಿಗಳೂ ತೋಯ್ದುವು. ಸೈನಿಕರ ಒಟ್ಟೆಬರೆಗಳೆಲ್ಲವೂ ನೀರಿನಿಂದ ನೆನೆದುವು. ಮದ್ದಳೆ ರಣಭೇರಿ ಮುಂತಾದ ಚರ್ಮವಾದ್ಯಗಳ ಶಬ್ದವು ಅಡಗಿಹೋಯಿತು. ಕುಂಭದ್ರೋಣವಾಗಿ ಮಳೆಸುರಿದಂತೆ ಎಲ್ಲೆಲ್ಲೂ ನೀರೇನೀರಾಯಿತು. ಏನು ಕೆಲಸ ಮಾಡಲೂ ತೋರದಂತೆ ಎಲ್ಲೆಲ್ಲೂ ಕೆಸರಾಗಿ ರಣಭೂಮಿಯು ಸೈನಿಕರ ಸಂಚಾರಕ್ಕೆ ಅಸಾಧ್ಯವೆನ್ನಿಸಿತು ಆಗ ಅರ್ಜುನನು ಬೇಸತ್ತು ವಾಯವ್ಯಾಸ್ತ್ರವನ್ನು ಪ್ರಯೋಗಿಸಿದನು. ಅದು ಕುಲಗಿರಿಗಳನ್ನು ಕಿತ್ತುಕೊಂಡು ಹೋಗುವಂತೆ ಗಾಳಿಬೀಸಿ ಒಡನೆಯೇ ಆ ಜಲದಬಾಧೆಯನ್ನು ಪರಿಹರಿಸಿತು. ಒಡನೆ ಸುಧನ್ವನು ಪರ್ವತಾಸ್ತ್ರವನ್ನು ಪ್ರಯೋಗಿಸಿದನು ಅದರಿಂದ ಪರ್ವತಸಮಾನವಾದ ಕಲ್ಲುಬಂಡೆಗಳು ಬಂದು ಸೈನ್ಯದಮೇಲೆಬಿದ್ದು ಚತುರಂಗಬಲವನ್ನೂ

ನಾಶಗೊಳಿಸತೊಡಗಿದುವು. ಅರ್ಜುನನು ಅದನ್ನು ಐಂದ್ರಾಸ್ತ್ರದಿಂದ ಪರಿಹರಿಸಿಕೊಂಡನು. ಸುಧನ್ವನು ತಿಮಿರಸಾಯಕವನ್ನು ಬಿಟ್ಟನು. ಒಡನೆ ಅಗಾಧ ಕಾರ್ಗತ್ತಲೆಯು ಆವರಿಸಿ, ಒಬ್ಬರಿಗೊಬ್ಬರು ಕಾಣದಂತಾಯಿತು. ಅರ್ಜುನನು, ಅದನ್ನು ರವ್ಯಸ್ತ್ರದಿಂದ ಪರಿಹರಿಸಿಕೊಳ್ಳಲು, ಸುಧನ್ವನು ಸರ್ಪಾಸ್ತ್ರವನ್ನು ಪ್ರಯೋಗಿಸಿ ಬೊಬ್ಬಿರಿದನು. ಒಡನೆಯೇ ಅರ್ಜುನನೂ ಗಾರುಡಾಸ್ತ್ರವನ್ನು ಬಿಟ್ಟು ಅದರ ಉಪಟಳದಿಂದ ತನ್ನ ಸೈನ್ಯವನ್ನು ರಕ್ಷಿಸಿಕೊಂಡನು. ಹೀಗೆ ಸಕಲ ವಿಧವಾದ ಮಂತ್ರಾಸ್ತ್ರಗಳ ಎಸುಗೆಯೂ ತೀರಿ ಅರ್ಜುನನು ಉಪಾಯತೋರದೆ, ಕೊನೆಗೆ ವರಾರ್ಯದಿಂದ ಬ್ರಹ್ಮಾಸ್ತ್ರವನ್ನೇ ಪ್ರಯೋಗಿಸಿ ಬಿಟ್ಟನು. ಆಗಲೂ ಸಮಾನ ವೀರನಾದ ಸುಧನ್ವನು ಹಿಂದೆಗೆಯದೆ ಪ್ರತಿಯಾಗಿ ಆ ಪಿತಾಮಹಾಸ್ತ್ರವನ್ನೇ ಪ್ರಯೋಗಿಸಿ ಸಿಂಹನಾದವಮಾಡಿದನು.

ಅರ್ಜುನನು ಆಶ್ಚರ್ಯಗೊಂಡನು. ಆಶ್ಚರ್ಯದೊಂದಿಗೇ ಅತಿಶಯ ಯೋಚನೆಯೂ ಉಂಟಾಯಿತು. ಇವನನ್ನು ಜಯಿಸುವ ಬಗೆಯಾವುದೆಂದು ತೋರದಾಯಿತು. ಅಕ್ಷಯಬಾಣವನ್ನು ಪ್ರಯೋಗಿಸಿದನು. ಅದರಿಂದ ಆಕಾಶ ಭೂತಳಗಳೆಲ್ಲವೂ ಸರಳಿನ ಮಯವಾಯಿತು. ಆ ಶರಪರಂಪರೆಗಳು ಶತ್ರುಸೈನಿಕರ ಕಿವಿಮೂಗುಗಳನ್ನು ಕತ್ತರಿಸಿದುವು. ಸೀಸಕಗಳನ್ನು ಹಾರಿಸಿದುವು. ಕವಚಗಳನ್ನು ಹರಿದುವು. ಕೈಕಾಲುಗಳನ್ನು ಕತ್ತರಿಸಿದುವು. ಇದನ್ನು ಕಂಡು ಸುಧನ್ವನು ಪ್ರತಿ ಅಕ್ಷಯ ಬಾಣಗಳನ್ನು ಬಿಟ್ಟು, ಅದರ ಹಾವಳಿಯನ್ನು ಅಡಗಿಸಿ, ''ಎಲವೋ ಅರ್ಜುನಾ, ಇಷ್ಟೆಯೇ ನಿನ್ನ ಪ್ರತಾಪವು! ಪರಮೇಶ್ವರನೊಂದಿಗೆ ಖಾಡಾಖಾಡಿ ಯುದ್ಧಮಾಡಿ ಪಾಶುಪತಾಸ್ತ್ರವನ್ನು ಪಡೆದ ಬಲದ ಪರಿಮಿತಿಯೇ ಇದು! ಸ್ವರ್ಗಲೋಕಕ್ಕೆ ಹೋಗಿ ನಿವಾತಕವಚರೊಂದಿಗೆ ಹೋರಾಡಿದ ಸಾಮರ್ಥ್ಯದ ಪರಿಣಾಮವು ಇಷ್ಟೆಯೋ! ಭೀಷ್ಮ ದ್ರೋಣ ಕರ್ಣ ಜಯದ್ರಥಾದಿಗಳನ್ನು ಜಯಿಸಿದೆನೆಂದು ಹೆಮ್ಮೆ ಪಡುವ ನಿನ್ನ ಪೌರುಷದ ಪ್ರಮಾಣವು ಇಷ್ಟೆಯೋ? ಛಿ, ಏನೆಂದು ವೀರನೆಂದು ಅಹಂಕರಿಸುವೆ! ಶ್ರೀಕೃಷ್ಣನ ಸಹಾಯವಿಲ್ಲದ ನೀನು ಯಾರನ್ನು ಜಯಿಸಿರುವೆ? ಕರೆಸಿಕೋ, ಶೌರಿಯನ್ನು ಕರೆಸಿಕೋ!'' ಎಂದು ಹೊಸದಾಗಿ ಸಾಣೆಹಿಡಿದ ಬಾಣಪರಂಪರೆಗಳನ್ನು ಅರ್ಜುನನಮೇಲೆ ಬಿಟ್ಟನು. ಆಹಾ, ಆಗಿನ ಸುಧನ್ವನ ಬಾಣದ ಎಸುಗೆಯನ್ನು ಕುರಿತು ಏನೆಂದು ವರ್ಣಿಸೋಣ! ಅರ್ಜುನನ ರಥವು ಕುಲಾಲ ಚ

ಕ್ರದಂತೆ ನಿಲುಕಡೆಯಿಲ್ಲದೆ ಒಂದೇಸಮನಾಗಿ ಸುತ್ತುತ್ತಿದ್ದಿತು ಕುದುರೆಗಳು ಬಸವಳಿದು ಕಾಲುಗಳೇ ಆಡದಂತಾದುವು ಧ್ವಜಾರೋಹಿಯಾಗಿದ್ದ ಹನುಮನು ಹಲ್ಲಿರಿದು ಭ್ರಮಣೆಗೊಂಡನು ಸೂತನು ಮೃತನಾದನು. ಸೈನ್ಯವೋ ತ್ರಿಲೋಕವೀರನಾದ ಆತನ ಕಣ್ಣೆದುರಿಗೇ ಅಪರಮಿತ ಸಂಖ್ಯೆಯಿಂದ ನಾಶವಾಗತೊಡಗಿತು ಅರ್ಜುನನು ಕಂಗೆಟ್ಟನು. ಸಾರಥಿಯ ಮರಣದಿಂದ, ಸಾರಥಿತನವನ್ನೂ ತಾನೇ ಮಾಡಿಕೊಳ್ಳುತ್ತಾ, ತನ್ನ ಸ್ಥಳದಲ್ಲಿ ದೃಢವಾಗಿ ನಿಂತಿರಲು ಕೂಡ ಅವಕಾಶವಿಲ್ಲದಿರಲು, ಅತಿಶಯ ಜಿಗುಪ್ಸೆಯಿಂದ "ಅಕಟಾ ಈ ಶತ್ರುವೀರನನ್ನು ಜಯಿಸದಿದ್ದರೆ, ಕುಂತಿಯು ಭೂಮಿಭಾರಕನಾಗಿ ನನ್ನನ್ನು ಏಕೆ ಹೆತ್ತಳೋ! ಛೀ, ನಾನು ಯಾವಸಾರ್ಥಕ್ಯಕ್ಕಾಗಿ ಈ ಧನುರ್ಬಾಣಗಳನ್ನು ಧರಿಸಿರುವೆನೋ! ನನಗೆ ಯಾವಪಾಪ ಫಲವಾಗಿ ಇಂತಹ ಪರಾಭವವು ಪ್ರಾಪ್ತವಾಗಿರಬಹುದು" ಎಂದು ಮರುಗುತ್ತಾ ಆಪದುದ್ಧಾರಕನಾದ ಶ್ರೀಕೃಷ್ಣಮೂರ್ತಿಯನ್ನು ಮನಸ್ಸಿನಲ್ಲೇ ಧ್ಯಾನಿಸಿಕೊಂಡನು. ನೆರೆದ ಸಕಲ ದೇವತೆಗಳೂ ಸುಧನ್ವಾರ್ಜುನರ ಅಪೂರ್ವವಾದ ಆ ಯುದ್ಧವನ್ನು ನೋಡಿ, ಮಹಾಧನ್ವಿಯಾದ ಅರ್ಜುನನನ್ನೂ ಕಂಗೆಡಿಸಿದ ಸುಧನ್ವನ ಸತ್ತ್ವಾತಿಶಯಕ್ಕಾಗಿ ಬೆರಗಾಗುತ್ತಾ, ಇನ್ನು ಪುರಹರನ ಆಗಮನವಾದ ಮೇಲೆ ಯುದ್ಧವು ಯಾವ ಗತಿಗೆ ತಿರುಗುವುದೋ ಎಂದು ಆಶ್ಚರ್ಯಮಗ್ನರಾಗಿದ್ದರು.



## ಅಧ್ಯಾಯ ೬ "ಬಾಣತ್ರಯ—ನಿರ್ಯಾಣ"

ಪಾರ್ಥನು, ಮಹದಾತಂಕಯುಕ್ತನಾಗಿ ಮುಂಗಾಣದೆ "ಅಕಟಕಟಾ, ಧರ್ಮರಾಜನ ಯಜ್ಞಕ್ಕೆ ಪ್ರಾಪ್ತವಾದ ಈ ಪ್ರತಿಬಂಧಕವನ್ನು ನಿವಾರಿಸುವ ಮಾರ್ಗವಾವುದು!" ಎಂದು ಚಿಂತಾಕ್ರಾಂತನಾಗಿ ಆರ್ತಜನರಕ್ಷಕನಾದ ಶ್ರೀಕೃಷ್ಣಸ್ವಾಮಿಯನ್ನು ಧ್ಯಾನಿಸಿದನು. ಹಸ್ತಿನಾವತಿಯಲ್ಲಿ ಧರ್ಮರಾಜನ ಸಭೆಯಲ್ಲಿ ಕುಳಿತಿದ್ದ ಸರ್ವಜ್ಞನಾದ ಶ್ರೀಕೃಷ್ಣಸ್ವಾಮಿಯು, ಅರ್ಜುನನಿಗೆ ಉಂಟಾಗಿರುವ ಆತಂಕವನ್ನು ತಿಳಿದವನಾಗಿ, ಧರ್ಮಜಾದಿಗಳಿಗೆ ಸುಧನ್ವಾರ್ಜುನರಯುದ್ಧದ ಸ್ಥಿತಿಯನ್ನೂ ಅರ್ಜುನನಿಗೆ ಇಂದಿನಯುದ್ಧವು ಸಾಗದು

ಸುಧನ್ವನ ಪರಾಕ್ರಮವು ಏರಿಬರುತ್ತಿದೆ, ಎಂಬ ವೃತ್ತಾಂತವನ್ನೂ ಅರುಹಿ ಒಡನೆ ಆ ಸ್ಥಳದಿಂದ ಅದೃಶ್ಯನಾಗಿ ಹೊರಟನು ಆಹಾ ಇದೇನಾಶ್ಚರ್ಯವು! ಕಶ್ಯಪವಸಿಷ್ಠಾದಿ ಮಹರ್ಷಿಗಳು ನಿಷ್ಠರಾಗಿ ಮಾಡುವ ತಪಸ್ಸಿಗೇ ಸಾಧ್ಯನಲ್ಲದ ಸ್ವಾಮಿಯನ್ನು ಕುಂತೀಪುತ್ರರಾದ ಈ ಪಾಂಡವರು ಸಿಸನಲ್ಲಿ ಪ್ರಾಪ್ತವಾಗುವಂತೆ ವಶಪಡಿಸಿಕೊಂಡಿರುವರಲ್ಲಾ, ಎಂದು ಸಕಲ ದೇವತೆಗಳೂ ಆಶ್ಚರ್ಯಮಗ್ನರಾಗುತ್ತಿರಲು, ಆ ಪರಮಪುರುಷನು, ಸುಪರ್ಣಸ್ಕಂಧದಿಂದ ಅರ್ಜುನನ ರಥದ ಮೇಲ್ಭಾಗಕ್ಕೆ ಇಳಿದನು ಒಡನೆಕೇಳುವುದೇನು! ಪಾಂಡವಸೈನ್ಯದಲ್ಲಿ ಜಯಭೇರಿಗಳಾದುವು, ಮಂಗಳವಾದ್ಯಗಳು ಬಾಜಿಸಲ್ಪಟ್ಟುವು, ಅರ್ಜುನನು ಶ್ರೀಕೃಷ್ಣಮೂರ್ತಿಯ ಪಾದಾರವಿಂದಗಳಿಗೆ ನಮಸ್ಕರಿಸಿದನು ಶ್ರೀಕೃಷ್ಣನೂ ಆತನನ್ನು ಬಾಚಿ ತಬ್ಬಿಕೊಂಡು, ಸಾರಥಿಸ್ಥಾನದಲ್ಲಿ ಕುಳಿತು ಕುದುರೆಗಳ ವಾಘೆ (ಲಗಾಮು) ಗಳನ್ನು ಹಸ್ತಗಳಿಂದ ಹಿಡಿದನು

ಇತ್ತ ವಿಜಯನ ರಥದಮೇಲೆ ಮುರಹರನು ಇಳಿದುದನೂ, ಅರ್ಜುನನಿಗೆ ಅಭಯವಿತ್ತು ಸಾರಥಿತ್ವವನ್ನು ಸ್ವೀಕರಿಸಿದುದನ್ನೂ ಕಂಡ ಸುಧನ್ವನು, ಪರಮಾನಂದದಿಂದ ಅತಿಶಯಭಕ್ತಿಭಾವನೆಯಿಂದ ತಾನು ಅನುದಿನವೂ ಅಂತರಂಗದಲ್ಲಿ ಪೂಜಿಸುತ್ತಿದ್ದ ದಿವ್ಯಮೂರುತಿಯ ಪಾದಕಮಲಗಳನ್ನು ಕಂಡು, ತನ್ನ ಆತ್ಮನಕ್ಕೆ ಸಾರ್ಥಕತೆಯುಂಟಾಯಿತೆಂದುಕೊಂಡು, ಮನಸ್ಸಿನಲ್ಲೇ ಆ ರಮಾಲೋಲನನ್ನು ಹೊಗಳತೊಡಗಿದನು. "ದೇವಾದಿದೇವ, ಚತುರ್ಭುಜನಕ, ಮಂಗಳಗಾತ್ರ, ಸಚ್ಚಿದಾನಂದಸ್ವರೂಪ, ಅಚ್ಯುತ, ದುರಿತಭಂಜನ, ದುಷ್ಟನಿಗ್ರಹ-ಶಿಷ್ಟಪರಿಪಾಲನ, ರಮಾರಮಣ, ದೇವಾ ನೀನು ಜಗದ ಅಂತರಾತ್ಮನೂ ಸರ್ವಚೈತನ್ಯ ಸ್ವರೂಪನೂ ಆಗಿ ಸರ್ವತಂತ್ರಸ್ವತಂತ್ರನಾಗಿ ಈ ಜಗದಸೃಷ್ಟಿಸ್ಥಿತಿಲಯ ಕಾರ್ಯಗಳನ್ನು ನಡೆಯಿಸುತ್ತಿರುವೆ, ಭಕ್ತವತ್ಸಲಾ-ದೀನನಾದ ನನ್ನನ್ನು ಅನುಗ್ರಹಿಸಿ ಈ ಸಂಸಾರಪಾಶದಿಂದ ಉದ್ಧರಿಸು" ಎಂದು ಮುಂತಾಗಿ ಸ್ತುತಿಸಿ, ತರುವಾಯ "ದೇವಾ, ನೀನು ಸರ್ವಜ್ಞನೆಂಬುದಕ್ಕೆ ಈ ದಿನ ಆರ್ತನಾದ ಅರ್ಜುನನು ಗತ್ಯಂತರರಹಿತನಾಗಿ ಪ್ರಾರ್ಥಿಸಿದೊಡನೆಯೇ ಎಳೆಗರುವನ್ನು ಹುಡುಕಿಕೊಂಡು ಬರುವ ತಾಯಿ ಹಸುವಿನಂತೆ ಪ್ರಾಪ್ತನಾಗಿ, ಉದಾಹರಣೆಯನ್ನು ತೋರಿಸಿದೆ. ಹೀಗೆ ನಿನ್ನ ಬೆಂಬಲವಿಲ್ಲದಿದ್ದರೆ ಪಾಂಡವರಿಗೆ ಜಯವಾಗುವುದೆಂದರೇನು! ಇದಂತಿರಲಿ! ದೇವರದೇವಾ, ನಿನೆ

ದುರಿಗೆ ಅರ್ಜುನನು ಒಂದು ಪ್ರತಿಜ್ಞಾಪೂರ್ವಕವಾಗಿ ನನ್ನೊಂದಿಗೆ ಯುದ್ಧಮಾಡಲಿ" ಎಂದು ನುಡಿದನು. ಅದನ್ನು ಕೇಳಿ ಅರ್ಜುನನು ಕೆರಳಿ, "ಎಲವೋ ಮರುಳೆ, ಏನೆಂದು ಬೊಗಳುತ್ತಿರುವೆ. ನಿನ್ನ ತಲೆಯನ್ನು ಮೂರುಬಾಣಗಳಲ್ಲಿ ಕತ್ತರಿಸದಿದ್ದರೆ ಈ ಕರ್ಮಭೂಮಿಯಲ್ಲಿಯೂ ಎಳ್ಳಷ್ಟೂ ಪುಣ್ಯವಿಲ್ಲದವನ ರಾಧವನ ಸದ್ಗತಿಯು ನನಗೆ ಪ್ರಾಪ್ತವಾಗಲಿ" ಎಂದು ಶಪಥಮಾಡಿದನು. ಆ ಮಾತನ್ನು ಕೇಳಿ ಶ್ರೀಕೃಷ್ಣಸ್ವಾಮಿಯು, "ಆಕಟಾ ದುಡುಕಿದೆ, ಇವನು ಮಹಾಪರಾಕ್ರಮಿಯು, ಇವನಲ್ಲಿ ನಿನ್ನ ಪ್ರತಿಜ್ಞೆಯು ಸಾಗದು" ಎಂದು ಗರ್ಜಿಸಿದನು.

ಇತ್ತ ಸುಧನ್ವನು ಹುಸಿನಗೆಯನ್ನು ನಗುತ್ತಾ "ಅರ್ಜುನಾ ಶ್ರೀಕೃಷ್ಣನ ಬಂದ ಅಹಂಕಾರದಿಂದ ಪ್ರತಿಜ್ಞೆ ಮಾಡಿದೆಯಲ್ಲವೆ. ಆದರೆ, ಹಾಗೆ ನೀನು ಮಹಾಶಕ್ತಿಯಿಂದ ಪ್ರಯೋಗಿಸಿದ ಮೂರುಬಾಣಗಳನ್ನೂ ಮಧ್ಯದಲ್ಲಿ ಖಂಡಿಸದಿದ್ದರೆ, ಮಹಾಪಾಪಿಗಳಾಗಿದ್ದವರ ದುರ್ಗತಿಯು ನನಗೆ ಪ್ರಾಪ್ತವಾಗಲಿ" ಎಂದು ಪ್ರತಿಪ್ರತಿಜ್ಞೆಯನ್ನು ಮಾಡಿ ಧನುಸ್ಸನ್ನು ಜೇವಡೆಯುತ್ತಾ ಸಿದ್ಧನಾಗಿ ನಿಂತಿದ್ದನು. ಆ ಅರಿವೀರನ ಪುನಃ ಪ್ರತಿಜ್ಞೆಯನ್ನು ಕೇಳಿ ಕೃಷ್ಣಸ್ವಾಮಿಯು "ಅರ್ಜುನಾ, ಇವನು ಸಾಮಾನ್ಯನಲ್ಲ, ಏಕಪತ್ನೀವ್ರತಸ್ಥನು, ಮಾತಾಪಿತೃಭಕ್ತನು, ಅಲ್ಲದ ನನ್ನ ಪಾದಗಳಲ್ಲಿ ಅನನ್ಯ ಭಕ್ತಿಯುಳ್ಳವನು. ಇವನನ್ನು ಜಯಿಸುವುದು ಸುಲಭವಲ್ಲ. ನಿನ್ನ ಶೌರ್ಯವನ್ನು ಕುಂದಿಸಿ, ನನ್ನನ್ನು ಕೂಡ ಬಳಲಿಸುವಂತಹ ಧೈರ್ಯಶೌರ್ಯಸಂಪನ್ನನು, ನೀನು ನನ್ನಲ್ಲಿ ಆಲೋಚನೆಮಾಡದೆ ದುಡುಕಿ ಪ್ರತಿಜ್ಞೆ ಮಾಡಿ ಕೆಲಸವನ್ನು ಕೆಡಿಸಿದೆ" ಎಂದು ಮೈದುನನೊಂದಿಗೆ ಮಾತನಾಡಿಕೊಳ್ಳುತ್ತಿರುವಷ್ಟರಲ್ಲಿ, ಸುಧನ್ವನು ಪ್ರಾಪ್ತನಾಗಿ, "ಮಧುಸೂದನನಾದ ಹೇ ಕೃಷ್ಣಸ್ವಾಮಿಯೇ, ನೀನು ಎಂತಾದರೂ ನಿನ್ನ ಮೈದುನನಾದ ಅರ್ಜುನನ ಪ್ರತಿಜ್ಞೆಗೆ ಕುಂದುಬಾರದಂತೆ ರಕ್ಷಿಸಿಕೊಳ್ಳಲು ಬಾಧ್ಯನಿರುವೆ. ನಾವು ಎಷ್ಟು ಪ್ರಯತ್ನಿಸಿದರೂ ಏನೂ ಆಗಲಾರದು. ಆದರೂ ನೀನೂ ಕೋಪಿಸಿಕೊಂಡಾದರೂ ನನ್ನ ಮೇಲೆ ಕೈಮಾಡಿ ನೋಡು. ಹೆದರಿ ನಡುಗುವವನಾದರೆ ನಿನ್ನ ಭಕ್ತನಲ್ಲ. ನಾನು ವೀರಭಟನಲ್ಲ" ಎಂದು ನುಡಿನುಡಿಯುತ್ತಲೇ ಒಂದು ಬಾಣವನ್ನು ಪ್ರಯೋಗಿಸಲು ಅರ್ಜುನನ ರಥವು ಸುಳಿಗಾಳಿಗೆ ಸಿಕ್ಕ ತರಗೆಲೆಯಂತೆ ಗರ್ರನೆ ತಿರುಗತೊಡಗಿತು.

ಕುದುರೆಗಳು ಬಸವಳಿದು ಬಿದ್ದುವು, ರಥಸ್ಥರಾಗಿದ್ದ ಶ್ರೀಕೃಷ್ಣಫಲುಗುಣರಿಗೆ ಶಿರೋಭ್ರಮಣೆಯುಂಟಾಯಿತು ತನ್ನ ಭಕ್ತನಾದ ಆ ಅರಿವೀರನ ಪರಾಕ್ರಮವನ್ನು ಶ್ರೀಕೃಷ್ಣಸ್ವಾಮಿಯು ಬಗೆಬಗೆಯಿಂದ ಬಣ್ಣಿಸಿದನು.

ಇದನ್ನು ಕಂಡು ಅರ್ಜುನನು ಸಹಿಸದೆ, ಕೋದಂಡದಲ್ಲಿ ಮಹತ್ತರವಾದ ಬಾಣವನ್ನೊಂದನ್ನು ಹೂಡಿದನು. ಆ ಮಹಾಸ್ತ್ರಕ್ಕೆ ಶ್ರೀ ಕೃಷ್ಣಸ್ವಾಮಿಯು ತಾನು ಪೂರ್ವದಲ್ಲಿ ಗೋವರ್ಧನಗಿರಿಯನ್ನು ಎತ್ತಿ ಗೋಕುಲವನ್ನು ಕಾಪಾಡಿದ ಸುಕೃತ ಫಲವನ್ನು ಕೊಟ್ಟು "ಅರಿವೀರನ ಶಿರವನ್ನು ಇಳುಹು" ಎಂದು ನುಡಿಯಲು ಅರ್ಜುನನು ಆ ಮಹಾಶರವನು ಕಿವಿವರೆಗೆ ತೂಗಿಪ್ರಯೋಗಿಸಿದನು. ಹಾಗೆ ತನ್ನ ಕುತ್ತಿಗೆಗೆ ಗುರಿಯಿಟ್ಟಂತೆ ಎದುರಾಗಿ ಬರುತ್ತಿರುವ ಆ ಬಾಣವನ್ನು ಕಂಡು ಸುಧನ್ವನು "ಹೇ ಕೃಷ್ಣಮೂರ್ತೀ ಅರ್ಜುನನ ಈ ಬಾಣಕ್ಕೆ ನಿನ್ನ ಸುಕೃತಫಲವನ್ನು ಧಾರೆಯೆರೆದೆಯಲ್ಲವೆ? ಕಷ್ಟವೇನು! "ಎನ್ನುತ್ತಾ ಅದನ್ನು ಮಧ್ಯಮಾರ್ಗದಲ್ಲೇ ಖಂಡಿಸಿ, ಗಹಗಹಿಸಿ ನಗುತ್ತಾ ನಿಂತನು ಮೂರು ಬಾಣಗಳಲ್ಲಿ ಶತ್ರುಶಿರವನ್ನು ಖಂಡಿಸುವೆನೆಂದು ಮಾಡಿದ ಪ್ರತಿಜ್ಞೆಯಲ್ಲಿ ಒಂದು ವ್ಯರ್ಥವಾಯಿತು, ಇನ್ನು ಎರಡರಿಂದ ಇವನ ತಲೆಯನ್ನು ಕತ್ತರಿಸಬೇಕೆಂದುಕೊಂಡು ನರನು ಪುನಃ ಗಾಂಡೀವದಲ್ಲಿ ನಿಶಿತಶರವನ್ನೊಂದನ್ನು ಹೂಡಿದನು. ಶ್ರೀ ಕೃಷ್ಣಸ್ವಾಮಿಯು ತಾನು ಕೃಷ್ಣಾವತಾರದಲ್ಲಿ ಭೂಮಿಯನ್ನು ಪಾಲಿಸಿದ ಪುಣ್ಯದ ಶಕ್ತಿಯನ್ನು ಅರ್ಜುನನ ಆ ಬಾಣಕ್ಕೆ ಕೊಟ್ಟು ಶತ್ರುವಿನ ಮೇಲೆ ಬಿಡೆಂದನು. ಅದನ್ನು ಕಂಡು ಸುಧನ್ವನು "ಮುರಮರ್ದನಾ, ಈಗ ಈ ಅರ್ಜುನನ ಬಾಣಕ್ಕೆ ನಿನ್ನ ಮಹತ್ಪುಣ್ಯವನ್ನು ಧಾರೆಯಿತ್ತೆಯಲ್ಲವೆ ಇಷ್ಟು ಮಹಾ ಶಕ್ತಿಯುಕ್ತವಾಗಿ ಬರುತ್ತಿರುವ ಈ ಬಾಣವನ್ನು ಮಧ್ಯದಲ್ಲಿ ಕತ್ತರಿಸಿ ಕೆಡಹದಿದ್ದರೆ, ಭೋಗದಲ್ಲಿ ಅರುಂಧತೀದೇವಿಯೊಂದಿಗೆ ಕೂಡಿದ್ದ ವಸಿಷ್ಠಮಹರ್ಷಿಯನ್ನು ನಿಷ್ಕರುಣೆಯಾಗಿ ಕೊಂದವನ ದುರ್ಗತಿಯು ತನಗಾಗಲೆಂದು ಪ್ರತಿಜ್ಞೆ ಮಾಡಿ, ಮಾರ್ತಾಂಡತೇಜದಿಂದ ಎದುರಾಗಿಬರುತ್ತಿದ್ದ ಆ ಬಾಣವನ್ನು ಎರಡು ತುಂಡಾಗಿ ಕತ್ತರಿಸಿದನು.

ಕೂಡಲೇ ಸುಧನ್ವನ ಸೈನ್ಯದಲ್ಲಿ ಅನೇಕ ಬಗೆಯ ರಣವಾದ್ಯಗಳು ಬಾಜಿಸಲ್ಪಟ್ಟುವು, ಭಟರು ಹೊಗಳತೊಡಗಿದರು. ಅರ್ಜುನನಿಗೆ ರೋಷವು ಕ್ಷಣಕ್ಷಣಕ್ಕೂ ಹೆಚ್ಚುಹೆಚ್ಚಾಗತೊಡಗಿತು. ಆಗಲಾತನು, ಇನ್ನು ಉಳಿದಿರುವ ಅಸ್ತ್ರವೊಂದರಿಂದ ಈ ಶತ್ರುವಿನ ಶಿರವನ್ನು ತರಿಯದಿದ್ದರೆ, ಹರಿಹರರಲ್ಲಿ

ಭೇದಭಾವನೆಯನ್ನು ಕಲ್ಪಿಸಿ ನಿಂದನೆಮಾಡಿದ ನರಾಧಮನ ದುರ್ಗತಿಯು ತನಗಾಗಲೆಂದು ಪುನಃ ಮೂರನೆಯಸಾರಿ ಬಾಣವನ್ನು ಗಾಂಡೀವ ಧನುಸ್ಸಿನಲ್ಲಿ ಏರಿಸಿದನು. ಆಸಾಂ ಶ್ರೀಕೃಷ್ಣಮೂರ್ತಿಯು, ಬಾಣದ ಮೂಲಭಾಗಕ್ಕೆ ಬ್ರಹ್ಮನನ್ನು ಆವಾಹನೆ ಮಾಡಿ ನಿಲ್ಲಿಸಿ, ಬಾಣದ ಅಂತ್ಯಭಾಗಕ್ಕೆ ಪರಶಿವನನ್ನು ಆವಾಹನೆಮಾಡಿ ಕೂಡಿಸಿ, ಸಾಯಕದ ಮಧ್ಯಭಾಗದಲ್ಲಿ ತಾನೇವ್ಯಾಪಿಸಿ, ಹಿಂದೆ ರಾಮಾವತಾರದಲ್ಲಿ ದೇಹವಿದ್ದಷ್ಟು ದಿನಗಳೂ ಪುಣ್ಯಕಾರ್ಯಗಳನ್ನು ಮಾಡಿ ಭೂಮಿಯನ್ನು ಪಾಲಿಸಿದುದರಿಂದ ಪ್ರಾಪ್ತವಾಗಿದ್ದ ಅಗಣಿತ ಪುಣ್ಯರಾಶಿಯನ್ನು ಆಬಾಣಕ್ಕೆ ಹೇರಿ ಶಕ್ತಿಗೊಳಿಸಿದನು.

ಅಲ್ಲದೆ, ವೈರಿವೀರರ ಹೃದಯಗಳನ್ನು ಭೇದಿಸುವಂತಹ ಪಾಂಚಜನ್ಯವನ್ನು ಧ್ವನಿಮಾಡಿದನು. ಅರ್ಜುನನು ತನ್ನ ದೇವದತ್ತವನ್ನು ಪೂರೈಸಿದನು. ರಥಾಗ್ರದಲ್ಲಿದ್ದ ಹನುಮನು ದಿಕ್ತಟಗಳು ಒಡೆಯುವಂತೆ ಆರ್ಭಟಿಸಿದನು. ಆ ಅಗಾಧಶಬ್ದವು ಸೂರ್ಯಚಂದ್ರಗ್ರಹಗಳನ್ನು ಅಂತರಿಕ್ಷದಿಂದ ಉದುರಿಸುವುದೋ ಸಪ್ತಸಾಗರ ಪರಿವೃತವಾದ ಭೂಗೋಳವನ್ನು ಕೀಳುವುದೋ ಎಂಬಂತೆ ಭಯಪ್ರದವಾಗಿರಲು, ಸುಧನ್ವನು ಈ ಆಟೋಪವನ್ನು ಕಂಡು, ''ಭಕ್ತವತ್ಸಲಾ, ಈಗನಿನ ಪುಣ್ಯರಾಸಿಯನ್ನು ಸೂರೆಗೊಂಡವನು ನಾನೋ ಅರ್ಜುನನೋ ಪರಿಭಾವಿಸು. ಈಗ ನಿಮ್ಮ ಮಹಾಶಕ್ತಿಯಿಂದ ಬರುತ್ತಿರುವ ಈ ಬಾಣವನ್ನು ಮಧ್ಯದಲ್ಲಿ ಖಂಡಿಸದಿದ್ದರೆ, ನನನ್ನು ನನ್ನ ತಾಯಿಯು ವೀರಪುತ್ರನೆಂಬಳೇ, ಪತ್ನಿಯು ನನ್ನನು ಗಂಡನೆಂದು ಭಾವಿಸುವಳೇ, ನಾನು ವೀರನಾದ ಪಿತನಿಗೆ ತಕ್ಕ ಸುತನೆನಿಸಿಕೊಳ್ಳಲು ಅರ್ಹನಾಗುವೆನೇ ಮತ್ತೂ ಕೇಳು, ಈಗ ನನ್ನ ಕೊರಳ ಸರಿಸಕ್ಕೆ ಬರುತ್ತಿರುವ ಈ ಬಾಣವನ್ನು ಮಧ್ಯದಲ್ಲಿ ನಾನು ಖಂಡಿಸದಿದ್ದರೆ, ಬ್ರಾಹ್ಮಣರು ಕಾಶೀಕ್ಷೇತ್ರದ ಮಣಿಕರ್ಣಿಕಾಘಟ್ಟದಲ್ಲಿ ಸ್ನಾನಮಾಡಿ ಶಿವರಾತ್ರಿಯದಿನ ಶಾಸ್ತ್ರವಿಧಿಯಿಂದ ವಿಶ್ವೇಶ್ವರಸ್ವಾಮಿಯನ್ನು ಆರಾಧಿಸಿರಲು, ಅಂತಹ ಪೂಜೆಯನ್ನು ಲೇಶಮಾತ್ರವಾದರೂ ಜಿಗುಪ್ಸೆಪಡದೆ ಎಡದಕಾಲಿನಿಂದ ನೂಕಿದ ಪಾಮರನ ದುರ್ಗತಿಯು ನನಗಾಗಲಿ'' ಎಂದು ಪುನಃ ಪ್ರತಿಜ್ಞೆಮಾಡಿ, ಅತ್ಯುತ್ಕಟ ಉತ್ಸಾಹದಿಂದ ಆಶರವನ್ನು ಎದುರುನೋಡುತ್ತಿದ್ದನು. ಅಷ್ಟರಲ್ಲಿ, ತ್ರಿಮೂರ್ತಿಗಳ ದಿವ್ಯಶಕ್ತಿಯಿಂದಲೂ, ಶ್ರೀಕೃಷ್ಣನ ರಾಮಾವತಾರದ ಪುಣ್ಯಶಕ್ತಿಯಿಂದಲೂ, ಅರ್ಜುನನ ಧನುರ್ವೇದಾಭ್ಯಾಸದ ಶಕ್ತಿಯಿಂದಲೂ, ಮತ್ತೂ

ಆತನ ಆಳ್ತನದ ದೇಹಶಕ್ತಿಯಿಂದಲೂ ಕೂಡಿ, ಧನಂಜಯನು ಕಿವಿವರೆಗೆ ತೂಗಿ ಎಳೆದು ಬಿಟ್ಟುದರಿಂದ ಕೋಲ್ಮಿಂಚಿನ ಭ್ರಾಂತಿಯನ್ನುಂಟುಮಾಡುತ್ತಾ, ಉಭಯಬಲಗಳಿಗೂ ಅತಿಶಯ ಕೌತುಕ-ಭೀತಿಗಳನ್ನುಂಟುಮಾಡುತ್ತಾ, ಆಶರವು ವಾಯುಮಾರ್ಗವನ್ನು ಭೇದಿಸಿಕೊಂಡು ಶತ್ರುಸಮುಖಕ್ಕೆ ಬಂದಿತು.

ಮೂರುಲೋಕಕ್ಕೂ ಭಯಪ್ರದವಾದ ಆ ಕ್ರೂರಬಾಣವು ಎದುರಾಗಿ ಬರುತ್ತಿದ್ದರೂ, ಆಹಾ, ಆ ವೀರವರನು ಬೆಚ್ಚಿದನೆ, ಬದರಿದನೆ ಮನಸ್ಸಿನಲ್ಲಿ ಲೇಶಾಂಶವಾದರೂ ಭಯಶಂಕೆತೋರಿತೆ. ಇಲ್ಲ, ಇಲ್ಲ ಕಣ್ಣೆವೆಯು ಅಳುಕಲಿಲ್ಲ, ಶೌರ್ಯದಕೆಚ್ಚು ಕುಂದಲಿಲ್ಲ ಸುಧನ್ವನು, ಹಾಗೆಬರುತ್ತಿದ್ದ ಮಹಾಶರಕ್ಕೆ ಪ್ರತ್ಯಸ್ತ್ರವನ್ನು ಪ್ರಯೋಗಿಸಿ, ಒಡನೆ ಅದನ್ನು ಎರಡುತುಂಡಾಗಿ ಕತ್ತರಿಸಿಬಿಟ್ಟನು ಬಾಣದ ಹಿಂದಿನ ಅರ್ಧವು ಧರೆಗೆಬಿತ್ತು, ಆದರೂ ಮುಂದಿನ ಅರ್ಧ ಭಾಗದ ಬಾಣವು, ನೇರವಾಗಿ ಆವೀರನ ಕಂಠವನ್ನು ಕತ್ತರಿಸಲು, ಕರ್ಣಕುಂಡಲ ಕಿರೀಟಯುಕ್ತವಾದ ಸುಧನ್ವರಾಜಪುತ್ರನ ಶಿರಸ್ಸು, ಅಚ್ಯುತ ಮುರಾರಿ ಕೇಶವ ರಾಮಾ ಎನ್ನುತ್ತಾ ದೇಹದಿಂದಬೇರ್ಪಟ್ಟು ಅಂತರಿಕ್ಷಕ್ಕೆ ಹಾರಿ ಶ್ರೀಕೃಷ್ಣಸ್ವಾಮಿಯ ಪಾದಾರವಿಂದದ ಎಡೆಯಲ್ಲಿ ಬಂದು ಬಿದ್ದಿತು.

ಇಂತು ಬಾಣತ್ರಯದಿಂದ ಶತ್ರುವನ್ನು ವಧಿಸುತ್ತೇನೆಂದು ಮಾಡಿದ ಭಕ್ತನಾದ ಅರ್ಜುನನ ಪ್ರತಿಜ್ಞೆಯನ್ನೂ, ಆ ಬಾಣತ್ರಯಗಳನ್ನು ಮಧ್ಯದಲ್ಲೇ ಖಂಡಿಸುವೆನೆಂದು ಮಾಡಿದ ಭಕ್ತನಾದ ಸುಧನ್ವನ ಪ್ರತಿಜ್ಞೆಯನ್ನೂ ಶ್ರೀಹರಿಯು ಪರಿಪೂರ್ತಿಗೊಳಿಸಿದನಾದರೂ, ವೀರಭಟನಾದ ಸುಧನ್ವನು ತನ್ನ ಸ್ವಾಮಿಯ ಪಾದಾರವಿಂದದಲ್ಲೇ ಶಿರವನ್ನು ಒಪ್ಪಿಸಿ ನಿರ್ಯಾಣವನ್ನು ಹೊಂದಿದನು.

---

## ಉ ಪ ಸಂ ಹಾ ರ



ತರುವಾಯ ಶ್ರೀಕೃಷ್ಣಸ್ವಾಮಿಯು ಕರುಣಾಕಟಾಕ್ಷದಿಂದ ಆ ಶಿರಸ್ಸನ್ನು ಈಕ್ಷಿಸಿ, ತನ್ನ ಭಕ್ತವರನಾದ ಸುಧನ್ವನಿಗೆ ವೈಕುಂಠದಲ್ಲಿ ಉತ್ತಮ ಪದವಿಯನ್ನು ಅನುಗ್ರಹಿಸಿ, ಆ ತಲೆಯನ್ನು ತಂದೆಯಾದ ಹಂಸಧ್ವಜನಲ್ಲಿಗೆ ಎಸೆ

ದನು. ಆ ರಾಜನು ಧೀರವರನಾದ ತನ್ನ ಮಗನ ಮೃತ್ಯುವಿಗಾಗಿ ಅತಿಶಯುವಾಗಿ ಶೋಕಿಸುತ್ತಿರಲು, ಆತನ ನಾಲ್ಕನೆಯ ಮಗನಾದ ಸುರಥನು, ತಂದೆಯನ್ನು ಸಮಾಧಾನಗೊಳಿಸಿ, ಕ್ಷತ್ರಿಯಸಂಧದ ಛಲವನು ತೀರಿಸಿಕೊಳ್ಳಲಿಕ್ಕಾಗಿ ಸಮರಸನ್ನದ್ಧನಾಗಿ ಅರ್ಜುನನೊಂದಿಗೆ ಯುದ್ಧಕ್ಕೆ ಎದುರಾದನು ಹಂಸಧ್ವಜನು ಪುತ್ರಮೋಹವನ್ನು ತೊರೆದು ಸುಧನ್ವನ ತಲೆಯನ್ನು ಪುನಃ ಶ್ರೀಹರಿಯ ಪಾದಮೂಲದಲ್ಲಿ ಬೀಳಿಸಲು, ಭಕ್ತವತ್ಸಲನಾದ ಮುರಾರಿಯು ಆ ವೀರಾಗ್ರಣಿಯ ಶಿರಸ್ಸು ಪರಮೇಶ್ವರನ ರುಂಡಮಾಲೆಯನ್ನಲಂಕರಿಸಲು ಯೋಗ್ಯವಾದುದೆಂದು ಅದನ್ನು ಅಲ್ಲಿಗೆ ಕಳುಹಿಸಿದನು. ಪುನಃ ಇತ್ತ ರಣರಂಗದಲ್ಲಿ ಸುರಥಾರ್ಜುನರಿಗೆ ಅತ್ಯಂತ ಭಯಂಕರವಾದ ಯುದ್ಧವಾಯಿತು. ಕೊನೆಗೆ ಸುರಥನೂ ಪರಾಜಿತನಾಗಿ ಮೃತನಾದನು ಆಗ ಹಂಸಧ್ವಜನು ಕ್ಷತ್ರಿಯಸಂಧವನ್ನು ಪರಿಪಾಲಿಸಲೋಸುಗ ಅರ್ಜುನನೊಂದಿಗೆ ಯುದ್ಧಮಾಡಲು ತಾನೇ ಎದುರಾದನು. ಮಹಾಪರಾಕ್ರಮಿಯೂ, ಪುತ್ರಶೋಕದಿಂದ ನೊಂದ ಹೃದಯವುಳ್ಳವನೂ ಆದ ಆ ವೃದ್ಧರಾಜನನ್ನು ಆಗ ಶ್ರೀಕೃಷ್ಣಮೂರ್ತಿಯು, ತನ್ನ ರಥದಿಂದ ಇಳಿದುಬಂದು ಆಲಂಗಿಸಿ ಸಮಾಧಾನಗೊಳಿಸಿದನು ಮುಂದ ಅರ್ಜುನ ಹಂಸಧ್ವಜರಿಗೆ ಮೈತ್ರೀಭಾವವುಂಟಾಯಿತು ಹಂಸಧ್ವಜನು ಧರ್ಮಜನ ಯಜ್ಞಕ್ಕೆ ಸಹಾಯಕನಾಗಲು ಸಮ್ಮತಿಸಿ ತನ್ನ ಸರ್ವಸ್ವವನ್ನೂ ಒಪ್ಪಿಸಿ ಯಜ್ಞಾಶ್ವದ ರಕ್ಷಣೆಗಾಗಿ ತಾನೂ ಪಾಂಡವಸೇನೆಯೊಂದಿಗೆ ನಡೆದನು

ಹೀಗೆ ತಾನು ಅಪ್ರತಿಮ ವೀರನಾಗಿದ್ದರೂ ಸುಧನ್ವನು, ಮಾತಾಪಿತೃಭಕ್ತನಾಗಿಯೂ, ಮಹಾರಾಜ ಪುತ್ರನಾಗಿದ್ದರೂ ವೈರಾಗ್ಯಶೀಲನಾಗಿ! ಮಹಾವಿಷ್ಣುಭಕ್ತನಾಗಿಯೂ, ಯೌವನಸ್ಥನೂ ಮಹಾವೀರ್ಯವೃದ್ಧಿಯುಳ್ಳವನೂ ಆಗಿದ್ದರೂ ಏಕಪತ್ನೀವ್ರತಸ್ಥನಾಗಿಯೂ, ವೀರಕ್ಷಾತ್ರಧರ್ಮ ರಕ್ಷಕನಾಗಿಯೂ ಇದ್ದು ತನ್ನ ಧರ್ಮದಲ್ಲೇ ವೀರಸ್ವರ್ಗವನ್ನು ಗಳಿಸಿಕೊಂಡನಲ್ಲವೆ! ಇಂತಹ ಮಹೋನ್ನತ ಗುಣಗಳ ಆದರ್ಶವು ನಮ್ಮ ಕರ್ಣಾಟಕ ತರುಣರಲ್ಲೂ ಉತ್ಸಾಹವನ್ನುಂಟುಮಾಡಿ ದರ್ಮಮಾರ್ಗ ಗಮನಾಪೇಕ್ಷೆಯನ್ನೂ, ಸ್ವಧರ್ಮಪಾಲನಾಕಾಂಕ್ಷೆಯನ್ನೂ ಹರಿಗುರುಮಾತಾಪಿತೃ ಭಕ್ತಿಗಳನ್ನೂ ಅವರಲ್ಲಿ ಅಭಿವೃದ್ಧಿಗೊಳಿಸಿ, ದೇಶಸೇವೆ ಭಾಷಾಸೇವೆಗಳಿಗಾಗಿ ತನುಮನಧನಗಳನ್ನು ಸಮರ್ಪಿಸಿ ಪ್ರತಿಜ್ಞಾಪೂರ್ವಕವಾಗಿ ಶ್ರಮಿಸುವಂತಹ ದಾರ್ಢ್ಯವನ್ನು ಉಂಟುಮಾಡಲಿ.

ತ ಭಾ ಸು.

-: ಶ್ರೀರಾಮಸಹಾಯಃ :-

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

**ಮುನ್ನುಡಿ:—**

**ಯದಾಯದಾಹಿ ಧರ್ಮಸ್ಯ । ಗ್ಲಾನಿರ್ಭವತಿ ಭಾರತ ॥**

**ಅಭ್ಯುತ್ಥಾನಮಧರ್ಮಸ್ಯ । ತದಾತ್ಮಾನಂ ಸೃಜಾಮ್ಯಹಂ ॥ (ಭಗವದ್ಗೀತಾ)**

"ಯಾವಕಾಲದಲ್ಲಿ ಪ್ರಪಂಚದಲ್ಲಿ ಧರ್ಮವು ಮಲಿನವಾಗಿ-ಕಳಗುಂದಿ ಅಧರ್ಮವು ಅಭಿವೃದ್ಧಿಯಾಗುವುದೋ ಅಂತಹ ಸಂದರ್ಭದಲ್ಲಿ ಧರ್ಮರಕ್ಷಣೆಗಾಗಿ ನಾನು ಅವತಾರಮಾಡುತ್ತೇನೆ" ಎಂಬದಾಗಿ ಶ್ರೀಕೃಷ್ಣಪರಮಾತ್ಮನು ಗೀತಾಶಾಸ್ತ್ರದಲ್ಲಿ ಅಪ್ಪಣೆಕೊಡಿಸಿರುತ್ತಾನೆಯಷ್ಟೆ! ಈ ವಾಕ್ಯಕ್ಕೆ ಅನುಸಾರವಾಗಿ ಪ್ರಪಂಚದಲ್ಲಿ ಅಧರ್ಮವು ಸರ್ವವಿಧಗಳಿಂದಲೂ ಹೆಚ್ಚಿ ಸಜ್ಜನರು ಸರಿಯಾದ ಮಾರ್ಗವನ್ನು ಕಾಣದೆ ತೊಳಲುತ್ತಿರುವಾಗ್ಗೆ ತಾನೇ ಅವತರಿಸಿ ಅಥವಾ ತನ್ನ ಭಕ್ತಶ್ರೇಷ್ಠರಲ್ಲಿ ಯಾರನ್ನಾದರೂ ಅವತರಿಸುವಂತೆ ನಿಯಮಿಸಿ ಕಳುಹಿಸಿ ಜಗತ್ತಿಗೆ ತರಣೋಪಾಯವನ್ನು ತೋರಿ ದಯಾನಿಧಿಯಾದ ಆ ಪರಮಾತ್ಮನು ಸದಾ ರಕ್ಷಿಸುತ್ತಿರುವನು.

ಪ್ರಪಂಚದ ಸುಸ್ಥಿತಿಗೆ ಆವಶ್ಯಕವಾದ ಭಗವಂತನ ಈ ವಾಗ್ದಾನವು ಮೇಲೆಮೇಲೆ ನಿದರ್ಶನಕ್ಕೆ ಬರುತ್ತಿರುವಂತೆ ಅನೇಕ ಮಂದಿ ಮಹಾಪುರುಷರು ಈ ದೇಶದಲ್ಲಿ ಜನ್ಮಿಸಿ ಅಜ್ಞಾನಾಂಧಕಾರದಲ್ಲಿ ಮಾರ್ಗತಿಳಿಯದೆ ಕಷ್ಟಪಡುತ್ತಿದ್ದವರನ್ನು ಉದ್ಧರಿಸಿದ ಉದಾಹರಣೆಗಳಿವೆ. ಆದರೆ ಹಾಗೆ ಅವತರಿಸಿದ ಧರ್ಮೋದ್ಧಾರಕರ ಬೋಧನೆಗಳು ವಿದ್ಯಾವಂತರಲ್ಲದ ಜನಸಾಮಾನ್ಯಕ್ಕೆ ಸರಿಯಾಗಿ ಬೋಧಿಸಲ್ಪಡದಿದ್ದರೆ ಮಾತ್ರ ಆ ಧರ್ಮೋದ್ಧಾರಕರ ಉದ್ದೇಶಕ್ಕೆ ಸರಿ ವಿರುದ್ಧವಾದ ಆಚರಣೆಯು ಪ್ರಬಲಿಸುವುದು. ಆದುದರಿಂದ ಧರ್ಮೋದ್ಧಾರಕ್ಕಾಗಿ ಅವತರಿಸುವ ಮಹಾಪುರುಷರು ಗ್ರಂಥಾದಿಗಳನ್ನು ರಚಿಸಿ ಪರವಾದಿಗಳಾದ ಪಂಡಿತರನ್ನು ಜಯಿಸಿ ತಮ್ಮ ಸಿದ್ಧಾಂತಗಳನ್ನು ಸ್ಥಾಪಿಸುವುದು ಎಷ್ಟು ಆವಶ್ಯಕವೋ ಆ ತಮ್ಮ ಸಿದ್ಧಾಂತಗಳ ನಿಜ್ತಾರ್ಥದ ವಿಷಯದಲ್ಲಿ ಜನಸಾಮಾ

ಸ್ವವು ಅಪಾರ್ಥಮಾಡಿಕೊಂಡು ದುರ್ಮಾರ್ಗವನ್ನು ಹಿಡಿಯದಂತೆ ಅವರಿಗೆ ಬಳಕೆಯಲ್ಲಿರುವ ದೇಶಭಾಷೆಗಳಲ್ಲಿ ಅದೇ ತತ್ವಗಳು ಪ್ರಚುರವಾಗುವಂತೆ ಗಮನಿಸುವುದೂ ಅಷ್ಟೇ-ಮತ್ತು ಅದಕ್ಕಿಂತಲೂ ಹೆಚ್ಚು-ಅವಶ್ಯಕವಾಗಿದೆ.

ಹಿಂದೆ ಬೌದ್ಧಧರ್ಮದ ಪ್ರಾಬಲ್ಯದಿಂದ ಅತ್ಯಂತ ಕ್ಷೀಣವಾಗಿದ್ದ ಬ್ರಾಹ್ಮಣಧರ್ಮವನ್ನು ವೈದಿಕ ಧರ್ಮರೀತ್ಯಾ ಉದ್ಧರಿಸಲು ಪ್ರಯತ್ನಿಸಿ ಗೀತಾದಿ ಶಾಸ್ತ್ರಗಳಿಗೆ ಭಾಷ್ಯಗಳನ್ನು ಬರೆದು, ಷಣ್ಮತಗಳನ್ನು ಸ್ಥಾಪಿಸಿ, ಆದ್ಯಂತ ಭಾರತದೇಶವನ್ನು ಸಂಚರಿಸಿ ನಮ್ಮ ಸನಾತನ ಧರ್ಮವನ್ನು ಪುನರುದ್ಧಾರಮಾಡಿದ ಶ್ರೀ ಶಂಕರಾಚಾರ್ಯರು ಬೋಧಿಸಿದ ತತ್ವವೂ ಸಹ ಕೆಲವು ಕಾರಣಗಳಿಂದ ಜನಸಾಮಾನ್ಯದಲ್ಲಿ ಅಪಾರ್ಥವಾಗಲು ಅವಕಾಶವುಂಟಾಯಿತು. ಐಕ್ಯವಾದದಲ್ಲಿ ಒಬ್ಬೊಬ್ಬನೂ 'ನಾನೇ ದೇವರು' ಎಂದೂ 'ಪಾಪ ಬಂಧವೂ ಇಲ್ಲ, ಎಲ್ಲವೂ ಒಂದೇ' ಎಂದೂ-ಅದ್ವೈತಶಾಸ್ತ್ರದೃಷ್ಟಿಯಿಂದಲ್ಲಲ್ಲ, ಅಹಂಕಾರ ಮನುಷ್ಯರಿಗೆ ವಶನಾಗಿ ನುಡಿಯುತ್ತಾ ದುರ್ಮಾರ್ಗಗಳಲ್ಲಿ ಪ್ರವರ್ತಿಸಲು ಪ್ರಾರಂಭವಾಯಿತು. ಆ ಏಕಮತಕಾಲದಲ್ಲಿ ಎಂದರೆ ಹನ್ನೆರಡನೆಯ ಶತಮಾನದಲ್ಲಿ ಶ್ರೀಮನ್ಮಧ್ವಾಚಾರ್ಯರು ಅವತರಿಸಿ ವಿಷ್ಣುಸರ್ವೋತ್ತಮತ್ವವನ್ನೂ, ಭಕ್ತಿಮಾರ್ಗದ ಪ್ರಾಧಾನ್ಯತೆಯನ್ನೂ, ಪಂಚಭೇದಗಳನ್ನೂ ತಾರತಮ್ಯ ವಿವೇಕವನ್ನೂ ಬೋಧಿಸಿ ಗೀತಾಭಾಷ್ಯಾದಿ ಅನೇಕ ಗ್ರಂಥರತ್ನಗಳನ್ನೂ ರಚಿಸಿ ದ್ವೈತಮತವನ್ನು ಸ್ಥಾಪಿಸಿದರು.

ಈ ದ್ವೈತಮತಪ್ರಚಾರದಲ್ಲಿ ಮೇಲ್ಕಂಡಂತಹ ಅವ್ಯವಸ್ಥೆಯು ಕಂಡುಬರಲಿಲ್ಲ. ಇದರಲ್ಲಿ ಪಂಡಿತಮಂಡಲ-ಪಾಮರಮಂಡಲಗಳೆರಡಕ್ಕೂ ಯೋಗ್ಯಸಾಧನವಾಗಿ ವ್ಯಾಸಕೂಟ-ದಾಸಕೂಟಗಳು ಏರ್ಪಟ್ಟವು. ವ್ಯಾಸಕೂಟದವರು ಆಚಾರ್ಯರ ಭಾಷ್ಯಾದಿಗಳನ್ನು ದೇವವಾಣಿಯಲ್ಲಿ ಪ್ರಚುರಗೊಳಿಸುತ್ತಾ ಪರಮತಗಳನ್ನು ಖಂಡಿಸುತ್ತಾ ಸ್ವಮತಪಕ್ಷವನ್ನು ಸಮರ್ಥನೆಮಾಡುತ್ತಾ ಬರುತ್ತಿರಲು ದಾಸಕೂಟದವರು ಪಾಮರವರ್ಗಕ್ಕೆ ಎಂದರೆ ಜನಸಾಮಾನ್ಯಕ್ಕೆ ದೂರವಾಗಿದ್ದ ಆ ಸಂಸ್ಕೃತ ಗ್ರಂಥಗಳಲ್ಲಿದ್ದ ಆಚಾರ್ಯರ ಅಮೋಘತತ್ವಗಳನ್ನು ದೇಶಭಾಷೆಯಲ್ಲಿ ಮೃದುಮಧುರವಾದ ಪದಪದ್ಯಗಳ ಮೂಲಕ ಜನಸಮಾಜದಲ್ಲಿ ಪ್ರಸಿದ್ಧಪಡಿಸಿ ಜನಗಳಲ್ಲಿ ಭಕ್ತಿಮಾರ್ಗದ ಬೀಜವನ್ನು ಬಿತ್ತಿ ಬೆಳೆಸಿ ಅಜ್ಞಾನಾಂಧಕಾರದಲ್ಲಿ ದಾರಿಕಾಣದೆ ತೊಳಲುತ್ತಿದ್ದ ಕೋಟ್ಯಾಂತರ

ಮಾನವ ಪ್ರಾಣಿಗಳ ಉದ್ಧಾರಕ್ಕೆ ಕರ್ತೃಗಳಾದರು. ಇಂತಹ ದಾಸಕೂಟಕ್ಕೆ ಸಮ ಸಂಸ್ಕೃತ ಚರಿತ್ರನಾಯಕರಾದ **ಶ್ರೀ ಪುರಂದರ ದಾಸರೇ** ಸಾರ್ವಭೌಮರು. ಈ ಮಹಾಮಹಿಮರು ಪುತ್ರರಾಗಿ ನಮ್ಮ ಈ ಕನ್ನಡನಾಡಿನಲ್ಲಿ ಹುಟ್ಟಿ ಬೇಡು ಲೌಕಿಕಜೀವಿತದಲ್ಲಿ ತಮಗಿದ್ದ ಕೋಟ್ಯಾಂತರ ದ್ರವ್ಯವನ್ನು ತ್ಯಾಗಮಾಡಿ, ನರರು ವೈರಾಗ್ಯ ಚಕ್ರವರ್ತಿಗಳೆನಿಸಿ ಶ್ರೀಹರಿಭಕ್ತಿಯೆಂಬ ಕಲ್ಪತರುವನ್ನು ತಮ್ಮ ಮೃದುಮಧುರ ಪದಪದ್ಯಗಳೆಂಬ ಅಮೃತ ಜಲಸೇಚನದಿಂದ ದಿನದಿನಕ್ಕೆ ಅಭಿವೃದ್ಧಿಗೊಳಿಸಿ ಲೋಕವನ್ನುದ್ಧರಿಸಿದರು. ಅವರ ಆ ಪವಿತ್ರ ಚರಿತ್ರೆಯನ್ನು ಕನ್ನಡಿಗರು ಓದಿ ಈ ರೀತಿ ಮಹಾಪುರುಷರ ಜೀವಿತಗಳನ್ನು ಕನ್ನಡನಾಡಿಗೆ ಒದಗಿಸಿಕೊಡಲು ಹಣಗುತ್ತಿರುವ ಗ್ರಂಥಮಾಲೆಯನ್ನು ಆಶೀರ್ವದಿಸಿ ಸ್ವಹಸ್ತ ಧನಹಸ್ತಗಳಿಂದ ಅವರ ಅಭಿವೃದ್ಧಿಗೆ ಸಹಕರಿಸಿ ಪ್ರೋತ್ಸಾಹಿಸಲೆಂದು ಪ್ರಾರ್ಥಿಸುತ್ತೇನೆ

ಬೆಂಗಳೂರು ಸಿಟಿ
೩೦—೯—೧೯೨೫

**ಇತಿ ಸುಜನ ವಿಧೇಯ,**
**ಯಂ. ರಾಮರಾವ್.**

---

ಶ್ರೀ ದಾಸವರ್ಯ ವಿಜಯರಾಯರ ಪರಂಪರೆಯಲ್ಲಿ ಬಂದ ಸುಪ್ರಸಿದ್ಧ ಮುದ್ದುಮೋಹನದಾಸರ ಪ್ರಿಯಶಿಷ್ಯ ದೊಡ್ಡಬಳ್ಳಾಪುರದ ಬಾಲಕೃಷ್ಣ ದಾಸರಾಯರವರ ಮಕ್ಕಳು ಮ|| ರಾ|| ರಾ|| ಲಕ್ಷ್ಮೀನಾರಾಯಣರಾಯರವರಿಂದ ವಿರಚಿತವಾದ **ಶ್ರೀ ಪುರಂದರದಾಸರ ಮೇಲಿನ ಕೀರ್ತನೆ**

(**ಈ ಕೀರ್ತನೆಯು ೨೧ ನುಡಿಗಳಲ್ಲಿ ಪೂರ್ಣವಾಗಿದೆ ಕಥಾಸಂದರ್ಭವನ್ನನುಸರಿಸಿ ಕೆಲಕೆಲವು ನುಡಿಗಳನ್ನು ಪ್ರತಿ ಅಧ್ಯಾಯದ ಪ್ರಾರಂಭದಲ್ಲಿಯೂ ಕೊಡಲಾಗಿದೆ**)

**ರಾಗ—ಮೋಹನ—ಅಟತಾಳ**

(ಸಿರಿರಮಣ ತವಚರಣ ದೊರಕುವುದು ಹ್ಯಾಂಗಿನ್ನು) ಎಂಬಂತೆ

ಗುರು ಪುರಂದರರಾಯ | ದುರಿತತಿಮಿರಕೆಸೂರ್ಯ | ಶರಣಜನಭಾಗ್ಯೋದಯಾ || ನರಹರಿಯ ದಾಸಾರ್ಯ | ಮರುತಸುತ ಪರಿಚರ್ಯ | ಶಿರಬಾಗಿ ಮುಗಿವೆ ಕೈಯಾ ಜೀಯಾ || ಪ ||

ಘೋರತರಸಂಸಾರ | ಸಾರತರವೆಂದರಿತು | ಪಾರಮಾರ್ಥಿಕವ ತೊರದು || ಕ್ರೂರಕರ್ಮವಬಿಡದು | ಘೋರನರಕವಬೆಂದು | ಗಾರಾಗಿ ಪೋಪರಂದೂ || ನಾರದರಸನ್ನಿಂದು | **ನಾರಾಯಣಾ** ಎಂದು | ಚೀರಿ ಕಾಧ್ವನಿಗೆ ಅಂದೂ || ಘೋರಪಾತಕವೆಲ್ಲ | ದೂರಾಗಿ ಸ್ವರ್ಗವನು | ಸೇರಿ ಸುಖಿಸಿದರು ಎಂದೂ, ಅಂದೂ || ೧ ||

---

**(ಎರಡನೆಯ ಅಧ್ಯಾಯದ ಪ್ರಾರಂಭದಲ್ಲಿ ಹೇಳಿಕೊಳ್ಳತಕ್ಕದು)**

ಸರಸಿಜಾಕ್ಷನಸ್ತುತಿಸಿ | ವರಪಡೆದುಧರಣಿಯೊಳು | ಸುರಸಕನ್ನಡ ಪಾಠವಿ || ಸಿರಿಯಿಂದಲೊಪ್ಪುತಿಹ | ಪುರಂದರಗಡದೊಳಗೆ | ಇರುವ ಭೂಸುರವಂಶದಿ || ಹಿರಿಯ ಸಾವ್ಕಾರ | ವರದಪ್ಪನಾ ಸತಿಯಾ | ವರ ಗರ್ಭದಲ್ಲಿ ಜನಿಸಿದಿ || ನರರಂತೆ ತೋರುತ್ತ | ಲೌಕಿಕಕೆ ಮರುಳಾಗಿ | ಸರ್ವಭಾಗ್ಯವಗಳಿಸಿದಿ, ಮೆರೆದಿ || ೨ ||

---

**(ಮೂರನೆಯ ಅಧ್ಯಾಯದ ಪ್ರಾರಂಭದಲ್ಲಿ ಹೇಳಿಕೊಳ್ಳತಕ್ಕದು)**

ಚಿನಿವಾರ ವ್ಯಾಪಾರ | ದನುವಂತು ನವಕೋಟಿ | ಧನಕಧಿಪನೆಂದೆನಿಸುತ || ಧನಕನಕ ವಸ್ತ್ರವಾ | ಹನನಿಚಯಸಂಗ್ರಹದಿ | ತನುಮನಂಗಳ ಪ್ರೀಣಿಸುತ || ಕನಸಿಲಾದರು ದಾನಧರ್ಮಗಳ ನೆನೆಯದಲೆ ದಿನ ಮಾನಗಳ ಕಳೆಯುತ || ಇನಿತುಮಾಯೆಗೆಸಿಲುಕಿ | ತನ್ನಮರೆತಿರಲಾಗ | ಘನಮಹಿಮ ನಂದನಗು ತಾದಾತಾ || ೩ ||

ಅಂದು ತಾನೊಲಿದಿತ್ತ ಚಂದದಾ ವರಗಳನು | ಇಂದು ಸಲಿಸುವನು, ಎಂದೂ | ಬಂದುಬ್ರಾಹ್ಮಣರೂಪ | ದಿಂದನಿಮ್ಮನುಹರಸಿ | ಕಂದನಿಗೆ ಮುಂಜಿಯೆಂದೂ || ಇಂದಿರಾಪತಿ ತಾನು | ಮಂದಭಾಗ್ಯನತೆರದಿ | ಹೊಂದುವಾಚಿನಲುನಿಂದೂ || ಬಂದುದುಡ್ಡನು ಲೋಭ | ದಿಂದೆಸೆಯಲದನುಳಿದು | ಮುಂದರಿದ ಕರುಣ ಸಿಂಧೂ | ನೊಂದೂ || ೪ ||

---

ಜ್ಞಾನವೈರಾಗ್ಯಸಂಪನ್ನಂ, ಭಕ್ತಿಮಾರ್ಗಪ್ರವರ್ತಕಂ ।
ಪುರಂದರ ಗುರುಂವಂದೇ, ದಾಸಶ್ರೇಷ್ಠಂದಯಾನಿಧಿಂ ॥



ದಾಸವೃಂದ ಶಿರೋಮಣಿಗಳಾದ

ಶ್ರೀ ಪುರಂದರ ದಾಸರು

ಶ್ರೀರಾಮಸಹಾಯಂ

ದಾಸವೃಂದ ಶಿರೋಮಣಿಗಳಾದ

ಶ್ರೀ

# ಪುರಂದರದಾಸರು



**ಅಧ್ಯಾಯ ೧** **"ನಾರದರು"**

ಪುಣ್ಯಜೀವಿಗಳಾದ ಸಾಧುಸಂತರ, ಭಕ್ತಭಾಗವತರ ತೌರುಮನೆಯು ಯಾವುದೆಂಬ ಪ್ರಶ್ನೆಯುಂಟಾದರ ನಮ್ಮ ಮಾತೃಭೂಮಿಯಾದ ಈ ಭಾರತ ದೇಶವೆಂದು ಒಡನೆ ಹೇಳಬಹುದಲ್ಲವೆ? ಯಾವ ದೇಶವು ಪೂರ್ವ, ದಕ್ಷಿಣ, ಪಶ್ಚಿಮೋತ್ತರಗಳೆಂಬ ನಾಲ್ಕು ದಿಕ್ಕುಗಳಲ್ಲೂ ಕಾಶಿ, ರಾಮೇಶ್ವರ, ತಿರುಪತಿ, ಪಂಢರಾಪುರ, ಕಂಚಿ, ಉಡುಪಿ, ದ್ವಾರಕ, ಹರಿದ್ವಾರ ಮುಂತಾದ ದಿವ್ಯ ಕ್ಷೇತ್ರಗಳಿಂದಲೂ ಗಂಗಾ, ಬ್ರಹ್ಮಪುತ್ರಾ, ಗೋದಾವರೀ, ಕೃಷ್ಣ, ಕಾವೇರಿ, ತಾಮ್ರಪರ್ಣಿ, ಭೀಮಾ, ನರ್ಮದಾ, ಸಿಂಧು ಮೊದಲಾದ ಅನೇಕ ಜೀವನದಿಗಳಿಂದಲೂ ಕೂಡಿ ಕಂಗೊಳಿಸುತ್ತಿರುವುದೋ ಅದನ್ನು ಪವಿತ್ರವಾದುದೆನ್ನುವುದಕ್ಕೆ ಕೊರತೆಯೇನು? ಪ್ರಕೃತಿಸಿದ್ಧವಾಗಿ ಇಂತಹ ಪವಿತ್ರ ವಾತಾವರಣವುಳ್ಳ ದೇಶವನ್ನಲ್ಲವೆ ಮಹಾಪುರುಷರು ತಮ್ಮ ಅವತರಣಕ್ಕೆ ಯೋಗ್ಯಸ್ಥಳವೆಂದು ಭಾವಿಸುವರು. ಹಾಗೆಯೇ ಶ್ರೀ ನಾರದ ಮಹರ್ಷಿಗಳೂ ಭಕ್ತೋದ್ಧಾರಕ್ಕಾಗಿ ಪುರಂದರದಾಸರಾಗಿ ಈ ದೇಶದಲ್ಲೇ ಅವತರಿಸಿದರೆಂದು ಚರಿತ್ರೆಯು ಹೇಳುತ್ತಿದೆ.

ನಾರದ (ನಾರ=ಜ್ಞಾನವನ್ನು, ದ=ಕೊಡತಕ್ಕವರು) ಮಹರ್ಷಿಗಳೆಂದರ ಭವಬಂಧವನ್ನು ನಿವೃತ್ತಿಮಾಡಿ ಮೋಕ್ಷಮಾರ್ಗವನ್ನು ಕುರಿತು ಗಮಿಸಲು ಸಾಧಕವಾದ ಜ್ಞಾನವನ್ನು ಪ್ರದಾನಮಾಡುವ ಮಹಾಮಹಿಮರಂದು ಅರ್ಥವಾಗುವುದು. ಅವರು ಅನೇಕಾನೇಕ ಸಂದರ್ಭಗಳಲ್ಲಿ ಮಾಡಿರುವ ಕಾರ್ಯವನ್ನು ನೋಡಿದರ ಅಜ್ಞಾನಾಂಧಕಾರದಲ್ಲಿ ಬಿದ್ದು ತೊಳಲು

ತ್ತಿದ್ದ ಒಬ್ಬೊಬ್ಬ ವ್ಯಕ್ತಿಯನ್ನಾಗಲೀ ಅಥವಾ ಮಾನವನಮುದಾಯವನ್ನ ಆಗಲಿ ಉದ್ಧರಿಸಲು ಈ ಮಹರ್ಷಿಯರು ಯಾವಾಗಲೂ ಪ್ರಯತ್ನಿಸುತ್ತಿದ್ದ ರೆಂಬುದು ವ್ಯಕ್ತವಾಗುವುದು. ಇಂತಹ ಪರೋಪಕಾರಶೀಲರಾದ ಈ ಬ್ರಹ್ಮ ರ್ಷಿಗಳಿಗೂ ಅಪವಾದವು ಪ್ರಾಪ್ತವಾಗಬೇಕೆಂದರೆ ಅಜ್ಞಲೋಕವನ್ನು ಮೆಚ್ಚಿ ಸುವುದು ಯಾವನಿಂದಲೂ ಸಾಧ್ಯವಲ್ಲವೆಂದು ಭಾವಿಸಬೇಕಾಗುತ್ತದೆ ' ಚಾಡಿಕೋರರು-ಜಗಳಗಂಟರು" ಎಂಬ ದುರ್ನಾಮವು ಏಕೋ ಹೇಗೋ ಈ ನಾರದರ ಪವಿತ್ರನಾಮದೊಂದಿಗೆ ಸೇರಿಕೊಂಡುಬಿಟ್ಟಿದೆ ನಮ್ಮಲ್ಲಿ ಪ್ರೀ ಯಿಂದಲೋ ನಿಂದಾಸ್ತುತಿಯೆಂತಲೋ ಇಂತಹ ಮಹಾತ್ಮರ ನಾಮಗಳೊಂ ದಿಗೆ ಆರೋಪಿಸಲ್ಪಟ್ಟಿರುವ ಈ ಕೆಲವು ಕಲ್ಮಷವಾರ್ತೆಗಳು ಅವರ ಪವಿತ್ರ ಚರಿತ್ರೆಯನ್ನು ಎಷ್ಟುಮಟ್ಟಿಗೆ ಕುಂದಿಸಿಬಿಟ್ಟಿವೆಯೆಂದರೆ ನಾರದರೆಂಬ ಮಾತು ಜ್ಞಾಪಕಕ್ಕೆ ಬಂದೊಡನೆಯೇ ಅವರು ಜ್ಞಾನಪ್ರದರಾದ ಮಹಾಮು ನಿಗಳೆಂಬ ಸಂಗತಿಯು ಸ್ಮೃತಿಗೆ ಬರುವ ಮೊದಲು ಅವರು 'ಕಲಹಶೀಲರು ಎಂಬ ಸಂಗತಿಯೇ ಜ್ಞಾಪಕಕ್ಕೆ ಬರುವಂತೆ ಆಗಿಹೋಗಿದೆ. ಕೃಷ್ಣನೆಂದರೆ ಭಗವದ್ಗೀತಾಪ್ರವರ್ತಕನಾದ ಭಕ್ತವತ್ಸಲನಾದ ಪಾವನಮೂರ್ತಿಯೆಂದು ಜ್ಞಾಪಕ ಬರುವುದಕ್ಕೆ ಮುಂಚೆ ಅವನು ಜಾರಚೋರಶಿಖಾಮಣಿ, ಗೋಪೀ ವಸ್ತ್ರಾಪಹಾರಕ' ಮುಂತಾದುವುಗಳೇ ಜ್ಞಾಪಕಕ್ಕೆ ಬಂದು ಆತನ ಪೂಜ್ಯ ಜೀವಿತದಿಂದ ನಮ್ಮ ಜೀವಮಾನ ನಡತೆ ಮುಂತಾದುವುಗಳಮೇಲೆ ಆಗಬೇ ಕಾದ ಪರಿಣಾಮವು ಆಗಲು ಅವಕಾಶವು ಕಡಮೆಯಾಗುತ್ತಿದೆಯಲ್ಲವೆ ? ಇ ನ್ನಾದರೂ ನಮ್ಮವರು ಆ ಪುಣ್ಯಜೀವಿಗಳನ್ನು ಅವರ ಸಹಜ ಗುಣ-ನಾಮ ಗಳಿಂದಲೇ ಸಂಬೋಧಿಸಿ ಅವರ ಚರಿತ್ರೆಯು ದಿವ್ಯ ತೇಜದಿಂದ ಬೆಳಗುವಂತೆ ಆಚರಿಸಬಾರದೇಕೆ ?

ನಾರದ ಮಹರ್ಷಿಗಳಮೇಲೆ ಕಲಹಶೀಲರೆಂದು ಬಂದಿರುವ ಅಪವಾದ ಕ್ಕೆ ಕಾರಣವೇನೆಂದು ಸ್ವಲ್ಪ ಯೋಚಿಸೋಣ ! ಮಹರ್ಷಿವೃಂದದಲ್ಲೆಲ್ಲಾ ಬ್ರಹ್ಮಮಾನಸಪುತ್ರರಾದ ಈ ನಾರದಮಹರ್ಷಿಗಳಿಗೊಬ್ಬರಿಗೆ ಮಾತ್ರ ಸತ್ಯ ಲೋಕ, ಕೈಲಾಸ, ವೈಕುಂಠ, ಭೂತಳಪಾತಾಳಗಳೆಂಬ ಸಮಸ್ತ ಪ್ರದೇಶ ಗಳಿಗೂ ತಡೆಬಡೆಯಿಲ್ಲದೆ ಸಂಚರಿಸಲು ಶಕ್ತಿಯುಂಟೆಂಬುದು ತಿಳಿಯುವುದ ಲ್ಲವೆ ! ಅಲ್ಲದೆ ಬ್ರಹ್ಮ, ವಿಷ್ಣು, ಮಹೇಶ್ವರರು, ಇಂದ್ರಾದಿ ಅಷ್ಟದಿಕ್ಪಾ

ಬಕರು, ಇತರ ದೇವತೆಗಳು, ಗಂಧರ್ವರು, ಯಕ್ಷ ರಾಕ್ಷಸರು ಇವರುಗಳೊಂದಿಗೆ ಮಾತ್ರವಲ್ಲದೆ ದೇವತೆಗಳನ್ನು ಬದ್ಧದ್ವೇಷದಿಂದ ನೋಡುವ ದೈತ್ಯರಲ್ಲೂ ಅವರಿಗೆ ಅತಿಶಯ ಬಳಕೆಯುಂಟು. ಅನೇಕಾನೇಕ ಸಂದರ್ಭಗಳಲ್ಲಿ ಈ ಎಲ್ಲರಿಗೂ ಪ್ರಾಪ್ತವಾಗಿದ್ದ ಅನೇಕ ಸಂಕಟಗಳಿಂದ ಮುಕ್ತವಾಗುವ ಮಾರ್ಗವನ್ನು ಈ ಮಹಾಮಹಿಮರೇ ತೋರಿಸಿರುವರೆಂಬುದು ಪೌರಾಣಿಕ ಸಂಗತಿಗಳಿಂದ ವ್ಯಕ್ತವಾಗುತ್ತದೆ ಬ್ರಾಹ್ಮಣರನ್ನೂ ಮುನಿ ಋಷಿಗಳನ್ನೂ ಕಂಡ ಕ್ಷಣವೇ ಧ್ವಂಸಮಾಡಿಬಿಡಲು ಸಿದ್ಧನಾಗಿರುವ ದೈತ್ಯನಾದರೂ ನಾರದರನ್ನು ಕಂಡನೆಂದರೆ ಒಡನೆ ನಮ್ರನಾಗಿ ಅವರಿಗೆ ಅಡಿಯಾಳಾಗಿ ಅವರಲ್ಲ ಸಲಹೆಯನ್ನು ಕೇಳಿ ಅದರಂತೆ ನಡೆಯತೊಡಗಿದ ಉದಾಹರಣೆಗಳು ಒಂದಲ್ಲ ಎರಡಲ್ಲ ಅನೇಕವಾಗಿವೆ! ಆದರ ಹೀಗೆ ಸಕಲರಿಗೂ ಬೇಕಾದವರಾಗಿ ಪರಮಾಪ್ತರಾಗಿ ಪರೋಪಕಾರಿಗಳಾದ ಇವರಿಗೆ ಕಲಹಪ್ರಿಯರೆಂಬ ಬಿರುದು ಪ್ರಾಪ್ತವಾದುದೇಕೆ !

ಉದಾಹರಣೆಗಾಗಿ ಒಂದು ಸಂದರ್ಭವನ್ನು ತಗೆದುಕೊಳ್ಳೋಣ ! ಹಿರಣ್ಯಾಕ್ಷನು ತನ್ನ ಭುಜಬಲದಿಂದ ಕೊಬ್ಬಿ ತೋಳ ತೀಟೆಯನ್ನು ತೀರಿಸಿಕೊಳ್ಳಲು ತನ್ನೊಂದಿಗೆ ಹೋರಾಡಬಲ್ಲ ಪ್ರಬಲನಾದ ಶತ್ರು ಒಬ್ಬನನ್ನು ತೋರಿಸಬೇಕೆಂಬನು. ಅವನು ಮೂರ್ಖನೂ, ಮದೋನ್ಮತ್ತನೂ, ಯೌವನ ಧನಸಂಪತ್ತಿ ಪ್ರಭುತ್ವ ಅವಿವೇಕತೆಗಳಿಂದ ಅಂಧನಾದ ದುಷ್ಟನೆಂಬುದು ನಾರದರಿಗೆ ತಿಳಿಯುವುದು ಆ ಸಂದರ್ಭದಲ್ಲ ಅವನಿಗೆ ಧರ್ಮೋಪದೇಶ ಮಾಡಿದರ ಪ್ರಯೋಜನವಾಗುವುದೇ ! ಅಲ್ಲದೆ 'ನಿನ್ನ ಈ ಆಚರಣೆಯಿಂದ ಪ್ರಪಂಚವು ತಲ್ಲಣಿಸುತ್ತಿರುವುದು. ಆದುದರಿಂದ ಇನ್ನು ಈ ಧಾಳಿಯನ್ನು ಸಾಕುಮಾಡು' ಎಂದು ಹಿತೋಕ್ತಿಯನ್ನು ಹೇಳಿದರ ಆ ನೀಚನು ಕೇಳುವನೇ ? ಮದೋನ್ಮತ್ತನಾದ ಅವನಲ್ಲಿ ದಂಡೋಪಾಯವಲ್ಲದೆ ಮತ್ತಾವ ಬಗೆಯ ಉಪಾಯಕ್ಕೂ ಅವಕಾಶವಿಲ್ಲವೆಂಬುದು ನಮ್ಮ ಅಜ್ಞಬುದ್ಧಿಗೇ ಗೋಚರವಾಗುವುದಲ್ಲವೆ! ಅಂತಹ ಸಂದರ್ಭದಲ್ಲಿ ಪ್ರಪಂಚದ ಮೇಲ್ಮೆಯನ್ನೇ ಕುರಿತು ಗಮನಿಸುವವರಾದ ಆ ಮಹಾನುಭಾವರು ಏನುಮಾಡಬೇಕು? ತ್ರಿಕಾಲಜ್ಞರಾದ ಅವರಿಗೆ ದುಷ್ಟನಾದ ಅವನನ್ನು ಜಯಿಸಿ ಕೊಲ್ಲುವವನು ವಿಷ್ಣುವೆಂಬುದೂ ಅವನ ವಧೆಯ ಮೂಲಕ ಭೂಮಿಯ ಇದೊಂದು ಕಂಟ

ಕವು ಪರಿಹಾರವಾಗುವುದೆಂಬುದೂ ತಿಳಿಯುವುದು ಆದುದರಿಂದ ಅವರು ಅವನಿಗೆ ವಿರೋಧವೆಂದುತೋರುವ ಸಾಧುಮಾರ್ಗವನ್ನು ಬಿಟ್ಟು-ಅವನಿಗ ಹಿತಕರವೆಂದು ತೋರುವ, ಅಂತೇ ಅವನ ನಾಶಕ್ಕೆ ಸಹಕಾರಿಯೂ ಆದ ದ್ವೇಷಭಾವವೇ ಅವನಲ್ಲಿ ಬೆಳೆಯಲು ಪ್ರೋತ್ಸಾಹಿಸುವರು ಇನ್ನೂ ಸಾಹಸಾ ಶವಾಗಿ ಪ್ರಾರಂಭಿಸಬೇಕೆಂದಿರುವುದನ್ನು ಒಡನೆ ಮಾಡುವಂತ ಹುರಿದುಂಬಿ ಸುವರು. ಅದರಿಂದ ಆಗುವ ಪರಿಣಾಮವು ಅವನ ನಾಶದಿಂದ ಪ್ರಪಂಚದ ಬಂ ಧನಿವೃತ್ತಿಯೇ ಅಲ್ಲವೆ? ಇಂತಹ ಸಂದರ್ಭದಲ್ಲಿ ಅವರು ಎರಡುಪಕ್ಷಗಳವ ಗೂ ಅವರವರಿಗೆ ಸಾಧಕವಾದ-ಅವರವರ ಮಾರ್ಗಗಳಲ್ಲೇ ಅವರು ಸೇರವಾ ಗಿ ಹೋಗುವ ಸಲಹೆಗಳನ್ನು ಕೊಟ್ಟು ಪ್ರಪಂಚದ ಮೇಲ್ಮೆಯ ಕಾರ್ಯಕ್ಕ ಸಹಕರಿಸುವರು ಹೀಗೆ ಅವರ ಸಲಹೆಯಿಂದ ಪ್ರೋತ್ಸಾಹಿತರಾದ ದುಷ್ಟರು ತಮ್ಮ ದ್ವೇಷಭಾವವನ್ನೇ ಸಾಧಿಸುತ್ತಾ ನಡೆದರ ಅವರನ್ನು ವಿರೋಧಿಸುವ ಸಾತ್ವಿಕಪಕ್ಷದವರಿಗೂ ಅವರಿಗೂ ಸ್ವಾಭಾವಿಕವಾಗಿಯೇ ಕಲಹವು ಪ್ರಾರಂ ಭವಾಗುವುದು. ಹೀಗೆ ಪ್ರಾಪ್ತವಾದ ಜಗಳದ ಕಾರ್ಯಕಾರಣಗಳನ್ನು ಕುರಿ ತು ದೀರ್ಘವಾಗಿ ಯೋಚಿಸಲಾರದಿದ್ದವರು ಇದಕ್ಕೆ ನಾರದರೇ ಕಾರಣರೆಂದು ಹೇಳಿ ಅವರನ್ನು 'ಜಗಳಗಂಟರು' ಎಂದು ಕರೆಯುವುದರಲ್ಲ ಆಶ್ಚರ್ಯವೇನು! ಆದರೆ ವಿಚಾರಪರರೂ ಅಂಧ ಪರಂಪರೆಯನ್ನು ಅನುಸರಿಸಿ ಹಾಗೆಯೇ ನುಡಿ ಯಬಾರದಷ್ಟೆ! ಹೀಗೆ ಒಂದಲ್ಲ ಎರಡಲ್ಲ ಅವರ ಪ್ರವೇಶವಿರುವ ಕಾರ್ಯ ಗಳಲ್ಲೆಲ್ಲಾ ಅವರು ಆಯಾ ವ್ಯಕ್ತಿಯ ಮನೋಭಾವನೆಯನ್ನು ಅನುಸರಿಸಿ ನಡೆಯುವಂತೆ ಮಾತ್ರ ಪ್ರೋತ್ಸಾಹಿಸಿ ತನ್ಮೂಲಕ ಅವನ ಉನ್ನತಿ ಅಥವಾ ಅವನತಿಗಳಿಗೆ ಅವನೇ ಕಾರಣಕರ್ತನಾಗಿರುವಂತೆ ಮಾಡಿರುವುದೇ ಅವರ ಮುಖ್ಯ ಕಾರ್ಯವೆಂಬುದು ಗೋಚರವಾಗುವುದು. ಆದುದರಿಂದ ನಾರದರ ಯಾವುದೊಂದು ಕಾರ್ಯವೂ ಪ್ರಪಂಚೋದ್ಧಾರಕ್ಕೆ ಸಹಕಾರಿಯಾದುದ ಲ್ಲದೆ ಅವರು ಕಲಹಶೀಲರಾಗಿ ಪ್ರಪಂಚದಲ್ಲಿ ಪ್ರಳಯವನ್ನೆಬ್ಬಿಸಲು ಎಂದೂ ಪ್ರಯತ್ನಿಸಿದವರಲ್ಲವೆಂಬುದನ್ನು ಚೆನ್ನಾಗಿ ಗ್ರಹಿಸಬೇಕಾಗುವುದು

ಇಂತಹ ಮಹಾನುಭಾವರಾದ ನಾರದಮಹರ್ಷಿಗಳು 'ಮಹತಿ' ಎಂಬ ತಮ್ಮ ವೀಣೆಯನ್ನು ಬಾರಿಸಿಕೊಂಡು ಹರಿನಾಮಸ್ಮರಣತತ್ಪರರಾಗಿ ದಿವ್ಯ ಗೀತಗಳನ್ನು ಹಾಡಿಕೊಳ್ಳುತ್ತಾ ಎಂದಿನಂತೆ ಪ್ರಪಂಚಪರ್ಯಟನಮಾಡಿ

ಕೊಂಡು ಒಂದುಸಾರಿ ಯಮಲೋಕಕ್ಕೂ ಹೋದರು. ಯಮನು ಆ ಸಾಧುವರ್ಯರನ್ನು ಕಂಡು ಒಡನೆಯೇ ಇದಿರದ್ದು ಗೌರವಿಸಿ ಷೋಡಶೋಪಚಾರಗಳಿಂದ ಅವರನ್ನು ಪೂಜಿಸಿ ತರುವಾಯ ಅವರೊಂದಿಗೆ ಹೊರಟು ತನ್ನ ಆಧಿಪತ್ಯಕ್ಕೊಳಪಟ್ಟ ಮುಖ್ಯ ಮುಖ್ಯ ಪ್ರದೇಶಗಳನ್ನೆಲ್ಲಾ ತೋರಿಸತೊಡಗಿದನು ಭೂಲೋಕದಲ್ಲಿ ಬಗೆಬಗೆಯ ಪುಣ್ಯಕಾರ್ಯಗಳನ್ನು ಮಾಡಿಧ ದೈವಭಕ್ತರು ದೇಶಭಕ್ತರು, ಮಾತಾಪಿತೃಭಕ್ತರು, ಅನ್ನದಾತರು, ವಿದ್ಯಾದಾತರು, ಛತ್ರ ಮಠ ಕೆರೆ ಕೊಳಗಳನ್ನು ಕಟ್ಟಿಸಿದ ಪುಣ್ಯವಂತರು, ಆಪತ್ಕಾಲದಲ್ಲಿ ಸಹಾಯಮಾಡಿದವರು, ಶರಣಾಗತರಾದವರನ್ನು ಕಾಪಾಡಲು ತಮ್ಮ ತನುವನ್ನೇ ತೊರೆದ ಧೀರರು ಮುಂತಾದ ಅನೇಕ ಧನ್ಯಜೀವಿಗಳು ದಿವ್ಯ ಭವನಗಳಲ್ಲಿ, ಉದ್ಯಾನಗಳಲ್ಲಿ, ಮೇಲುಪ್ಪರಿಗೆಗಳಲ್ಲಿ ಘನವಾದ ವಿಮಾನಗಳಲ್ಲಿ ಕುಳಿತು, ದಿವ್ಯಗಂಧಮಾಲ್ಯವಸ್ತ್ರಭೂಷಣಾದಿಗಳಿಂದ ಅಲಂಕೃತರಾಗಿ, ದಿವ್ಯ ಭೋಗಗಳನ್ನು ಅನುಭವಿಸುತ್ತಾ ಆನಂದಿಸುತ್ತಲಿದ್ದುದನ್ನು ನಾರದರು ಯಮನೊಂದಿಗೆ ಕೂಡಿ ನೋಡಿ ಸಂತೋಷಪಟ್ಟರು.

ತರುವಾಯ ಯಮನು ಅವರನ್ನು ತನ್ನ ಭವನಕ್ಕೆ ಕರತರಲು ಪ್ರಯತ್ನಿಸಿದನು ಆದರೆ ಆ ಮಹಾನುಭಾವರಿಗೆ ನರಕದಲ್ಲಿ ಕಷ್ಟಪಡುತ್ತಿರುವ ಹತಜೀವಿಗಳನ್ನೂ ನೋಡಬೇಕೆನ್ನಿಸಿತು. ಅಲ್ಲಿಗೆ ಹೋಗೋಣವೆಂದರು ಯಮನು "ತಮ್ಮಂತಹ ಮಹಾನುಭಾವರು ನರಕದ ಆ ಘೋರದೃಶ್ಯವನ್ನು ನೋಡತಕ್ಕುದಲ್ಲ" ವೆಂದು ನಿವಾರಿಸಲು ಯತ್ನಿಸಿದನು. ಆದರ ನಾರದರು ತಾವು ನರಕವನ್ನೂ ನೋಡಿಯೇತೀರಬೇಕೆಂದು ನುಡಿದರು. ಆಗ ಬೇರೇನೂ ಮಾರ್ಗವಿಲ್ಲದೆ ನರಕದಕಡೆಗೂ ಅವರಿಬ್ಬರೂ ಹೊರಟರು. ಅಲ್ಲಿ ದೈವದ್ವೇಷಿಗಳು, ದೇಶದ್ರೋಹಿಗಳು, ಕುಲಘಾತುಕರು, ನರಹಂತಕರು, ನಾಸ್ತಿಕರು, ಸ್ವಾಮಿದ್ರೋಹ-ಗುರುದ್ರೋಹ-ಮಾತಾಪಿತೃದ್ರೋಹಾದಿಗಳನ್ನು ಮಾಡಿದ ಪರಮನೀಚರು, ಸತ್ಕಾರ್ಯಗಳಿಗೆ ವಿಘ್ನಮಾಡಿದ ಪಾಪಿಗಳು, ಸ್ತ್ರೀಹತ್ಯ ಶಿಶುಹತ್ಯ ಗೋಹತ್ಯಾದಿ ಪಾತಕಗಳಿಗೆ ಹೇಸದಿದ್ದ ದುರಾತ್ಮರು, ಪಶುಹಿಂಸಕರು, ಸ್ವರ್ಣಸ್ತೇಯ ಸುರಾಪಾನಾದಿ ಅಗಣಿತ ಪಾಪಗಳನ್ನು ಮಾಡಿದ ದುಷ್ಟರು, ಪರದ್ರವ್ಯಾಪಹರಣ ಪರದಾರಗಮನ ಮುಂತಾದ ಘೋರ ದುರಿತ ಕಾರ್ಯಗಳನ್ನು ಮಾಡಿದ ಪಾಪಿಗಳು ಅಲ್ಲದೆ ಇತರ ಅಸಂಖ್ಯ ಗುಪ್ತಪಾತಕ

ಗಳನ್ನು ಮಾಡಿದ ಪಾಪಾತ್ಮರನೇಕರು ಅನುಭವಿಸುತ್ತಿದ್ದ ಬಾಯಿಂದ ಹೇಳಲಾಗದ ಕಣ್ಣಿಂದ ನೋಡಲಾಗದ ಆ ಘೋರ ಹಿಂಸೆಗಳನ್ನೂ ಯಾತನೆಗಳನ್ನೂ ನೋಡಿ ಸಹಿಸಲಾಗದೆ ಆ ಸಾಧುವರ್ಯರು "ನಾರಾಯಣಾ, ದುರಿತನಿವಾರಣಾ, ಕೃಷ್ಣಾ" ಎಂದು ಭಗವನ್ನಾಮಗಳನ್ನು ಉಚ್ಚರಿಸಿದರು. ಆಹಾ! ಭಗವನ್ನಾಮದ ಮಹಿಮೆಯನ್ನು ಏನೆಂದು ಹೇಳುವುದು? ಎಷ್ಟೆಂದು ವರ್ಣಿಸುವುದು! ಆ 'ನಾರಾಯಣಾ' ಎಂಬ ನಾಮವು ಕಿವಿಗೆ ಬಿದ್ದೊಡನೆಯೇ ನರಕಯಾತನೆಯನ್ನು ಅನುಭವಿಸುತ್ತಿದ್ದ ಆ ಪಾಪಿಗಳ ಸಮೂಹವು ಜಾಗ್ರತವಾಗಿ ತಮ್ಮ ಪಾಪರಾಶಿಯಿಂದ ಬಿಡಲ್ಪಟ್ಟು ತಾವೂ 'ನಾರಾಯಣಾ' ಎಂಬ ಆ ದಿವ್ಯನಾಮವನ್ನೇ ಉಚ್ಚರಿಸಿಕೊಳ್ಳುತ್ತಾ ಮೇಲಕ್ಕೆದ್ದರು. ಅಷ್ಟರಲ್ಲಿ ಪ್ರಾಪ್ತರಾದ ವಿಷ್ಣುದೂತರು ಅಲ್ಲಿದ್ದ ಯಮದೂತರನ್ನೆಲ್ಲಾ ಹೊಡದೋಡಿಸಿ ಭಗವನ್ನಾಮಾಮೃತಪಾನದಿಂದ ಪವಿತ್ರರಾದ ಆ ಧನ್ಯಜೀವಿಗಳನ್ನು ಪರಮಧಾಮವಾದ ವೈಕುಂಠಲೋಕಕ್ಕೆ ಕರೆದೊಯ್ದರು. ನಾರಾಯಣ ನಾಮದಿಂದ ನರಕವು ಬಂದಾಯಿತು.

ನಾರದರನ್ನು ನರಕ ದರ್ಶನಕ್ಕೆ ಕರೆದ ಕೊಂಡುಹೋದುದರಿಂದ ಆದ ಪರಿಣಾಮದಿಂದ ಯಮನು ಒಂದು ಬಗೆಯಿಂದ ಖಿನ್ನನಾಗಿ ಎಂತೂ ಅಲ್ಲಿಂದ ಹೊರಟು ಅವರ ಅಪ್ಪಣೆಯನ್ನು ಪಡೆದು ನಡೆದನು. ನಾರದರೂ ಭಗವನ್ನಾಮೋಚ್ಚಾರಣೆಯಿಂದ ಪ್ರಾಪ್ತವಾದ ಆ ಸಂಭವವನ್ನೇ ಮನಸ್ಸಿನಲ್ಲಿ ಪರಿಭಾವಿಸಿಕೊಳ್ಳುತ್ತಾ ಆ ನಾಮಪ್ರಭಾವವನ್ನು ಕುರಿತು ಮೇಲೆ ಮೇಲೆ ಆಶ್ಚರ್ಯಪಡುತ್ತಾ ಶ್ರೀಮನ್ನಾರಾಯಣನನ್ನು ದರ್ಶಿಸಿ ಈ ಆಶ್ಚರ್ಯವೃತ್ತಾಂತವನ್ನು ತಿಳಿಸಬೇಕೆಂದು ವೈಕುಂಠಾಭಿಮುಖವಾಗಿ ಪ್ರಯಾಣಮಾಡುತ್ತಿದ್ದರು. ಅಷ್ಟರಲ್ಲಿ ಆ ಶ್ರೀವಲ್ಲಭನು ಭೂಭಾರಹರಣಕ್ಕಾಗಿ ಅವತರಿಸಿ ದ್ವಾರಕೆಯಲ್ಲಿ ವಿರಾಜಮಾನನಾಗಿದ್ದ ಅಂಶವು ಜ್ಞಾಪಕಕ್ಕೆ ಬರಲು ಒಡನೆ ಕೆಳಕ್ಕಿಳಿದು ವೀಣಾಹಸ್ತರಾಗಿ ಭಗವನ್ನಾಮಸ್ಮರಣಪೂರ್ವಕ ಆ ದೇವದೇವನ ದಿವ್ಯಭವನವನ್ನು ಹೊಕ್ಕರು. ಅಕಸ್ಮಾತ್ತಾಗಿ ಪ್ರಾಪ್ತರಾದ ನಾರದರನ್ನು ಕಂಡು ಶ್ರೀಕೃಷ್ಣಮೂರ್ತಿಯು ಇದಿರೆದ್ದು ಉಪಚರಿಸಿ ಆ ಸಾಧುವರ್ಯರನ್ನು ಪೂಜಿಸಿದನು. ನಾರದರು ನರಲೀಲೆಗಾಗಿ ಅವತರಿಸಿದ ಆ ದೇವದೇವನ ಚರ್ಯೆಯನ್ನು ಕಂಡು ಆಶ್ಚರ್ಯಪಟ್ಟು ಕುಶಲಪ್ರಶ್ನೆ ಮಾಡಿದನಂತರ ನರಕದಲ್ಲಿ ನಡೆದ

ವಿಚಾರವನ್ನು ವಿಜ್ಞಾಪಿಸಿ : ಪ್ರಭೂ, ಪಾಪಿಗಳ ಸಂಖ್ಯೆಯು ಈಗಲೇ ಇಷ್ಟು ಮಾತ್ರ ಹೆಚ್ಚಿರುವಲ್ಲ ಇನ್ನು ಮುಂದೆ ಕಲಿಯುಗದಲ್ಲಿ ಪ್ರಪಂಚಸ್ಥಿತಿಯು ಹೇಗಾಗುವುದೋ ಎಂದು ಭಯವಾಗುತ್ತದೆ. ದೇವಾ, ಲೋಕೋದ್ಧರಣ ವಿಚಾರವನ್ನು ಕುರಿತು ಏನೆಂದು ಯೋಜಿಸಿರುವೆ ?" ಎಂದು ಪ್ರಶ್ನಿಸಿದರು.

ಆಗ ಭಗವಾನನು ಆ ಪರೋಪಕಾರಬುದ್ಧಿಯಿಂದ ಪ್ರಶ್ನೆಗೆ ಪರಮಾನಂದಪಡುತ್ತಾ "ನಾರದರೇ, ಕೃತಯುಗದಲ್ಲಿ ತಪಸ್ಸೂ, ತ್ರೇತಾಯುಗದಲ್ಲಿ ಜ್ಞಾನವೂ, ದ್ವಾಪರದಲ್ಲಿ ಯಜ್ಞಕರ್ಮಾದಿಗಳೂ ಪ್ರಾಣಿಗಳ ಉದ್ಧಾರಕ್ಕೆ ಸಾಧಕಗಳಾಗಿದ್ದುವು. ಈ ಕಲಿಯುಗದಲ್ಲಾದರೋ ಧ್ಯಾನವೊಂದೇ ಸಾಧಕವಾಗುವುದು. ಅದೇ ಮಾನವರನ್ನು ಮುಕ್ತಿಮಾರ್ಗಕ್ಕೆ ಹಚ್ಚಿ ಉದ್ಧರಿಸಲು ಶಕ್ತವಾದುದು. ಅದನ್ನು ಪ್ರಚುರಪಡಿಸುವುದೇ ಪ್ರಥಮಕರ್ತವ್ಯವು. ಆ ಕೆಲಸವು ನಿಮ್ಮಿಂದಲಲ್ಲದೆ ಇತರರಿಂದ ಸಾಗದು. ಆದುದರಿಂದ ನೀವು ಭೂಲೋಕದಲ್ಲಿ ಜನಿಸಿ ಭಗವನ್ನಾಮಾಮೃತವರ್ಷವನ್ನು ಸುರಿಸಿ ಜಗದ ಜೀವಿಗಳನ್ನು ಉದ್ಧರಿಸಿರಿ. ನರಕವಾಸಿಗಳಾದ ಪಾಪಿಗಳನ್ನು ಉದ್ಧರಿಸಿದ ಕಾರ್ಯವು ಉತ್ತಮವಾದುದೇ! ಆದರೆ ಭೂಲೋಕದಿಂದ ಜೀವಿಗಳು ಪಾಪಿಗಳಾಗಿ ನರಕಕ್ಕೆ ಹೋಗುವ ಅವಕಾಶವೇ ಇಲ್ಲದಂತೆ ಮಾಡುವುದು ಉತ್ತಮತರವಾದ ಕಾರ್ಯವಲ್ಲವೆ! ಅದನ್ನು ನೀವು ಸಾಧಿಸಿರಿ" ಎಂದನು. ಆ ಮಾತನ್ನು ಕೇಳಿ ನಾರದರಿಗೆ ಭಯವಾಯಿತು. 'ಭಕ್ತವತ್ಸಲಾ, ನಿನ್ನ ಆಜ್ಞೆಯು ಶಿರಸಾ ಮಾನ್ಯವೇ! ಆದರೆ ಗರ್ಭವಾಸದ ದುಃಖವನ್ನು ಅನುಭವಿಸುವುದಕ್ಕೆ ಮಾತ್ರ ನಾನು ಹೆದರುತ್ತೇನೆ. ಅಲ್ಲದೆ ಪ್ರಕೃತಿಸಂಬಂಧದಿಂದ ಪ್ರಾಪ್ತವಾಗುವ ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಾದಿ ಅರಿಷಡ್ವರ್ಗಗಳ ಉಲ್ಬಣತೆಯು ನನ್ನನ್ನು ಕರ್ತವ್ಯಮೂಢನನ್ನಾಗಿ ಮಾಡಿ ಜನನಮರಣ ಪ್ರವಾಹಕ್ಕೆ ಸಿಕ್ಕಿಸುವುದೋ ಎಂದೂ ಭಯವಾಗುತ್ತದೆ. ಇದಕ್ಕೆ ಪರಿಹಾರವೇನು ?" ಎನ್ನಲು ಕರುಣಾನಿಧಿಯಾದ ಶ್ರೀಕೃಷ್ಣಮೂರ್ತಿಯು ನಸುನಗುತ್ತಾ 'ನಾರದಾ ಯೋಚಿಸಬೇಡ, ನೀನೊಂದುವೇಳೆ ಪ್ರಕೃತಿಸಂಬಂಧದಿಂದ ಕರ್ತವ್ಯಮೂಢನಾಗುವ ಸಂಭವವು ಪ್ರಾಪ್ತವಾದರೆ ನಾನು ಬಂದು ಎಚ್ಚರಿಸುವೆನು. ಭಯಪಡದಿರು' ಎಂದು ಉತ್ತರವಿತ್ತನು. ನಾರದರು ಭಗವಂತನ ಆ ಸಂದೇಶವನ್ನು ಹೊಂದಿ ಮುಂದೆ ಕಲಿಯುಗದಲ್ಲಿ ತಾವು ಮಾಡಬೇಕಾಗುವ ಕಾರ್ಯವನ್ನು ಕುರಿತು

ಯೋಚಿಸುತ್ತಾ ಹರಿನಾಮಸ್ಮರಣೆಯಿಂದ ಮತ್ತರಾಗಿ ಹಾಡುತ್ತಾ ಯಥೇಚ್ಛವಾಗಿ ಸಂಚಾರಮಾಡಿಕೊಂಡು ಹೊರಟುಹೋದರು.



## ಅಧ್ಯಾಯ ೨ "ನಾಯಕರು"

ದಯಾನಿಧಿಯಾದ ಭಗವಂತನ ಕೃಪಾದೃಷ್ಟಿಗೊಳಪಟ್ಟ ಒಂದೊಂದು ದೇಶವೂ ಒಂದೊಂದು ಭಾಷೆಯೂ ಒಂದೊಂದು ಕಾಲದಲ್ಲಿ ಅತ್ಯಂತ ಉನ್ನತ ದೆಶೆಯನ್ನು ಹೊಂದಿ ತನ್ನ ಕಳೆಯನ್ನು ಪ್ರಪಂಚಕ್ಕೆ ಬೀರುವುದು. ತೇಜೋವಂತವಾಗಿ ಪ್ರಕಾಶಿಸುವುದು ಮತ್ತು ಆ ದೇಶದಲ್ಲಿ ಜನಿಸಿ ವಾಸಿಸಿ ಆ ಭಾಷೆಯನ್ನಾಡುವ ಜನರು ಅಂತಹ ಆ ಕಾಲದಲ್ಲಿ ಗಣ್ಯರಾಗಿ ಪ್ರಪಂಚಕ್ಕೆ ತೋರ್ಪಡುವರು ಅನೇಕ ಮಹತ್ಕಾರ್ಯಗಳನ್ನು ಸಾಧಿಸುವರು. ದಿನದಿನಕ್ಕೆ ತಮ್ಮ ಜನ್ಮಭೂಮಿಯ ಮಹಿಮೆಯನ್ನು ಸಕಲ ದಿಕ್ಕುಗಳಲ್ಲೂ ಹಬ್ಬಿಸುವರು. ದೇಶವಿಸ್ತಾರವನ್ನು ಹೆಚ್ಚಿಸುವರು. ಇತರರಮೇಲೆ ತಮ್ಮ ಸ್ವಾಮ್ಯವನ್ನು ಸ್ಥಾಪಿಸುವರು. ಅಧಿಕಾರದರ್ಪಗಳನ್ನು ನಡೆಯಿಸುವರು. ವಿಶೇಷ ಐಶ್ವರ್ಯಾದಿಗಳನ್ನು ಗಳಿಸುವರು. ತಮ್ಮ ನಗರಗಳನ್ನು ವಿವಿಧರೀತಿಗಳಿಂದ ಸಿಂಗರಿಸುವರು ಅಲ್ಲದೆ ಆ ಭಾಷಾಪುತ್ರರು ಮಾತೃಭಾಷಾಮಾಹಾತ್ಮ್ಯವನ್ನು ಬಗೆಬಗೆಯಲ್ಲಿ ವರ್ಣಿಸಿ ಅವಿನಾಶಿಗಳಾದ ಅನೇಕಾನೇಕ ಗ್ರಂಥರತ್ನಗಳನ್ನು ಬರೆಯುವರು, ಇಂತು ದೇಶವೂ ಭಾಷೆಯೂ ಉಚ್ಛ್ರಾಯಸ್ಥಿತಿಗೆ ಬರುವುವು.

ಹೀಗೆ ದೇಶವೂ ಭಾಷೆಯೂ ಅಭಿವೃದ್ಧಿಯಾಗಿ ಕಳಾಯುಕ್ತವಾಗುವುದು ಭಗವತ್ಕಟಾಕ್ಷದಿಂದಲೇ ಎಂಬುದು ನಿರ್ವಿವಾದಾಂಶವಷ್ಟೆ! ಎಂತೂ ಅಷ್ಟಾಗಲು ಲೌಕಿಕವಾಗಿ ಒಂದು ಭಾಷೆಯನ್ನಾಡುವ ಆದ್ಯಂತ ದೇಶವು ಆಸ್ತಿಕನೂ ಧರ್ಮಶೀಲನೂ ಸ್ವಜನ-ಸ್ವದೇಶಾಭಿಮಾನಿಯೂ ಆದ ಒಬ್ಬ ಪ್ರಭುವಿನ ಆಧಿಪತ್ಯಕ್ಕೆ ಒಳಪಟ್ಟುದಾಗಿರಬೇಕು. ಆತನು ದೇಶದ ಪೂರ್ವಿಕ ಘನತೆಯನ್ನು ಗಮನಿಸಿ ತನ್ನ ದೇಶವನ್ನು ಮುಂದೆ ಎಲ್ಲಾ ವಿಷಯಗಳಲ್ಲೂ ವೈಭವಸ್ಥಿತಿಗೆ ತರಬೇಕೆಂಬ ಉತ್ಸಾಹದಿಂದ ಕೂಡಿ ಪಂಡಿತರಿಗೂ ಶೂರರಿಗೂ ಧಾರ್ಮಿಕರಿಗೂ ಆಶ್ರಯದಾತನಾಗಿರಬೇಕು. ಹಿಂದೆ ನಮ್ಮ ಕರ್ಣಾಟಕ ದೇಶವೂ ಒಂದು

ಸಾರಿ ಹಾಗಿದ್ದಿತು. ಯತೀಂದ್ರರಾದ ಶ್ರೀ ವಿದ್ಯಾರಣ್ಯರು ತಮ್ಮ ತಪಃಪ್ರಭಾವದಿಂದ ಹರಿಹರ-ಬುಕ್ಕರಾಜರಿಗೆ ಆಶ್ರಯದಾತೃಗಳಾಗಿ ವಿಜಯನಗರ ರಾಜ್ಯವನ್ನು ಶಾಲಿವಾಹನ ಶಕೆ ೧೨೫೮(ಕ್ರಿ ಶ ೧೩೩೬)ರಲ್ಲಿ ಸ್ಥಾಪಿಸಿದರಲ್ಲವೆ? ಅಂದಿನಿಂದ ಆ ರಾಜ್ಯದ ವಿಸ್ತಾರವು ದಿನದಿನಕ್ಕೆ ಹೆಚ್ಚಿತು ನಗರದ ಸೌಂದರ್ಯವೂ ಅತಿಶಯ ಅಭಿವೃದ್ಧಿಯಾಯಿತು. ದೇಶದ ಐಶ್ವರ್ಯ ಘನತೆಗಳೂ ಹೆಚ್ಚಿದುವು ಕೇವಲ ನಮ್ಮ ಭಾರತದೇಶದಲ್ಲಿ ಮಾತ್ರವಲ್ಲ ಬಹುದೂರದ ಯೂರೋಪುಖಂಡದ ದೇಶಗಳಲ್ಲೂ ಮಹಾ ಪ್ರತಿಭಾಸಂಪನ್ನವಾದ ಈ ದೇಶದ ನಮ್ಮ ಕರ್ಣಾಟಕ ರಾಜ್ಯದ ರಾಜರ-ಉದಾರರೂ ದೇಶಾಭಿಮಾನಿಗಳೂ ಧಾರ್ಮಿಕರೂ ಆದ ಈ ದೇಶೀಯರ ಕೀರ್ತಿಯು ವಿವಿಧರೀತಿಗಳಿಂದ ಕೀರ್ತಿಸಲ್ಪಡುತ್ತಿದ್ದಿತು. ಕರ್ಣಾಟಕದೇಶವು ದಕ್ಷಿಣದಲ್ಲಿ ಕಾವೇರೀ ನದಿಯೂ ಉತ್ತರದಲ್ಲಿ ಗೋದಾವರೀ ನದಿಯೂ ಮೇರೆಗಳಾಗಿರಲು ಪೂರ್ವಪಶ್ಚಿಮ ಜಲನಿಧಿಗಳನ್ನೂ ಒತ್ತರಿಸುವಂತೆ ವಿಸ್ತರಿಸಿ ಪ್ರಪಂಚದಲ್ಲಿ ಒಂದು ಗಣ್ಯವಾದ ದೇಶವೆಂದು ಪರಿಗಣಿತವಾಯಿತು. ಆಗ ದೇಶದಲ್ಲಿ ಸಕಲವಿದ್ಯಾ ಪಾರಂಗತರಾದ ವಿದ್ವಾಂಸರು, ಧನದನೊಂದಿಗೆ ಸರಿದೂಗುವಂಥ ಐಶ್ವರ್ಯವಂತರು, ಭೀಮಾರ್ಜುನಾದಿಗಳನ್ನು ಮರಯಿಸುವಂಥ ಶೌರ್ಯತೇಜೋನಿಧಿಗಳು, ಭಗವದ್ಭಕ್ತರು, ಸಾಧುವರ್ಯರು ಮುಂತಾದ ಅನೇಕ ಧನ್ಯಜೀವಿಗಳು ದೇಶದ ಗೌರವವನ್ನು ಸಕಲ ವಿಧಗಳಲ್ಲೂ ಕಾಪಾಡುತ್ತಿದ್ದರು. ನಮ್ಮ ಮಾತೃಭೂಮಿಯಾದ ಕನ್ನಡನಾಡು ಹೀಗೆ ಬಹು ಉಚ್ಛ್ರಾಯಸ್ಥಿತಿಯಲ್ಲಿದ್ದಿತು.

ಹೀಗಿರಲು ೧೫ನೆಯ ಶತಮಾನದ ಕೊನೆಯಭಾಗದಲ್ಲಿ ಪೂನಾಮಂಡಲಕ್ಕೆ ಸೇರಿ ಘಂಡರಾಪುರಕ್ಕೆ ಸಮೀಪದಲ್ಲಿರುವ ಪುರಂದರಗಡವೆಂಬ ಒಂದು ಊರಿನಲ್ಲಿ ವರದಪ್ಪನಾಯಕನೆಂಬ ಒಬ್ಬ ಸ್ಮಾರ್ತ ದೇಶಸ್ಥ ಬ್ರಾಹ್ಮಣನು ವಾಸವಾಗಿದ್ದನು. ಆತನು ಚಿನಿವಾರ ವೃತ್ತಿಯಲ್ಲಿ ಪ್ರಸಿದ್ಧನಾಗಿ ವಿಶೇಷವಾದ ಧನವನ್ನು ಆರ್ಜಿಸಿ ತನ್ನ ಪತ್ನಿಯೊಂದಿಗೆ ಸುಖವಾಗಿ ಜೀವಿಸುತ್ತಿದ್ದನು. ಆತನಿಗೆ ಬಹುದಿನಗಳವರಗೆ ಮಕ್ಕಳಾಗದೆ ಕೊನೆಗೆ ಆ ದಂಪತಿಗಳು ಅನೇಕ ದಾನಧರ್ಮ ಉಪವಾಸಾದಿಗಳಿಂದ ನಿಯಮವಂತರಾಗಿ ಶ್ರದ್ಧಾಭಕ್ತಿಗಳಿಂದ ಪಂಡರಿನಾಥ (ವಿಟ್ಠಲಸ್ವಾಮಿ) ನನ್ನು ಧ್ಯಾನಿಸಲು ಭಗವದನುಗ್ರಹದಿಂದ ನಾಯಕರ ಪತ್ನಿಯು ಗರ್ಭಧಾರಣಮಾಡಿ ಶಾಲಿವಾಹನಶಕದ ೧೪೦೬ನೆಯ ಸಂವತ್ಸರದ

ಒಂದು ಶುಭದಿನ ಶುಭನಕ್ಷತ್ರದಲ್ಲಿ ಪುರುಷಶಿಶುವನ್ನು ಪ್ರಸವಿಸಿದಳು. ವರದಪ್ಪನಾಯಕನು ತನ್ನ ವಂಶೋದ್ಧಾರಕನಾದ ಆ ಪುತ್ರರತ್ನವನ್ನು ಕಂಡು ಅತ್ಯಂತ ಸಂತೋಷಪಟ್ಟು ಮಗುವಿಗೆ ವಿಧ್ಯುಕ್ತರೀತಿಯಿಂದ ಜಾತಕರ್ಮ ನಾಮಕರಣಾದಿ ಮಹೋತ್ಸವಗಳನ್ನು ನೆರವೇರಿಸಿ ಕೃಷ್ಣಪ್ಪನಾಯಕನೆಂಬ ಹೆಸರಿನಿಂದ ಕರೆದನು.

ಹಸುಕಂದನ ಬಾಲಲೀಲೆಗಳನ್ನು ನೋಡಿ ನಲಿಯದ ತಾಯಿತಂದೆಗಳುಂಟೆ? ನಾಯಕನೂ ಆತನಪತ್ನಿಯೂ ಮಗುವಾದ ಕೃಷ್ಣನಿಗೆ ನಾನಾಬಗೆಯ ಬಾಲತೊಡಿಗೆಯ ಒಡವೆಗಳನ್ನಿಟ್ಟು ವಸ್ತ್ರಗಳನ್ನು ತೊಡಿಸಿ ಆ ಮಗುವು ಆಡುವ ಬಗೆಬಗೆಯ ಆಟಗಳನ್ನು ನೋಡಿ ಪರಮಾನಂದದಿಂದ ನಲಿಯುವರು. ಹೀಗೆ ಮಗುವು ತಾಯಿತಂದೆಗಳ ಮತ್ತು ನೆರಹೊರೆಯವರ ಪ್ರೀತಿ ವಿಶ್ವಾಸ ಮುದ್ದು ಮೋಹಗಳಿಗೆ ಒಳಗಾಗಿ ದಿನದಿನಕ್ಕೆ ಅಂಬೆಗಾಲುಗಳು, ತಪ್ಪು ಹೆಜ್ಜೆಗಳು ಮುದ್ದು ಮುದ್ದಾದ ತೊದಲುಮಾತುಗಳು ಮುಂತಾದುವುಗಳಿಂದ ಎಲ್ಲರನ್ನೂ ಸಂತೋಷಪಡಿಸುತ್ತಾ ಬೆಳೆಯಿತು. ನಾಯಕನೂ ಮಗುವಿಗೆ ವಯಸ್ಸಾದಂತೆಲ್ಲಾ ಚೌಲ ಉಪನಯನ ಮುಂತಾದುವುಗಳನ್ನು ಮಾಡಿಸಿ ಯುಕ್ತ ಬ್ರಾಹ್ಮಣಾಚಾರವಿಚಾರಗಳನ್ನು ಕಲಿಸಿ ತಮ್ಮ ಕುಲವೃತ್ತಿಯಾದ ಚಿನಿವಾರ ಕೆಲಸದ ಮರ್ಮವನ್ನೂ ಸೂಕ್ಷ್ಮವಾಗಿ ಹೇಳಿಕೊಡುತ್ತಿದ್ದನು.

ಕೃಷ್ಣಪ್ಪನಾಯಕನೂ ತಂದೆಯ ಪರಾಮರಿಕೆ ಶಿಕ್ಷಣೆಗಳಲ್ಲಿ ಬೆಳೆದು ಪ್ರಾಯಸಮರ್ಥನಾದನು. ತಮ್ಮ ವೃತ್ತಿಯನ್ನು ಜಾಣತನದಿಂದ ಸಾಗಿಸುವ ಮಟ್ಟಿನ ವಿದ್ಯಾಭ್ಯಾಸವೂ ನಡೆಯಿತು. ತಾಯಿತಂದೆಗಳು ತಮ್ಮ ಮಗನು ಯುಕ್ತವಯಸ್ಕನಾದುದನ್ನು ತಿಳಿದು ಅಲ್ಲಲ್ಲಿ ಹುಡುಕಿ ಕೊನೆಗೆ ತಮ್ಮಂತೆಯೇ ಐಶ್ವರ್ಯವಂತರಾದ ಬ್ರಾಹ್ಮಗೋತ್ರದವರ ಮನೆಯಲ್ಲಿದ್ದ ಸುಲಕ್ಷಣಯುಕ್ತಳಾದ ಲಕ್ಷ್ಮೀಬಾಯಿಯೆಂಬ ಕನ್ಯೆಯನ್ನು ತಂದು ತಮ್ಮ ಮಗನಿಗೆ ವಿವಾಹ ಮಾಡಿದರು. ಲಕ್ಷ್ಮೀಬಾಯಿಯೂ ಮುಂದ ದೊಡ್ಡವಳಾಗಿ ಮನೆಗೆಬಂದು ಪತಿಗೂ ಅತ್ತೆಮಾವಂದಿರಿಗೂ ವಿಧೇಯಳಾಗಿ ಗೃಹಲಕ್ಷ್ಮಿಯಂತೆ ಮನೆಯಲ್ಲಿ ಓಡಿಯಾಡಿಕೊಂಡಿರಲು ವರದಪ್ಪನಾಯಕನೂ ಆತನ ಪತ್ನಿಯೂ ಅನುರೂಪರಾದ ಮಗ ಸೊಸೆಯರನ್ನು ಕಂಡು ಪರಮಾನಂದಪಡುತ್ತಾ ಕೆಲಕಾಲ ವಿದ್ದರು.

ತರುವಾಯ ಸ್ವಲ್ಪ ದಿವಸಗಳೊಳಗಾಗಿಯೇ ವಿಧಿನಿಯಮದಂತೆ ಆ ವೃದ್ಧದಂಪತಿಗಳು ಕಾಲವಶರಾಗಲು ಆ ಮನೆತನದ ಅಪಾರವಾದ ಆಸ್ತಿಪಾಸ್ತಿಗಳಿಗೆಲ್ಲಾ ಕೃಷ್ಣಪ್ಪನಾಯಕರೇ ಯಜಮಾನರಾದರು. ಪಿತ್ರಾರ್ಜಿತವಾದ ಆ ಆಸ್ತಿಯನ್ನು ಅಭಿವೃದ್ಧಿಪಡಿಸಬೇಕೆಂಬ ಅಭಿಲಾಷೆಯು ಉತ್ಪನ್ನವಾಯಿತು. ಲೋಕದಲ್ಲಿ ದ್ರವ್ಯವನ್ನು ಗಳಿಸಿ ಸುಖಪಡಬೇಕೆಂಬ ಅಪೇಕ್ಷೆಯಿಂದ ಸಂಪಾದಿಸುವವರು ಕೆಲವರಿರುವರು. ಮತ್ತೆ ಕೆಲವರು ತಾವು ಗಳಿಸುವ ದ್ರವ್ಯವನ್ನು ಹೇಗೆ ವಿನಿಯೋಗಿಸಬೇಕೆಂಬ ಯೋಚನೆಯನ್ನಾಗಲೀ ತಾವು ಏಕ ಐಶ್ವರ್ಯವನ್ನು ಗಳಿಸಬೇಕೆಂಬ ವಿಚಾರವನ್ನಾಗಲೀ ಮಾಡದೆ ಕೇವಲ ಅದೊಂದು ಬಗೆಯ ಪಿಶಾಚಾವೃತರಾದವರಂತೆ ಇರುವರು. ಸುಮ್ಮನೆ ದ್ರವ್ಯವನ್ನು ಗಳಿಸಬೇಕೆಂಬ ಒಂದೇ ಚಿಂತೆಯು ಅವರನ್ನು ಆವರಿಸಿರಲು ಅವರಿಗೆ ಕಷ್ಟ ಸುಖಗಳು ತೋರವು, ಬಂಧುಬಾಂಧವರು ಕಣ್ಣಿಗೆ ಬೀಳರು ಯಾವ ರಸಗಳು ಗಮನಕ್ಕೆ ಬಾರವು. ಅವರು ದಾನಧರ್ಮಗಳು ಪುಣ್ಯಪಾಪಗಳು ಎಂಬುವನ್ನು ಲಕ್ಷಿಸರು ಅವರಿಗೆ ಆಹಾರ ನಿದ್ರೆಗಳೂ ಬೇಡವಾಗುವುವು, ಸ್ನೇಹ ಮಾತುಕತೆಗಳು ವಿನೋದಗಳು ಯಾವುವೂ ರುಚಿಸವು ಸಂಗೀತ ಸಾಹಿತ್ಯಗಳು ಅಸಹ್ಯವೆನಿಸುವುವು ಇಂತು ಅವರು ಕೇವಲ ಅಂತರ್ಮುಖಿಯಾದ ಯೋಗಿಯಂತೆ ಯಾವಾಗಲೂ ದ್ರವ್ಯ ದ್ರವ್ಯ—ಹಣ ಹಣ ಎಂದು ಬಾಯಿ ಬಿಡುತ್ತಿರುವರು. ಬರುಬರುತ್ತಾ ಅಂತಹ ಧನಾಶಾ ಪಿಶಾಚವು ನಮ್ಮ ಕೃಷ್ಣಪ್ಪನಾಯಕರನ್ನು ಹಿಡಿಯಿತು. ತಮ್ಮ ತಂದೆಯ ಕಾಲದಲ್ಲಿ ಅಲ್ಪವಾಗಿದ್ದ ರತ್ನವ್ಯಾಪಾರವನ್ನೇ ವೃದ್ಧಿಪಡಿಸಿದರು. ದಿನ ದಿನಕ್ಕೆ ಗಿರಾಕಿಗಳೂ ವ್ಯಾಪಾರವೂ ಹೆಚ್ಚಿ ಅವರ ಬಳಿ ಲಕ್ಷ್ಮಿಯು ತಾಂಡವವಾಡಲಾರಂಭಿಸಿದಳು. ಬಹು ಶೀಘ್ರಕಾಲದಲ್ಲೇ ಕೃಷ್ಣಪ್ಪನಾಯಕರು ಲಕ್ಷಾಂತರ ದ್ರವ್ಯವನ್ನು ಗಳಿಸಿದರು. ಅವರ ಹೆಸರೂ ಪ್ರಸಿದ್ಧ ರತ್ನ ಪರೀಕ್ಷಕರೆಂದು ಹತ್ತಿರ ದೂರದಲ್ಲೆಲ್ಲಾ ಗಣ್ಯವಾಯಿತು ಆತನ ವ್ಯಾಪಾರವು ಆ ಕಾಲದಲ್ಲಿ ಅತ್ಯಂತ ಪ್ರಸಿದ್ಧನಗರವೂ ಕರ್ಣಾಟಕ ರಾಜ್ಯಕ್ಕೆ ರಾಜಧಾನಿಯೂ ಆದ ವಿಜಯನಗರದಲ್ಲೂ ನಡೆಯುತ್ತಿದ್ದಿತೆಂದು ಐತಿಹ್ಯವುಂಟು. ಬಹುಕಾಲಗಳ ನಂತರ ವಿಜಯ ನಗರದಲ್ಲಿ 'ಪುರಂದರನ ಮನೆ' ಎಂದು ಒಂದು ದೊಡ್ಡ ಮನೆಯನ್ನು ಜನರು ತೋರಿಸುತ್ತಿದ್ದರಂತೆ. ಆತನು ಆ ಮನೆಯನ್ನು ತಮ್ಮ

ಈ ವೈಭವ ಸ್ಥಿತಿಯಲ್ಲೇ ಆ ರಾಜಧಾನಿ ನಗರದಲ್ಲಿ ತಮ್ಮ ವ್ಯಾಪಾರದ ಸೌಕರ್ಯಕ್ಕಾಗಿ ಕಟ್ಟಿಸಿರಬಹುದು! ಅದೆಂತಾದರೂ ಇರಲಿ! ಪುರಂದರ ಗಡದಲ್ಲಂತೂ ಕೃಷ್ಣಪ್ಪನಾಯಕರೇ ಅತ್ಯಂತ ಪ್ರಸಿದ್ಧ ರತ್ನವ್ಯಾಪಾರಿಯೂ ಅತಿಶಯ ಐಶ್ವರ್ಯಸಂಪನ್ನರೂ ಆದರು.

ವ್ಯಾಪಾರಮಾತ್ರವಲ್ಲದೆ ಬಡ್ಡಿಗಾಗಿ ಹಣವನ್ನು ಕೊಟ್ಟು ಮಾಡುವ 'ಲೇವಾದೇವಿ'ಯೂ ಕೃಷ್ಣಪ್ಪನಾಯಕರ ಹಿರಿಯರ ಕಾಲದಿಂದಲೂ ಪದ್ಧತಿಯಲ್ಲಿ ಬಂದಿತ್ತು. ಕೃಷ್ಣಪ್ಪನವರ ಆಸ್ತಿಯೂ ವ್ಯಾಪಾರವೂ ಅಭಿವೃದ್ಧಿಯಾದಂತೆಯೇ ಅದೂ ಬೆಳೆಯಿತು. 'ಲೇವಾದೇವಿ' ಯ ವೃತ್ತಿಯಲ್ಲಿ ದೊರೆವ ಲಾಭವೆಂದರ ಬಡ್ಡಿಯ ಹಣವೇ ಅಲ್ಲವೆ? ಧನಾಶಾಗ್ರಸ್ತರಾದ ನಾಯಕರು ಆ ವಿಷಯದಲ್ಲಿ ಅತ್ಯಂತ ಜಾಗರೂಕರಾದರು. ಸುದಾಮನಿಗಿಂತಲೂ ದರಿದ್ರನಾದ ವ್ಯಕ್ತಿಯಿಂದಲೂ ಮಧ್ಯಾಹ್ನದ ಬಡ್ಡಿಯನ್ನೂ ಬಿಡದೆ ಸೆಳೆದುಕೊಳ್ಳುತ್ತಿದ್ದರು ವಾಯಿದೆಯ ದಿನಕ್ಕೆ ಒಂದು ದಿನ ಮೀರಿದರೂ ಬಡ್ಡಿಗೆ ಬಡ್ಡಿಯನ್ನು ಹಾಕುವುದನ್ನು ಮರೆಯುತ್ತಿರಲಿಲ್ಲ ಹೀಗಾಗಿ ನಾಯಕರು ತಮ್ಮ ತಂದೆಯಿಂದ ತಮಗೆ ಲಭ್ಯವಾದ ಆಸ್ತಿಯನ್ನು ಅತ್ಯಲ್ಪಕಾಲದಲ್ಲೇ ಅಗಾಧವೆನಿಸುವಂತೆ ಅಭಿವೃದ್ಧಿಪಡಿಸಿದರು.



## ಅಧ್ಯಾಯ ೩ "ಬಡಬ್ರಾಹ್ಮಣ — ಯಾಚನೆ"

ಜ್ಞಾನವು ದ್ರವಪದಾರ್ಥವೆಂಬ ಹೇಳಿಕೆಯುಂಟಷ್ಟೆ! ಅದರಂತೆಯೇ ಲಕ್ಷ್ಮಿ-ಐಶ್ವರ್ಯವೆಂಬ ಪದಾರ್ಥವೂ (ತತ್ತ್ವವೂ) ಒಂದು ದೃಷ್ಟಿಯಿಂದ ದ್ರವವಸ್ತುವೆಂದು ಹೇಳಬಹುದು. ಏಕೆಂದರ ಅದಕ್ಕೂ ದ್ರವವಸ್ತುವಿಗಿರಬೇಕಾದ ಗುಣಗಳಲ್ಲಿ ಕೆಲವುಂಟು. ಮುಖ್ಯವಾಗಿ 'ಹಳ್ಳಕ್ಕೆ ನೀರು ಹರಿಯುವಂತೆ ಹಣವಾದರೂ ಹಣವುಳ್ಳವರಲ್ಲೇ ಸೇರುವುದೆ'ಂಬ ಲೋಕವಾರ್ತೆಗನುಸಾರವಾಗಿ ಯಾರು ಹಣವನ್ನು ಪ್ರಾಣಕ್ಕಿಂತಲೂ ಹೆಚ್ಚು ಜಾಗರೂಕತೆಯಿಂದ ಸಂಗ್ರಹಿಸುತ್ತಿರುತ್ತಾರೆಯೋ ಅವರಲ್ಲೇ ದ್ರವ್ಯವು-ಲಕ್ಷ್ಮಿಯು ಮನೆಮಾಡಿಕೊಳ್ಳುವಳು. ಚಂಚಲಳೆಂದು ಹೆಸರ್ಗೊಂಡ ಲಕ್ಷ್ಮಿಯು ಅಲ್ಲಿ ಅಚಲತೆಯನ್ನು

ಹಣ ಎಂದು ನೆನೆಸುವಳು. ಕೃಷ್ಣಪ್ಪನಾಯಕರು ಎಷ್ಟು ಜಾಗರೂಕತೆ, ನಿಷ್ಠುರತೆ ಯಿಂದಿನ್ನು ಭಾಗಗಳಿಂದ ಒಂದೊಂದು ಕಾಸನ್ನೂ ಬಿಡದೆ ಧನವನ್ನು ಸಂಗ್ರಹಿಸಿದರೋ ಅಷ್ಟು ಕೃಪಣತೆಯಿಂದ ಅದನ್ನು ಕಾಪಾಡುತ್ತಿದ್ದರು. ಬ್ರಾಹ್ಮಣರಲ್ಲಿ ಸಾಮಾನ್ಯವಾಗಿ ಅನೇಕ ಹಬ್ಬಗಳುಂಟಷ್ಟೆ! ಯುಗಾದಿ ವಿನಾಯಕಚತುರ್ಥಿ, ಅನಂತವ್ರತ, ಶ್ರೀಕೃಷ್ಣಾಷ್ಟಮಿ, ನವರಾತ್ರಿ, ದೀಪಾವಳಿ ಮುಂತಾದ ಹಬ್ಬಗಳನ್ನು ಅವರು ಬಹು ವಿಜೃಂಭಣೆಯಿಂದ ಆಚರಿಸುತ್ತಾರಲ್ಲವೆ! ಅಂತಹ ಹಬ್ಬ ಹರಿದಿನಗಳಲ್ಲಿ ಕೋಟ್ಯಾಧಿಪತಿಯಾದ ಕೃಷ್ಣಪ್ಪನಾಯಕರ ಮನೆಯಲ್ಲಿ ಯಾವ ಉತ್ಸವವಾಗಲೀ ಅತಿಥಿ ಅಭ್ಯಾಗತರ-ಯಾಚಕರ ಗುಂಪೆಯಾಗಲೀ ಇಲ್ಲದ ಆ ದೊಡ್ಡ ಮನೆಯು ನಿಶ್ಶಬ್ದವಾಗಿ-ಮೌನವಾಗಿ ಸ್ಮಶಾನದಂತೆ ಶೂನ್ಯಮಯವಾಗಿ ಕಾಣಿಸುತ್ತಿದ್ದಿತು. ಒಬ್ಬ ಭಿಕ್ಷುಕನಿಗಾದರೂ ಆ ಮನೆಯಲ್ಲಿ ಭಿಕ್ಷೆ ದೊರಕುತ್ತಿಲ್ಲ. ಅಂತಹ ದಿನಗಳಲ್ಲೂ ಯಾವುದೊಂದು ವಿಶೇಷವೂ ಕೂಡದೆಂದೂ ಯಾರಿಗೂ ಯಾವ ದಾನಾದಿಗಳನ್ನೂ ಕೊಡಬೇಕಾದುದಿಲ್ಲವೆಂದೂ ನುಡಿದು ನಾಯಕರು ತಮ್ಮ ಭಂಡಸಾಲೆಗೆ (ಜವಾರಕಟ್ಟೆ) ಹೋಗುತ್ತಿದ್ದರು. ಹೀಗೆಯೇ ಕೆಲವುಕಾಲ ನಡೆದುಬಂತು.

ಅಮಾವಾಸ್ಯೆ, ಗ್ರಹಣ ಮುಂತಾದ ಪರ್ವಕಾಲಗಳಲ್ಲಿ ಭೀಮಾತೀರದಲ್ಲಿ ಸ್ನಾನ ಮಾಡುವುದಕ್ಕೆ ಹತ್ತಿರ-ದೂರದ ಪ್ರದೇಶಗಳಿಂದ ಅನೇಕ ಜನರು ಸೇರುತ್ತಿದ್ದರು. ಅಂತಹ ದಿನಗಳಲ್ಲೂ ನಾಯಕರು ಹರುಕು ಪಂಚೆಯನ್ನೊಂದನ್ನು ಉಟ್ಟು ಕಡುದರಿದ್ರನಾದ ಬ್ರಾಹ್ಮಣ ಸಾಮಾನ್ಯನಂತೆ ಹತ್ತು ಜನಗಳೊಂದಿಗೆ ಹನ್ನೊಂದನೆಯವರಾಗಿ ನದಿಯ ಎಲ್ಲಾದರೊಂದು ಅವ್ಯಕ್ತ ಸ್ಥಳದಲ್ಲಿ ಇಳಿದು ಸ್ನಾನವನ್ನು ತೀರಿಸಿಕೊಂಡು ಹೊರಟು ಬಂದುಬಿಡುವರು. ಕೋಟ್ಯಾಧಿಪತಿಯಾಗಿದ್ದರೂ-ಇಷ್ಟು ಲುಬ್ಧತೆಯಿಂದ ಲೇಶಾಂಶವೂ ದಾನಧರ್ಮಗಳನ್ನು ಮಾಡದೆ ಇದ್ದ ಪತಿಯ ಚರ್ಯೆಯನ್ನು ಕಂಡು ಲಕ್ಷ್ಮೀಬಾಯಿಯು ಒಳಗೊಳಗೇ ನೊಂದುಕೊಳ್ಳುತ್ತಿದ್ದಳು. ಹೀಗಿರುವಲ್ಲಿ ಒಂದುಸಾರಿ ಅರ್ಧೋದಯ ಯೋಗವು ಪ್ರಾಪ್ತವಾಯಿತು. ಅಂತಹ ಪುಣ್ಯಕಾಲವು ನೂರು ವರ್ಷಗಳಲ್ಲಿ ಒಂದು ಬಾರಿ ಮಾತ್ರ ಪ್ರಾಪ್ತವಾಗುವುದಂತೆ! ಅಪೂರ್ವವೂ ಪವಿತ್ರವೂ ಆದ ಆ ಪುಣ್ಯದಿನದಲ್ಲಿ ಭೀಮಾ ತೀರ್ಥದಲ್ಲಿ ಸ್ನಾನ ಮಾಡಲು ಲೆಕ್ಕವಿಲ್ಲದಷ್ಟು ಜನರು ನೆರೆದರು. ಆ ದಿನ ಆ ತೀರ್ಥದಲ್ಲಿ ಸ್ನಾನ

ಮಾಡಿ ಪಿತೃಗಳಿಗೆ ತರ್ಪಣಾದಿಗಳನ್ನೂ ಬ್ರಾಹ್ಮಣರಿಗೆ ದಕ್ಷಿಣೆ ದಾನಾದಿಗ ಳನ್ನೂ ಕೊಟ್ಟರ ಪಿತೃಗಳಿಗೆ ಶಾಶ್ವತ ವೈಕುಂಠ ಪದವಿಯು ಪ್ರಾಪ್ತವಾಗುವು ದೆಂದು ಆಸ್ತಿಕರನೇಕರು ಬಗೆಬಗೆಯ ದಾನಗಳನ್ನು ಕೊಡಲು ಸಿದ್ಧರಾದರು ಆ ಪುಣ್ಯ ಕಾಲದ ಮಾಹಾತ್ಮ್ಯವು ಕೃಷ್ಣಪ್ಪನಾಯಕರ ಕಿವಿಗೂ ಬಿದ್ದಿತು. ಏನು ಮಾಡುವುದೆಂದು ಮಹದ್ಯೋಜನೆಯಿಂದ ನಾಯಕರು ಅದರಿಂದ ಬೇಗ ಪಾರಾಗಬಹುದೆಂದು ಚಿಂತಿಸುತ್ತಿದ್ದರು. ಅಷ್ಟರಲ್ಲಿ ಲಕ್ಷ್ಮೀಬಾಯಿ ಯು ಪತಿಯನ್ನು ಕುರಿತು ಆ ದಿನ ತೀರ್ಥಸ್ನಾನಮಾಡಿ ಬ್ರಾಹ್ಮಣರಿಗೆ ಏನಾ ದರೂ ದಾನದಕ್ಷಿಣೆಗಳನ್ನು ಕೊಡಬೇಕೆಂದು ವಿಜ್ಞಾಪಿಸಿದಳು ಅದನ್ನು ಕೇಳಿ ನಾಯಕರು ಇದು ಹೇಗೂ ಬಿಡಲಾರದೆಂದು ತಿಳಿದು ತಾವ್ರದ ದುಡ್ಡುಗಳನ್ನು ತುಂಬಿಟ್ಟಿದ್ದ ಚೀಲಗಳಲ್ಲಿ ಎಷ್ಟೋ ಹುಡುಕಿ ಕೊನೆಗೆ ಪೂರ್ತಿಯಾಗಿ ಸವೆದು ನುಣ್ಣಗಾಗಿ ಹೋಗಿದ್ದ ಒಂದು ಮೂರು ಕಾಸಿನ ದುಡ್ಡನ್ನು ಸೊಂಟದಲ್ಲಿ ಸಿಕ್ಕಿಸಿಕೊಂಡು ಸ್ನಾನಕ್ಕೆ ನಡೆದರು.

ಮತ್ತು ಎಂದಿನಂತೆಯೇ ಜನಸಂಘವಿಲ್ಲದ ದೂರದ ಒಂದು ಸ್ಥಳದಲ್ಲಿ ಕಿದು ಒದ್ದೆಯನ್ನುಟ್ಟು ಸಂಕಲ್ಪ ಹೇಳಿಕೊಂಡು ಮುಳುಗಲು ಸಿದ್ಧರಾಗುವ ವೇಳೆಗೆ ಸರಿಯಾಗಿ ಹಿಂದಿನಿಂದ "ಶುಭೇ ಶೋಭನೇ ಮುಹೂರ್ತೆ-ಆದಿಬ್ರ ಹ್ಮಣಃ" ಎಂದು ಸಂಕಲ್ಪ ಹೇಳಲು ಪ್ರಾರಂಭಿಸಿದ ಶಬ್ದವು ಕೇಳಿಸಿತು ನಾಯಕರು ಗಾಬರಿಗೊಂಡಂತೆ ಹಿಂತಿರುಗಿ ನೋಡಲು ಅಲ್ಲೊಬ್ಬ ವೃದ್ಧ ಬ್ರಾಹ್ಮಣ! ಬೆನ್ನು ಬಾಗಿಹೋಗಿದೆ. ಚರ್ಮವು ಸುಕ್ಕುಬಿದ್ದಿದೆ. ದೇಹವೋ ಅಸ್ಥಿಪಂಜರವೆಂಬಂತೆ ಕಾಣುತ್ತಿದೆ ಕೈಯಲ್ಲೊಂದು ಉದ್ದವಾದ ಕೋ ಲನ್ನು ಹಿಡಿದು ಬಾಯಿಂದ ಏನೋ ಮಂತ್ರ ಹೇಳಿಕೊಳ್ಳುತ್ತಾ-ತಲೆಯನ್ನು ನಡುಗಿಸುತ್ತಾ ಇದ್ದ ಆ ಬ್ರಾಹ್ಮಣನು ನಾಯಕರ ದೃಷ್ಟಿಗೆ ಬಿದ್ದನು.

"ಅಕಟಾ, ಏನುಮಾಡಲಿ? ರಾಮೇಶ್ವರಕ್ಕೆ ಹೋದರೂ ಶನೇಶ್ವರ ಬಿಡದೆಂಬಂತೆ ಜನಸಂಘವನ್ನು ಬಿಟ್ಟು ಇಷ್ಟು ದೂರಕ್ಕೆ ಬಂದರೂ ಇಲ್ಲಿಗೂ ಈ ವೃದ್ಧನು ಬ್ರಹ್ಮಕಪಾಲದಂತೆ ನನ್ನನ್ನೇ ಹುಡುಕಿಕೊಂಡು ಬಂದನಲ್ಲಾ!" ಎಂದುಕೊಂಡು ನಾಯಕರು ಏನು ಮಾಡಬೇಕೆಂದು ಯೋಚಿಸತೊಡಗಿ ದರು. ಆಗ ಅವರಿಗೆ ಉಭಯ ಸಂಕಟ ಪ್ರಾಪ್ತವಾಯಿತು. ಒಂದು ಕಡೆ ದೇಹಿಯೆಂದು ಬದ್ಧಾಂಜಲಿಯಾಗಿ ನಿಂತಿದ್ದ ವೃದ್ಧ ಬ್ರಾಹ್ಮಣನ ಬೇಡಿಕೆ.

ಮುತ್ತೊಂದು ಕಡೆ ಅಂತಹ ಪರ್ವಕಾಲದಲ್ಲೂ ತಾನಾಗಿ ಪ್ರಾಪ್ತನಾದ ಆ ಒಬ್ಬ ಬ್ರಾಹ್ಮಣನಿಗೂ ದಾನ ಕೊಡದೆ ಧಿಕ್ಕರಿಸಿ ಕಳುಹಿಸಿಬಿಡುವರೇನೋ ಎಂದು ಮ್ಲಾನವದನಳಾಗಿ ನಿಂತಿದ್ದ ಪತ್ನಿಯ ಸಜಲನಯನದ ಚಿಂತಾಕರ ವಾದ ನೋಟ ನಾಯಕರಿಗೆ ಸ್ವಲ್ಪ ಹೊತ್ತು ಏನು ಮಾಡಲೂ ತೋರಲಿಲ್ಲ ಅಷ್ಟರಲ್ಲ ಅವರಿಗೆ ಒಂದು ಉಪಾಯ ತೋರಿತು. ಸೊಂಟದಲ್ಲಿದ್ದ ಆ ಮೂರು ಕಾಸಿನ ದುಡ್ಡನ್ನು ನೀರಿನಲ್ಲಿ ಹಾಕಿ ಕಾಲು ಬೆರಳುಗಳಿಂದ ಎತ್ತಿ ಹಿಡಿದು ಕೊಂಡು ''ಹೋ ಹೋ! ದುಡ್ಡು ನೀರಿನಲ್ಲಿ ಬಿದ್ದು ಹೋಯಿತು'' ಎಂದು ಅತ್ಯಂತ ಕಾತರರಾದವರಂತೆ ಹುಡುಕತೊಡಗಿದರು ನಡುಕಟ್ಟನ್ನು ಬಿಚ್ಚಿ ದರು. ಸ್ನಾನದ ಪಂಚೆಯನ್ನು ಜಾಡಿಸಿದರು. ಇಲ್ಲಿ ಹುಡುಕಿದರು, ಅಲ್ಲ ಹುಡುಕಿದರು ಕೊನೆಗೂ ಆ ದುಡ್ಡು ಸಿಕ್ಕಲಿಲ್ಲ. ಸಾಹುಕಾರರ ಈ ಜರ್ಯೆ ಯನ್ನು ಕಂಡು ವೃದ್ಧನು ಮುಗುಳುನಗೆಯನ್ನು ನಗುತ್ತಾ ಹತ್ತಿರದಲ್ಲೇ ಇಳಿದಿದ್ದ ನಾಯಕರ ಪತ್ನಿಯನ್ನು ಒಂದು ಸಾರಿ ನೋಡಿ ಅಲ್ಲಿಂದ ಹೊರಟು ನಡೆದು ಜನಸಮೂಹದಲ್ಲಿ ಬೆರೆದನು. ಲಕ್ಷ್ಮೀಬಾಯಿಗೆ ಆಗ ಹೇಗನ್ನಿಸಿರಬ ಹುದು! ಅಂತಹ ಅಪೂರ್ವ ಪುಣ್ಯ ಕಾಲದಲ್ಲ ತಾನಾಗಿ ಪ್ರಾಪ್ತನಾದ ವೃದ್ಧ ಬ್ರಾಹ್ಮಣನಿಗೆ ದಾನದಕ್ಷಿಣೆಗಳನ್ನಿತ್ತು ಸತ್ಕರಿಸುವುದಕ್ಕೆ ಪ್ರತಿಯಾಗಿ ತನ್ನ ಪತಿಯು ನಂಬಲು ಅನರ್ಹವಾದ ಆ ಕಾರಣವನ್ನು ಹೇಳಿ ಕಪಟೋಪಾಯ ದಿಂದ ವಂಚಿಸಿ ಕಳುಹಿಸಿದುದನ್ನು ಕುರಿತು ಆ ಸಾಧ್ವಿಯು ಅತೀವ ನೊಂದುಕೊಂಡಳು. ಎಂತೂ ಸ್ನಾನವನ್ನು ತೀರಿಸಿಕೊಂಡು ನಾಯಕರು ಆ ದಿನ ಮನೆಯನ್ನು ಸೇರಿದರು. ಹೀಗೆ ಕೆಲದಿನಗಳು ಕಳೆದುವು

ಮತ್ತೊಂದು ದಿನ ನಾಯಕರು ಕಬಚ ರುಮಾಲು ಅಂಗವಸ್ತ್ರಗಳನ್ನು ಧರಿಸಿಕೊಂಡು ತಮ್ಮ ಜಿನವಾದಕಟ್ಟೆಗ ಹೂರಡಲು ಸಿದ್ಧರಾಗಿ ತಮ್ಮ ಆ ದೊಡ್ಡ ಮನೆಯ ಹಜಾರಕ್ಕ ಬಂದರು ಇನ್ನೇನು ಹೊರಕ್ಕೆ ಹೊರಡ ಬೇಕು! ಅಷ್ಟರಲ್ಲ ಒಬ್ಬ ಬ್ರಾಹ್ಮಣನು ಹೊರಬಾಗಿಲಿನಿಂದ ಒಳಹೊಕ್ಕನು. ಆತನ ಮುಖವು ದಿವ್ಯ ವೈಷ್ಣವ ಚಿಹ್ನೆಗಳಾದ ಮುದ್ರೆಗಳಿಂದಲೂ ದೇಹವು ಗೋಪೀಚಂದನದ ನಾಮಗಳಿಂದಲೂ ಶೋಭಿಸುತ್ತಿದ್ದಿತು. ಆತನು ತುಲಸೀ ಮಣಿಗಳ ದಿವ್ಯ ಹಾರವನ್ನೂ ಶುಭ್ರವಾದ ಯಜ್ಞೋಪವೀತವನ್ನೂ ಧರಿಸಿ ಮೂರ್ತಿಮತ್ತಾದ ವೈಷ್ಣವ ವಿಗ್ರಹದಂತೆ ಶೋಭಿಸುತ್ತಿದ್ದನು. ಆದರ

ಆತನು ದೀರ್ಘ ದಾರಿದ್ರ್ಯರೋಗದಿಂದ ತೊಳಲುತ್ತಿದ್ದಂತೆ ತೋರುತ್ತಿದ್ದಿತು. ನ್ನುನೋಲೆ ಪೂರ್ತಿಯಾಗಿ ಮುಚ್ಚಲಿಕ್ಕೂ ಸಾಕಾಗದಂತ ಹರುಕು ಪಂಚ ಯನ್ನುಟ್ಟು ಪೊದದು ಯಾಚಕಸಾಮಾನ್ಯವಾದ ದೀನಸ್ವರದಿಂದ ದಾಕ್ಷ್ಯ ವನ್ನು ನೋಡುತ್ತಾ ಕರಚರಣಾದಿ ಅಂಗವಿಕಾರಗಳಿಂದ ವಿನಯದೈನ್ಯತೆಗ ಳನ್ನು ತೋರಿಸುತ್ತಾ ಆ ಬಡಬ್ರಾಹ್ಮಣನು ಮನೆಯನ್ನು ಬಿಟ್ಟು ಹೊರ ಡಲು ಸಿದ್ಧರಾಗುತ್ತಿದ್ದ ನಾಯಕರನ್ನು ನೋಡಿ "ಸ್ವಸ್ತಿ ಸ್ವಸ್ತಿ ಮಹಾ ರಾಯರೆ, ನಿನಗೆ ಶುಭವಾಗಲಿ ಭಗವಂತನು ನಿನಗೆ ಅಪರಿಮಿತ ಐಶ್ವರ್ಯ ಸೌಭಾಗ್ಯಗಳನ್ನು ಕೊಡಲಿ! ನಾನು ಬಹು ದೀನನಾಗಿ ಬಂದಿದ್ದೇನೆ, ಮಹಾ ರಾಯರಾ, ನನ್ನ ಮಗನಿಗೆ ಉಪನಯನದ ವಯಸ್ಸು ಮೀರುತ್ತಾ ಇದೆ. ಯೋಗ್ಯ ದೇಣಾವರ ಕೊಟ್ಟು ಆ ಮಗುವನ್ನು ಬ್ರಾಹ್ಮಣ್ಯಕ್ಕೆ ತರಲು ಸಹಾಯ ಮಾಡು" ಎಂದು ಪ್ರಾರ್ಥಿಸಿದನು ಆಗ ಆ ಬ್ರಾಹ್ಮಣನ ಸೊಂಟ, ಬಾಯಿಂದ ಪೊರಟ ದೀನವಾಣಿ, ಕರಚರಣಾದಿ ಅಂಗಚೇಷ್ಟೆ ಮುಂತಾದು ವುಗಳು ಕಲ್ಲನ್ನಾದರೂ ಕರಗಿಸಿ ಅದರಿಂದ ದ್ರವವನ್ನು ಹೊರಪಡಿಸುವಂತ ವ್ಯವು ಆದರೇನು! ಲುಬ್ಧಾಗ್ರೇಸರರಾಗಿದ್ದ ನಾಯಕರಲ್ಲಿ ಅವುಗಳಿಂದ ಯಾವ ಪ್ರಯೋಜನವೂ ಆಗಲಿಲ್ಲ ಅವರ ಪಾಷಾಣ ಹೃದಯವು ಅದರಿಂದ ಕರಗಲಿಲ್ಲ!

ಅಂಗಿಯ ಕಸೆಗಳನ್ನು ಕಟ್ಟಿಕೊಂಡು ಮಧುರೆಯ ಬಣ್ಣದ ರುಮಾ ಲನ್ನು ಸುತ್ತಿಕೊಂಡು ಸಂಚಿಯನ್ನು ಎತ್ತಿ ಹೆಗಲಿಗೆ ಹಾಕಿ ಇನ್ನೇನು ಹೊರ ಡಬೇಕೆಂಬಷ್ಟರಲ್ಲಿ ಪ್ರಾಪ್ತನಾಗಿ ಮೊಳಕಾಲುದಂತ ಪೇಳತೊಡಗಿದ ಬ್ರಾಹ್ಮಣ ನನ್ನು ಓರೆನೋಟದಿಂದ ನೋಡಿ ನಾಯಕರು 'ಏನು ಏನು? ಮಗನ ಮುಂಜಿಯೋ! ದೇಣಾವರವಾಗಬೇಕೋ? ಮತ್ತೇನು ಈ ದಿನ ಮಗನ ಮುಂಜಿ, ನಾಳೆ ಮಗಳ ಮದುವೆ, ನಾಡಿದ್ದು ಅಪ್ಪನ ಶ್ರಾದ್ಧ! ಇದಕ್ಕೆಲ್ಲಾ ನಾವು ಹೊಣೆಯೋ! ಏನೂ ಇಲ್ಲ. ಹೊರಡಿ ಹೊರಡಿ!" ಎಂದು ಮನೆಯಿಂದ ಹೊರಕ್ಕೆ ಹೊರಟರು. ಆದರೇನು, ಈ ಮಾತುಗಳಿಗೆ ಬೆದರಿ ಬ್ರಾಹ್ಮಣನು ಅವರನ್ನು ಬಿಡಲಿಲ್ಲ ಹೊರಕ್ಕೆ ಹೊರಟ ನಾಯಕರನ್ನು ಅನುಸರಿಸಿ ಕಲ ದೂರ ನಡೆದು ಹೋದನು. ಪುನಃ ತನ್ನ ಕಷ್ಟಕಾರ್ಪಣ್ಯಗಳನ್ನು ಹೇಳಿಕೊಂ ಡನು. ಖಂಡಿತವಾಗಿಯೂ ನಾಯಕರ ಹೊರತು ತನಗೆ ಅನ್ಯಥಾ ಆಸಯೇ

ಇಲ್ಲವೆಂದು ಬಿನ್ನವಿಸಿಕೊಂಡನು. ಆ ಬಡಬ್ರಾಹ್ಮಣನ ದೀನತೆಯನ್ನು ಕಂಡು ನಾಯಕರ ಮನಸ್ಸಿನಲ್ಲಿ ಕ್ಷಣಕಾಲ ದಯಾಗುಣದ ಛಾಯೆಯ ಸಂಚಾರ ವಾದಂತಾಯಿತು! ಆಗಲವರು 'ಇರಲಿ ನಾಳೆ ಬನ್ನಿ' ಎಂದು ನುಡಿದು ಪುನಃ ಅವರ ಕಡೆ ತಿರುಗಿ ನೋಡದ ತಮ್ಮ ಭಂಡಸಾಲೆಯನ್ನು ಕುರಿತು ನಡೆದರು ಇದನ್ನೆಲ್ಲಾ ನೋಡುತ್ತಾ ನಿಂತಿದ್ದ ಲಕ್ಷ್ಮೀಬಾಯಿಯು ಒಂದು ಸಾರಿ ನಿಟ್ಟುಸಿರು ಬಿಟ್ಟು ಮನೆಯೊಳಕ್ಕೆ ಹೊರಟುಹೋದಳು.

ಆ ಬ್ರಾಹ್ಮಣನು ಸಾಮಾನ್ಯನೆಂದು ತೋರಲಿಲ್ಲ! ಮಾರನೆಯ ದಿನ ಬೆಳಗ್ಗೆ ಸರಿಯಾಗಿ ಪುನಃ ಪ್ರಾಪ್ತನಾಗಿ ನಾಯಕರನ್ನು ಕುರಿತು ವಂದಿಸಿ 'ಸ್ವಸ್ತ್ಯಸ್ತು ಮಹಾರಾಯಾ' ಎಂದನು ನಾಯಕರಿಗೆ ಆತನಿಂದ ಬಿಡುಗಡೆಯಾಗುವ ಉಪಾಯ ತೋರಲಿಲ್ಲ ಆದರೆ 'ನಾಳೆ ಬನ್ನಿ' ಎಂದು ಬಾಯಿತಪ್ಪಿ ಒಂದು ಸಾರಿ ಹೇಳಿಬಿಟ್ಟುದರಿಂದ ಈಗ 'ಇಲ್ಲ-ಹೊರಟುಹೋಗಿ' ಎಂದು ನುಡಿಯಲು ಮಾರ್ಗವಿಲ್ಲವಾಯಿತು ಆದರೆ 'ನಾಳೆ ಬನ್ನಿ' ಎಂದು ನುಡಿದು ದಕ್ಕೆ ಸರಿಯಾಗಿ ಆ ದಿನ ಹಣವನ್ನು ಕೊಡುವುದೆಂತು? ಬಹು ಹೊತ್ತಿನವರಗೆ ಬ್ರಾಹ್ಮಣನ ಕಡೆ ತಿರುಗಿಯೂ ನೋಡದೆ ಮಾತನ್ನೂ ಆಡಿಸದೆ ಮನೆಯಲ್ಲೇ ಇಲ್ಲ ಅಲ್ಲಿ ಸುತ್ತುತ್ತಾ ಇದ್ದು 'ಇರಲಿ ಈಗ ಹೊತ್ತಿಲ್ಲ ನಾಳೆ-ನಾಳೆ' ಎಂದು ಅವಸರವಸರದಿಂದ ನುಡಿದು ನಾಯಕರು ಹೊರಕ್ಕೆ ಹೊರಟರು. ಬ್ರಾಹ್ಮಣನು ತಾನು ಬಂದ ದಾರಿಯಲ್ಲಿ ಹೊರಟು ನಡೆದನು ಮಾರನೆಯ ದಿನ ಮತ್ತೂ ಬಂದನು ಮತ್ತೂ ಅದೇ ಪ್ರಾರ್ಥನೆ-ಅದೇ ಬೇಡಿಕೆ ನಾಯಕರಿಂದ ಅದೇ ಪ್ರತ್ಯುತ್ತರ "ನಾಳೆ ನಾಳೆಗಳು" ತಪ್ಪಲೇ ಇಲ್ಲ. ಬ್ರಾಹ್ಮಣನೂ ಬೇಸರದೆ ಆರು ತಿಂಗಳವರೆಗೆ ತಪ್ಪದ ನಾಯಕರ ಮನೆಗೆ ನಡೆದನು. ಆದರೆ ಯಾವ ಪ್ರತಿಫಲವೂ ದೊರೆಯಲಿಲ್ಲ.

ಆರು ತಿಂಗಳುಗಳಾದುವು. ಆದರೂ ಬ್ರಾಹ್ಮಣನು ಬರುವುದನ್ನು ಬಿಡಲೇ ಇಲ್ಲ. ನಾಯಕರಿಗೇ 'ನಾಳೆ ಬನ್ನಿ-ನಾಳೆ ಬನ್ನಿ' ಎಂದು ಹೇಳಿ ಹೇಳಿ ಬೇಸರವಾಯಿತು. ಕೊನೆಗೊಂದು ದಿನ ಪ್ರಾತಃಕಾಲ ಎಂದಿನಂತೆ ಬ್ರಾಹ್ಮಣನು ಬಂದಿರಲು ನಾಯಕರು 'ಏನಿದು? ಎಷ್ಟು ದಿನ ಬಂದು ಬಂದು ಪೀಡಿಸುವುದು?' ಎಂದು ಗೊಣಗಿಕೊಂಡು ಹಣಕಾಸುಗಳನ್ನು ಇಟ್ಟಿದ್ದ ಭಂಡಾರದ ಕೊಟಡಿಯ ಬಾಗಿಲನ್ನು ತೆರೆದರು ಆ ದಿನ ಬ್ರಾಹ್ಮಣನು 'ಇನ್ನು ಚಿಂತೆಯಿಲ್ಲ! ಈ ದಿನ ಪ್ರಸಾದರೊಂದು ಆಗದಿರದು!' ಎಂದುಕೊಂಡು

ನಾಯಕರ ಸುಳಿವನ್ನೇ ಗಮನಿಸುತ್ತಾ ಕುಳಿತಿದ್ದನು ನಾಯಕರು ಹಣ ಕಾಸುಗಳನ್ನಿಟ್ಟಿದ್ದ ದೊಡ್ಡ ಪೆಟ್ಟಿಗೆಯ ಬೀಗವನ್ನು ತೆಗೆದು ನಾಣ್ಯಗಳಿಂದ ತುಂಬಿ ಭಾರವಾಗಿದ್ದ ಚೀಲವನ್ನೊಂದನ್ನು ಎರಡು ಕೈಗಳಿಂದಲೂ ಎತ್ತಿ ಹೊರಕ್ಕೆ ತಂದರು. ಆ ಚೀಲದ ಗಾತ್ರವನ್ನು ನೋಡಿದ ಬ್ರಾಹ್ಮಣನ ಮುಖವು ಪ್ರಸನ್ನವಾಯಿತು. ಆ ದಿನ ತನ್ನ ದಾರಿದ್ರ್ಯವು ಇಂಗಿತೆಂದುಕೊಂಡನು. ಇನ್ನು ಮೇಲೆ ತಿರುಗುವ ತೊಂದರೆಯೂ ತಪ್ಪಿತೆಂದು ಒಂದು ಬಗೆಯಿಂದ ಸಮಾಧಾನ ಹೇಳಿಕೊಂಡನು

ಅಷ್ಟರಲ್ಲಿ ನಾಯಕರೂ ಹಜಾರಕ್ಕೆ ಬಂದರು. ಮತ್ತು ಅಲ್ಲೇ ಕುಳಿತಿದ್ದ ಆ ಬ್ರಾಹ್ಮಣನನ್ನು ಕೋಪ-ನಿರ್ದಯತೆ-ಅಸಹನೆಗಳಿಂದ ಕೂಡಿದ ದೃಷ್ಟಿಯಿಂದ ಒಂದು ಸಾರಿ ಬಿರುಗಣ್ಣಿನಿಂದ ನೋಡಿ ಆ ಚೀಲದ ಬಾಯನ್ನು ಬಿಚ್ಚಿ ಅದರಲ್ಲಿದ್ದ ನಾಣ್ಯಗಳನ್ನೆಲ್ಲಾ ಕೆಳಕ್ಕೆ ಸುರಿದರು ಬ್ರಾಹ್ಮಣನು ಆ ಚೀಲವು ವರಹ ಹೊನ್ನು ಹಣಗಳಿಂದ ತುಂಬಿರಬಹುದೆಂದು ನೆನೆಸಿದ್ದನು ಆದರೆ, ಅಕ್ಕಟಾ ಅದೇನು? ಎಲ್ಲವೂ ಆರುಕಾಸಿನ ದುಡ್ಡುಗಳು! ನಾಲದುದಕ್ಕೆ ಎಲ್ಲವೂ ಪೂರ್ತಿಯಾಗಿ ಸವೆದು ಅದರ ಬೆಲೆಯನ್ನಾಗಲೀ ಚಿಹ್ನೆಯನ್ನಾಗಲೀ ತೋರಿಸುವ ಯಾವ ಲಿಪಿ-ಚಿತ್ರಗಳೂ ಇಲ್ಲದೆ ನುಣ್ಣಗಾಗಿಹೋಗಿದ್ದುವು. ಅದನ್ನು ನೋಡಿ ಬ್ರಾಹ್ಮಣನು ಹತಾಶನಾದನು. ಆತನ ಮುಖದಮೇಲಿನ ಕಳೆಯು ಕುಂದಿತು. ಗೆಲುವು ಹಾರಿಹೋಯಿತು. ನಗುಮುಖವು ಮ್ಲಾನವಾಯಿತು. ಆತನು ಮುಂದೇನು ನಡೆಯಲಿರುವುದೋ ಎಂದು ನಟ್ಟ ದೃಷ್ಟಿಯಿಂದ ಅಲ್ಲಿ ಸುರಿಯಲ್ಪಟ್ಟ ಸವೆದ ಆ ಆರುಕಾಸುಗಳ ರಾಶಿಯನ್ನೇ ನೋಡುತ್ತಾ ಕುಳಿತಿರುವಾಗ್ಗೆ ನಾಯಕರು "ಹ್ಞೂ ಹೊತ್ತಾಯಿತು. ಇದರಲ್ಲಿ ಬೇಕಾದ ಒಂದು ನಾಣ್ಯವನ್ನು ಬೇಗ ಆರಿಸಿ ತೆಗೆದುಕೊಳ್ಳಿ ನಾನು ಹೋಗಬೇಕು" ಎಂದು ನುಡಿದ ಮಾತುಗಳು ಬ್ರಾಹ್ಮಣನಿಗೆ ಕೇಳಿಸಿದುವು. ಆ ಮಾತುಗಳು ಕಿವಿಗೆ ಸೋಕಲು ಬ್ರಾಹ್ಮಣನ ಮೈ ರೋಮಾಂಚವಾಯಿತು. "ಅಕ್ಕಟಾ ಇಂದು ನಾಳೆಗಳೆಂಬ ಆಶೋತ್ತರಗಳನ್ನಿಟ್ಟು ಆರುತಿಂಗಳವರೆಗೆ ತಿರುಗಿಸಿ ಕೊನೆಗೂ, ಮಗನ ಮುಂಜಿಗೆಂದರೆ ಇಂತಹ ಅನುಗ್ರಹವೇ! ಛೀ ಯಾಚನೆಯು ಬಹು ಭಂಡವೃತ್ತಿಯು" ಎಂದುಕೊಂಡು "ನಾಯಕರೇ ಧನ್ಯನಾದೆ. ಸಾಕು. ಅದೂ ತಮ್ಮ ಸಂಚಿಯಲ್ಲೇ ಇರಲಿ! ದೇವರು ದೊಡ್ಡ

ಪನಿಸ್ಸಾನೆ ನನ್ನ ಕೆಲಸವು ಹೇಗೂ ಆಗುತ್ತೆ. ಸ್ವಸ್ತ್ಯಸ್ತು. ದೇವರು ತಮಗೆ ಅನುಗ್ರಹಮಾಡಲಿ!'' ಎಂದು ನುಡಿದು ಮೇಲಕ್ಕೆದ್ದು ಹೊರಟನು. ದಾನ ಧರ್ಮ-ದಯಾದಾಕ್ಷಿಣ್ಯಾದಿಗಳ ಸುಳಿವನ್ನೇ ಕಾಣದೆ ಕೇವಲ ಲೋಭಗುಣದ ಅವತಾರಮೂರ್ತಿಯೋ ಎಂಬಂತಿದ್ದ ನಾಯಕರಿಗೆ ಹಾಗೆ ಎದ್ದು ಹೊರಟ ಬ್ರಾಹ್ಮಣನ ಚರ್ಯೆಯೂ ಒಂದು ಬಗೆಯಿಂದ ಸಮಾಧಾನವನ್ನೇ ಉಂಟುಮಾಡಿತು. ಹತಾಶನಾಗಿ ಮೇಲಕ್ಕೆದ್ದ ಆ ಬ್ರಾಹ್ಮಣನನ್ನು ಮಾತಿನಿಂದಲಾದರೂ ಉಪಚರಿಸಬೇಕೆಂದು ಅವರಿಗೆ ತೋರಲಿಲ್ಲ. ಎಂತೂ ಬ್ರಾಹ್ಮಣನು ಎದ್ದು ಹೊರಕ್ಕೆ ನಡೆದನು. ನಾಯಕರು ಆ ನಾಣ್ಯಗಳನ್ನು ಬೇಗ ಬೇಗನೆ ಚೀಲಕ್ಕೆ ತುಂಬಿ ಪುನಃ ಅದನ್ನು ಕೊಠಡಿಯೊಳಕ್ಕೆ ಸಾಗಿಸಿ ಪೆಟ್ಟಿಗೆಯುಲ್ಲಿಟ್ಟು ಬೀಗಮುದ್ರೆಗಳಿಂದ ಭದ್ರಪಡಿಸಿ ಮನೆಯಿಂದ ಹೊರಟು ಚಿನಿವಾರಕಟ್ಟೆಯನ್ನು ಕುರಿತು ನಡೆದರು.



**ಅಧ್ಯಾಯ ೪ "ಮೂಗುತಿಯ ದಾನ"**

ಅತ್ತಣಿಂತ್ರೀನಿಧಿಯು | ಮತ್ತೆಮನೆಯೊಳಗಿಮ್ಮ | ಪತ್ನಿಯನುಯಾಚಿಸಿದನು || ಉತ್ತಮ ಪತಿವ್ರತೆಯೆ | ಪುತ್ರನುಪನಯನವೆಂ | ದಿತ್ತಬಂದಿಹೆನೆಂದನು || 'ಚಿತ್ತದೊಲ್ಲಭನ ಸಮ್ಮತಿ ಇಲ್ಲದಲೆ ನಾನು | ಇತ್ತುಕಳುಹೆನು ಏನನು || ಅತ್ತಗಮಿಸಿರಿ'ಎನಲು | 'ಹತ್ತತಾಯ್‌ನಿನಗಿತ್ತ | ನತ್ತನ್ನುಕೊಡು' ಎಂದನು | ತಾನು || ೫ ||

ನಾಗಾರಿವಾಹನನನುಡಿಯು ಮನಸಿಗೆಹಿಡಿಯೆ | ಮೂಗುತಿಯುತ್ತೆಗೆದಿತ್ತಳು || ಭಾಗ್ಯವಂತಳೆ ನಿನಗೆ ಲೇಸಾಗಲೆಂದ್ಹರಸಿ | ಸಾಗಿಬಂದನು ಇತ್ತಲೂ || ಹೋಗುಹೋಗೆಲೊಮತ್ತೆನೀನೇಕೆಬಂದೆನಲು | ಮೂಗುತಿಯ ಕ್ರಯಕೆಕೊಡಲೂ || ಈಗ ಬಂದಿಹೆನೆಂದು ನಿಮಗದನು ತೋರಲೂ | 'ಹ್ಯಾಂಗೆಬಂದಿತು' ಎನ್ನಲೂ | ನಗಲೂ || ೬ ||

ಮನಕೆ ಸಂಶಯಮೂಡಿ | ಚಿಂತಿಸುತ್ತಿರ ನೋಡಿ | ವನಜನಾಭನು ಪೇಳ್ದನು || ನನಗೀಗ ಧನಬೇಡ | ನಿನ್ನಲ್ಲಿಯೇ ಇರಲಿ | ಅನುವರಿತು ಬಹೆನೆಂದನು || ಸನುಮತಿಸಿ ವಿಪ್ರನನು ಸಂತೈಸಿ ಪೊರಮಡಿಸಿ | ''ನಿನಗೆ ನಾಮವ ನಿಡುವೆನು'' || ಎನುತ ಹರುಷದಿ ನಗುತ | ಮನೆಗೆ ಬರುತಲೆ ಕಂಡ | ವನಿತೆಯಾ ಬರಿಮೂಗನೂ | ತೆರನೂ || ೭ ||

ಬ್ರಾಹ್ಮಣನು ಇಂತು ನಾಯಕರಲ್ಲ ಲೋಭಗುಣದ ಪರಮಾವಧಿ ಸ್ಥಿತಿಯನ್ನು ಕಂಡು —''ಆಯಿತು. ಈತನನ್ನಂತೂ ಸಂಪೂರ್ಣವಾಗಿ ಪರೀಕ್ಷಿಸಿದ್ದಾಯಿತು ಈ ಪರಮಾವಧಿ ಸ್ಥಿತಿಯೇ ಜೀವಿತಪಥವು ಪರಿವರ್ತಿತವಾಗಲು ತಕ್ಕ ವೇಳೆಯು. ಇನ್ನು ಈತನ ಪತ್ನಿಯ ಮೂಲಕ ಈತನಿಗೆ ಬುದ್ಧಿ ಬರುವಂತೆ ಮಾಡಬೇಕು'' ಎಂದುಕೊಂಡು ನಾಯಕರು ಕಣ್ಮರೆಯಾಗುತ್ತಲೇ ಪುನಃ ಅವರ ಮನೆಯ ಕಡೆಗೆ ತಿರುಗಿ ನಡದು ಹಿತ್ತಿಲ ಬಾಗಿಲಿನಿಂದ ಒಳಹೊಕ್ಕನು

ಆರು ತಿಂಗಳಿನಿಂದ ಒಂದು ದಿನ ಬಿಡದಂತೆ ತಿರುಗಿಸಿ ಕೊನೆಗೂ ಆ ಬ್ರಾಹ್ಮಣನನ್ನು ಹತಾಶನನ್ನಾಗಿ ಕಳುಹಿಸಿದ ತನ್ನ ಪತಿಯ ಚರ್ಯೆಯು ಆಕೆಗೆ ಅತ್ಯಂತ ಪರಿತಾಪವನ್ನುಂಟುಮಾಡಿತು.—''ಛೀ, ನಮಗೆ ಇಷ್ಟು ಐಶ್ವರ್ಯವಿದ್ದೂ ಪ್ರಯೋಜನವೇನು? ನಾಯಿಯ ಮೊಲೆಯಲ್ಲಿ ಕೊಳಗ ಹಾಲಿದ್ದಂತೆ ನಮ್ಮ ಐಶ್ವರ್ಯದಿಂದ ಯಾರಿಗೆ ಏನು ಪ್ರಯೋಜನವಿದೆ? ಅಕ್ಕಟಾ ಯಜಮಾನರಿಗೆ ಇಷ್ಟುಮಟ್ಟಿನ ನಿಷ್ಠುರತೆಯೂ ದಯಾಶೂನ್ಯತೆಯೂ ಲೋಭಗುಣವೂ ಏಕೆ ಪ್ರಾಪ್ತವಾಗಿದ್ದಾವು? ಇದಾವ ದುಷ್ಕರ್ಮದ ಫಲವು! ದೇವಾ ನಮ್ಮ ಮೇಲೆ ಏಕೆ ಇಷ್ಟು ನಿಷ್ಕರುಣಿಯಾಗಿರುವೆ?'' ಎಂದು ಹಲುಬುತ್ತಿದ್ದಳು. ಪುನಃಪುನಃ ಮನಸ್ಸಿಗೆ ಅದೇ ಯೋಚನೆಯೇ ಬರುತ್ತಿದ್ದಿತು. ಆದರೂ ಆ ಪತಿವ್ರತೆಗೆ ಪತಿಯ ವಿಷಯದಲ್ಲಿ ಯಾವ ಬಗೆಯ ತುಚ್ಛಭಾವವೂ ಉಂಟಾಗಲಿಲ್ಲ ಅದೆಲ್ಲವೂ ಜನ್ಮಾಂತರದ ದುಷ್ಕರ್ಮಫಲವೇ ಎಂದು ಮೇಲಮೇಲೆ ತೋರುತ್ತಿದ್ದಿತು ಹೀಗೆಯೇ ಯೋಚಿಸಿಕೊಳ್ಳುತ್ತಾ ಆಕೆಯೂ ಮನೆಯ ಕೆಲಸಕಾರ್ಯಗಳಲ್ಲಿ ತೊಡಗಿದ್ದಳು.

ಮೇಲೆ ಹೇಳಿದಂತೆ ಮನೆಯೊಳಕ್ಕೆ ಹೊಕ್ಕು ಬ್ರಾಹ್ಮಣನು ಒಳಮನೆಯಲ್ಲಿದ್ದ ಭೋಜನಶಾಲೆಯ ಹತ್ತಿರ ನಾಯಕರ ಪತ್ನಿಯನ್ನು ಕಂಡು— ತಾಯೇ ನಿನಗೆ ಶುಭವಾಗಲಿ! ನನ್ನ ಮಗನ ಉಪನಯನವಾಗಬೇಕು! ವಯಸ್ಸು ಮೀರುತ್ತಾ ಇದೆ ಯುಕ್ತವಯಸ್ಸಿನಲ್ಲಿ ನನ್ನಾ ಪುತ್ರನನ್ನು ಉಪನೀತನನ್ನಾಗಿ ಮಾಡಿ ಕರ್ಮಾಧಿಕಾರಕ್ಕೆ ಒಳಪಡಿಸತಕ್ಕುದು ನನ್ನ ಕರ್ತವ್ಯವಾಗಿದೆ. ಆದರೆ ಏನು ಮಾಡಲಿ? ದಾರಿದ್ರ್ಯ! ಯಾಚನೆಯಿಂದಲ್ಲದೆ ಈ ಕಾರ್ಯ ಮಾಡಲು ನನಗೆ ಬೇರೆ ಮಾರ್ಗವಿಲ್ಲ! ಅದಕ್ಕಾಗಿ ಈಗ ಆರು ತಿಂಗಳಿನಿಂದಲೂ ಯಜ

ಮಾನರನ್ನು ತಿರಸ್ಕರಿಸಿದೆನು. ಆದರೆ ಅದರ ಫಲಿತಾಂಶವು ವ್ಯಸನಕರವಾಯಿತು ತಾಯೇ ಭಾಗ್ಯವಂತಳಾದ ನೀನಾದರೂ ನನಗೆ ಸಹಾಯ ಮಾಡಿ ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕು! ಇಷ್ಟು ಮಾತ್ರ ಮಾಡು ತಾಯೇ! ನಿನಗೆ ಮಂಗಳವಾಗಲಿ" ಎಂದು ನುಡಿದನು.

ವಿಪ್ರವರ್ಯನ ಮಾತನ್ನು ಕೇಳಿ ಸಾಧುಹೃದಯದ ಆಕೆಯ ಮನಸ್ಸು ಕರಗಿ ನೀರಾಯಿತು ಆದರೆ ಅಸ್ವತಂತ್ರಳಾದ ಆಕೆಯು ಪತಿಯ ಆಜ್ಞೆಯಿಲ್ಲದೆ ಏನು ಮಾಡಲು ತಾನೆ ಸಾಧ್ಯ! ಆಗಲಾಕೆಯು ಆ ಬ್ರಾಹ್ಮಣನನ್ನು ಕುರಿತು "ಬ್ರಾಹ್ಮಣೋತ್ತಮರೇ ನಿಮ್ಮ ವಿಚಾರವು ಅತ್ಯಂತ ಶೋಚನೀಯವಾದುದು ಆದರೆ ಅಸ್ವತಂತ್ರಳಾದ ನಾನು ಏನು ತಾನೆ ಮಾಡಲಿ! ಯಜಮಾನರ ಅಪ್ಪಣೆಯು ವಿನಹ ನಾನು ಏನೂ ಕೊಡಲು ಸಾಧ್ಯವಿಲ್ಲ! ಎಂತೂ ನಮಗೆ ಲಭ್ಯವಿಲ್ಲ. ಮುಂದೆಲ್ಲಾದರೂ ಯಾಚಿಸಿ ನಿಮ್ಮ ಕೆಲಸವನ್ನು ಸಾಗಿಸಿಕೊಳ್ಳಿರಿ" ಎಂದಳು ಆದರೆ ಆ ಬ್ರಾಹ್ಮಣನೇನು ಸಾಮಾನ್ಯನೇ! ಆ ಪ್ರತ್ಯುತ್ತರಕ್ಕೂ ಸಿದ್ಧನಾಗಿಯೇ ಇದ್ದನು "ತಾಯೇ ಅದಕ್ಕೇಕಿಷ್ಟು ಯೋಚನೆ? ನಿಜ ನಿನ್ನ ಪತಿಯ ಮನೆಯ ಆಸ್ತಿಯಲ್ಲಿ ಆತನ ಅಪ್ಪಣೆಯಿಲ್ಲದೆ ಏನನ್ನು ಕೊಡಲೂ ಸಾಧ್ಯವಿಲ್ಲ ಅದು ಸಹಜವಾದುದು. ಆದರೆ ತಾಯೀ, ನಿನ್ನ ತಾಯಿಯ ಮನೆಯಲ್ಲಿ ನಿನಗೆ ಕೊಟ್ಟ ಮೂಗುತಿ ಇದೆಯಲ್ಲವಮ್ಮ! ಅದು ನಿನ್ನ ಸ್ವಂತವಾದುದಲ್ಲವೆ? ಸ್ತ್ರೀಧನವಾದ ಅದರ ಮೇಲೆ ನಿನ್ನ ಯಜಮಾನರ ಅಪ್ಪಣೆಯಿಲ್ಲವಷ್ಟೆ! ಅಮ್ಮಯ್ಯಾ ಅದನ್ನು ದಾನ ಮಾಡಿ ಪುಣ್ಯವನ್ನು ಕಟ್ಟಿಕೋ! ನಿನಗೆ ಶ್ರೇಯಸ್ಸುಂಟಾಗುವುದು" ಎಂದನು

ಮರ್ಮಜ್ಞನಾದ ಬ್ರಾಹ್ಮಣನ ಆ ಮಾತು ಆಕೆಯ ಮನಸ್ಸಿಗೆ ನಿಜವೆಂದು ಹೊಳೆಯಿತು ತನ್ನ ಪತಿಯು ಬ್ರಾಹ್ಮಣನನ್ನು ಹತಾಶನನ್ನಾಗಿ ಕಳುಹಿಸಿದಾಗಿನಿಂದಲೂ ಅದೇ ವಿಷಯವನ್ನೇ ಕುರಿತು ಮನಸ್ಸಿನಲ್ಲಿ ಯೋಚಿಸುತ್ತಿದ್ದ ಆಕೆಯು "ನಿಜ ಅರ್ಹರಾದ ವಿಪ್ರೋತ್ತಮರಿಗೆ ಈ ಸತ್ಕಾರ್ಯಕ್ಕಾಗಿ ಉಪಯೋಗವಾಗದಿದ್ದ ಮೇಲೆ ಯಾವ ಸಂಪತ್ತಿದ್ದು ಏನು ಫಲ!" ಎಂದುಕೊಂಡು ಒಡನೆ ಅದನ್ನು ಮೂಗಿನಿಂದ ತೆಗೆದು ಕೊಳದು ದೇವರ ಮನೆಯಿಂದ ಒಂದು ತುಲಸಿಯ ದಳವನ್ನು ತಂದು ಆ ಮೂಗುತಿಯನ್ನೂ ತುಲಸಿಯ ದಳವನ್ನೂ ಬ್ರಾಹ್ಮಣನ ಕೈಯಲ್ಲಿಟ್ಟು "ಕೃಷ್ಣಾರ್ಪಣ ವಿಪ್ರವರ್ಯಾ ನಿಮ್ಮ ಕಾರ್ಯವು ಇದರಿಂದ ನೆರವೇರಲಿ ಇನ್ನು ಹೊರಡಿರಿ" ಎಂದು ನುಡಿದಳು.

ಬ್ರಾಹ್ಮಣನು ಆಕೆಯ ದಾತೃತ್ವಕ್ಕಾಗಿ ಪರಮಾನಂದಪಟ್ಟು "ಸೌಭಾಗ್ಯವತೀ ನಿನಗೆ ಮಂಗಳವಾಗಲಿ" ಎಂದು ಹರಸಿ ಒಡನೆ ಅಲ್ಲಿಂದ ಹೊರಟನು ಹೊರಟವನು ಬೇರಲ್ಲೂ ಹೋಗದೆ ನೆಟ್ಟಗೆ ಪುನಃ ನಾಯಕರ ಅಂಗಡಿಯ ಬಳಿಗೇ ಬಂದನು ದೂರದಿಂದಲೇ ಆ ಬ್ರಾಹ್ಮಣನು ಮತ್ತೆ ತಮ್ಮಲ್ಲಿಗೇ ಬರುತ್ತಿದ್ದುದನ್ನು ಕಂಡು ನಾಯಕರು 'ನೀನು-ಏಕೆ? ಮತ್ತೇಕೆ ಈ ಕಡೆ ಬಂದುದು? ಬೇಡ ಹೊರಡಿ, ಹೊರಡಿ ನನ್ನ ದೇಶಾವರವು ನಿಮ್ಮ ಮನಸ್ಸಿಗೆ ಒಪ್ಪಲಿಲ್ಲವನ್ನೆ!" ಎಂದು ಕೂಗಾಡಲಾರಂಭಿಸಿದರು. ಅದನ್ನು ಕೇಳಿ ಆ ಬ್ರಾಹ್ಮಣನು ಗಾಬರಿಯಾಗದೆ ಧಿಟ್ಟತನದಿಂದ ನೇರವಾ ಮುಂದಕ್ಕೆ ಬಂದು ಮೆಟ್ಟಿಲುಗಳನ್ನು ಹತ್ತಿ ಅಂಗಡಿಯ ಒಳಕ್ಕೆ ಪ್ರವೇಶಿಸಿ ನಾಯಕರದುರಿಗೆ ಜಮಖಾನೆಯ ಮೇಲೆ ಕುಳಿತನು ಇದುವರೆಗೂ ಅತಿಶಯ ನಮ್ರತೆಯಿಂದ ನಡೆಯುತ್ತಿದ್ದ ಬ್ರಾಹ್ಮಣನು ಈ ಎಸ ಹೀಗೆ ಧಿಟ್ಟತನದಿಂದ ಬಂದು ಎದುರಿಗ ಕುಳಿತುದನ್ನು ಕಂಡು ಅವರಿಗೇ ಆಶ್ಚರ್ಯವಾಯಿತು ಅಷ್ಟುಮಾತ್ರವಲ್ಲ, ಬ್ರಾಹ್ಮಣನು ತನ್ನ ಎಡದ ಪಿಡಿಕೆಯಲ್ಲಿಟ್ಟುಕೊಂಡಿದ್ದ ಮೂಗುತಿಯನ್ನು ಹೊರಕ್ಕೆ ತೆಗೆದು ನಾಯಕರ ಕೈಯಲ್ಲಿ ಕೊಟ್ಟು ಇದರ ಕ್ರಯವನ್ನು ಕೊಡಿ ಇದನ್ನು ಮಾರುವುದಕ್ಕೆ ತಂದಿದ್ದೇನೆ" ಎಂದನು.

ಬ್ರಾಹ್ಮಣನ ಈ ಮಾತನ್ನು ಕೇಳಿ ನಾಯಕರಿಗೆ ಒಹಳ ಆಶ್ಚರ್ಯವಾಯಿತು. "ಇದೇನಿದು? ಇಷ್ಟು ದಿನಗಳವರೆಗೂ ದೇಶಾವರಕ್ಕಾಗಿ ನನ್ನಲ್ಲಿಗೆ ತಪ್ಪದೆ ನಡೆಯುತ್ತಿದ್ದ ಸುದಾಮ ದರಿದ್ರನಾದ ಈ ಬ್ರಾಹ್ಮಣನಿಗೆ ಇಷ್ಟು ಬೆಲೆ ಬಾಳುವ ಈ ನತ್ತು ದೊರೆತ ಬಗೆಯಾವುದು?" ಎಂದುಕೊಂಡು ಬ್ರಾಹ್ಮಣಾ ಈ ಬೆಲೆಯುಳ್ಳ ಮೂಗುತಿಯು ನಿಮಗೆಲ್ಲಿ ದೊರೆಯಿತು? ನಿಜವನ್ನು ಹೇಳಿರಿ" ಎನ್ನಲು ಆ ಕಪಟ ವಿಪ್ರನು ನಾಯಕರ ಮಾತಿಗೆ ಪ್ರತ್ಯುತ್ತರ ಕೊಡದೆ ಒಂದು ಸಾರಿ ಮುಗುಳ್ನಗುವನ್ನು ನಕ್ಕನು. ಬಹು ಅರ್ಥಗರ್ಭಿತವಾದ ಆ ನಗುವಿನ ಅರ್ಥವೇನೆಂಬುದನ್ನು ವಾಚಕರು ಗ್ರಹಿಸಬಲ್ಲರಲ್ಲವೆ?

ಎಂತೂ ಬ್ರಾಹ್ಮಣನ ಅಸಮಂಜಸವಾದ ಅವ್ಯಕ್ತರೀತಿಯ ಈ ಪ್ರತ್ಯುತ್ತರವು ನಾಯಕರ ಮನಸ್ಸಿನಲ್ಲಿದ್ದ ಸಂಶಯವನ್ನು ಮತ್ತೂ ಹೆಚ್ಚು ಮಾಡಿತು. ನಾಯಕರಿಗೆ ಮೂಗುತಿಯ ಆಕೃತಿ, ಅದರಲ್ಲಿ ಅಡಗಿದ್ದ ಕೆಂಪು-ರತ್ನಗಳ ಕಟ್ಟಣ, ಸುತ್ತಲೂ ಸುತ್ತಿದ್ದ ಆಣಿಮುತ್ತುಗಳು ಇವುಗಳನ್ನು ನೋಡಿನೋಡಿ

ದಂತೆ ಅದು ಹೊರಗಿನದಲ್ಲ ತಮ್ಮ ಹೆಂಡತಿಯದೇ! ಎಂಬ ನಿರ್ಧಾರ ಅಭಿಪ್ರಾಯವು ತೋರಿತಾಗಿತು. ಹೀಗೆ ಸಂಶಯಚಿತ್ತವೃತ್ತಿಯಿಂದ ಅರಗಳಿಗೆಯ ಹೊತ್ತನ್ನು ಕಳೆದು ಅನೇಲೆ ಮುಖವೆತ್ತಿ ಆ ಬ್ರಾಹ್ಮಣನ ಮುಖವನ್ನು ನೋಡಿ — 'ಸರಿ ಇದಕ್ಕೆ ಬೆಲೆಯೇನು?'' ಎಂದು ಪ್ರಶ್ನಿಸಿದರು. ಆಗಲಾ ವಿಪ್ರನು ನಾಯಕರ ಆ ಮಾತನ್ನು ಕೇಳಿ ಹಸನ್ಮುಖದಿಂದ—''ನಾಯಕರೇ ಅದರ ಬೆಲೆಯು ಎಷ್ಟಾದರೂ ಇರಬಹುದು! ನನಗೆ ಅದರ ಬೆಲೆಯಾಗಿ ನಾನೂರು ವರಹಗಳು ಬೇಕು. ಇದೀಗ ನಾನಿರುವುದು ಪರಸ್ಥಳ ಇನ್ನೂ ಅನೇಕ ಸ್ಥಳಗಳಲ್ಲಿ ಯಾಚನೆಗೆ ಹೋಗಬೇಕಾಗಿದೆ. ಅಷ್ಟು ಹಣವನ್ನು ಜೊತೆಗಿಟ್ಟುಕೊಂಡು ಭದ್ರಪಡಿಸುವುದು ಸಾಧ್ಯವಲ್ಲ! ಆದುದರಿಂದ ಆ ಹಣವು ತಮ್ಮಲ್ಲೇ ಇರಲಿ! ಘನವಂತರೂ ಲಕ್ಷ್ಮೀಪುತ್ರರೂ ಆದ ನಿಮ್ಮ ನಂಬಿಕೆಯು ನನಗುಂಟು. ಆ ಹಣವು ನಿಮ್ಮಲ್ಲೇ ಇರಲಿ ನಾನು ಮತ್ತೊಂದು ಸಾರಿ ಬಂದು ಆ ಹಣವನ್ನು ತೆಗೆದುಕೊಂಡು ಹೋಗುವೆನು' ಎಂದು ನುಡಿದು ಮೂಗುತಿಯನ್ನು ನಾಯಕರ ವಶದಲ್ಲೇ ಬಿಟ್ಟು ಅಲ್ಲಿಂದ ಎದ್ದು ಹೊರಟು ನಡೆದನು ಮುಂದೆ ಆತನು ಎಲ್ಲಿಗೆ ಹೋದನೆಂಬುದು ಯಾರಿಗೂ ತಿಳಿಯಲಿಲ್ಲ.

ಬ್ರಾಹ್ಮಣನು ತಮ್ಮ ಅಂಗಡಿಯನ್ನು ಬಿಟ್ಟು ಹೊರಟೊಡನೆಯೇ ನಾಯಕರು ಸ್ವಲ್ಪವೂ ಸಾವಕಾಶಮಾಡದ ಅದನ್ನು ಮತ್ತೊಂದುಸಾರಿ ಚೆನ್ನಾಗಿ ಪಿಟ್ಟಿಸಿ ನೋಡಿ ಒಂದು ಭರಣಿಯಲ್ಲಿಟ್ಟು ಆ ಭರಣಿಯನ್ನು ಪಟ್ಟಿಗೆಯಲ್ಲಿಟ್ಟು ಬೀಗಮುದ್ರೆಗಳಿಂದ ಭದ್ರಪಡಿಸಿ, ಅಂಗಡಿಯನ್ನು ಮುಚ್ಚಿಕೊಂಡು ಮನೆಯ ಕಡೆಗೆ ಹೊರಟರು. ಇತ್ತ ಲಕ್ಷ್ಮೀಬಾಯಿಯು ಎಂದಿನಂತಲ್ಲದೆ ಈ ದಿನ ಆವೇಳೆಯಲ್ಲಿ ನಾಯಕರು ಮನೆಯ ಕಡೆಗೆ ಬರುತ್ತಿದ್ದುದನ್ನು ದೂರದಿಂದಲೇ ನೋಡಿ ಮನಸ್ಸಿನಲ್ಲ ಭಯಸಂಚಾರವಾಗಲು ''ಅಕ್ಕಟಾ ಇನ್ನೇನು ಗತಿ, ಮೂಗುತಿಯನ್ನು ದಾನವಾಗಿ ಪಡೆದ ಬ್ರಾಹ್ಮಣನು ಅದನ್ನು ಮಾರಿಗೆಗಾಗಿ ಯಜಮಾನರಲ್ಲಿಗೇ ತೆಗೆದುಕೊಂಡು ಹೋದನೋ, ಏನೋ, ಏನುಮಾಡಲಿ? ಇನ್ನೇನು ಪ್ರಮಾದ ಸಂಭವಿಸಲಿರುವುದೋ!'' ಎಂದುಕೊಂಡು ಚಿಂತಿಸುತ್ತಿರುವ ವೇಳೆಗೆ ನಾಯಕರು ಬಾಗಿಲನ ಹತ್ತಿರಕ್ಕೆ ಬಂದು ತಮ್ಮ ಪತ್ನಿಯು ಮೂಗುತಿಯಿಲ್ಲದೆ ಬರಿಮೂಗಿನಿಂದಲಿದ್ದುದನ್ನು ಕಂಡರು ಆಗ ಅವರಿಗೆ ಆ ಬ್ರಾಹ್ಮಣನು ಮುಗ್ಧಸ್ವಭಾವದ ತಮ್ಮ ಪತ್ನಿಗೆ ಇಲ್ಲದುಸಲ್ಲದುದನ್ನೆಲ್ಲಾ

ಬೋಧಿಸಿ ಮೂಗುತಿಯನ್ನು ದಾನವಾಗಿ ಪಡೆದಿರಬಹುದು. ಎಂತೂ ತಮ್ಮ ಹೆಂಡತಿಯ ಮೂಗಿನಲ್ಲಿದ್ದ ಮೂಗುತಿಯು ದಾನವಾಗಿ ಹೋಗಿದೆ ಎಂಬ ಒಂದು ಸಂಶಯಚ್ಛಾಯೆಯು ಮನಸ್ಸಿಗೆ ಬೋಧೆಯಾಯಿತು



**ಅಧ್ಯಾಯ ೫** **“ಪುರಂದರದಾಸರು”**

'ಮುತ್ತಿನಾ ಮೂಗುತಿಯು | ಎತ್ತ ಹೋಯಿತು' ಎನಲು | ಮುತ್ತೈದೆ ಮಡದಿ ನೊಂದೂ 'ಮತ್ತೆ ಮರೆಯಿತು' ಎಂದು ತತ್ತರಿಸುತಿರ ಕಂಡು 'ಇತ್ತ ತಾರೆನಲು' ಎಂದೂ || ಎತ್ತ ಪೋದನೊ ವಿಪ್ರ | ಮತ್ತೀನು ಮಾಡುವರೊ ಕತ್ತಲೆಯು ಮುತ್ತಿ ಬಂದೂ || ಭಕ್ತವತ್ಸಲನಿಗೆ | ತತ್ತರೀತನು ವಸ್ತು | ಕುತ್ತು ಪಾರಾಹೋದುದೊ ಅಂದಾಗ || ೮ ||

'ತರುವೆನೀಗಲೆ' ಎಂದು | ತರಳೆ ವಿಷವನು ಅರೆದು | ಕರದಿ ಬಟ್ಟಲನು ಹಿಡಿದೂ || ಮರಣದಾಸೆಯು ತೋರದು | ಸಿರಿವರನ ಪದನೆನೆದು ಕುಡಿಯುವ ಸಿತ್ರ ರೂಳುತಿಳಿದೂ || ಕರುಣದಿಂ ಮೂಗುತಿಯು | ಗರಳದಲಿ ಕೆಡಹಲಾ | ತರುಣಿ ಮಣಿಪರುಷದಳಿದೂ || ಪರಮ ಸಂಭ್ರಮದಿಂದ ಕೊಡಲದನು ಶೀನ್ಯೊಂದು ಭರದಿಂದ ಅಂಗಡಿಗೆ ಬಂದೂ | ಎಂದೂ || ೯ ||

ಬೀಗಮುದ್ರೆಯ ತೆಗೆದು ನೋಡೆ | ಭೂಸುರನಿತ್ತ | ಮೂಗುತಿಯು ಕಾಣದಿರಲೂ || ಹ್ಯಾಗೆ ಹೋಯಿತು ಎಂದು ಮನದೊಳಚ್ಚರಿಪಡುತ | ಬೇಗನೆ ಮನೆಗೆ ಬರಲೂ || ಕೂಗಿ ಪತ್ನಿಯ ಕರದು | ಮೂಗುತಿಯು ಬಂದ ಬಗೆ | ಹ್ಯಾಂಗೆಂದು ತಿಳಿಸು ಎನಲೂ | ನೀಗುವೆನು ತನುವೆಂದು ಬೆದರಿಸಲು ಸಾಧ್ವಿಯೂ | ಬಾಗಿ ವಂದಿಸಿ ನುಡಿದಳೂ ಪುರುಳೂ || ೧೦ ||

ವೃದ್ಧ ಬ್ರಾಹ್ಮಣನಾಗಿ | ಪೆದ್ದೈವನೇ ಬಂದು ಪೊಡ್ಡಿ ಯಾಚಿಸಲು ಜರದೆ || ಲುಬ್ಧನಾಗತಿಶಯದಿ | ಬದ್ಧನಾದನು ದ್ರವ್ಯ | ವೃದ್ಧಿ ಗೋಸುಗವಿರದೇ || ಇದ್ದುದಕೆ ಫಲವೇನು ? | ಸದ್ಧರ್ಮದಲಿ ಕೊಡದೆ | ಉದ್ಧಾರವಿಲ್ಲೆಂದು ತಿಳಿದೆ || ಶುದ್ಧಭಾವದಿ ಹರಿಯ ಪದ್ಮಪಾದವ ನನೆದು | ಹೆದ್ದಾರಿ ಹಿಡಿದು ನಡೆದೇ ದೃಢದೇ || ೧೧ ||

ಶಿಷ್ಟಬ್ರಾಹ್ಮಣರು ನೆಂಟರಿಷ್ಟಗೆ ಮಿತ್ರರಿಗೆ ವಿ | ಶಿಷ್ಟವನು ದಾನ ಗೈದೂ || ನಿಷ್ಠೆಯಿಂ ಮಡದಿಯನು ಮಕ್ಕಳನ್ನೊಳಗೊಂಡು | ವಿಟ್ಠಲನ ಪುರಕೆ ನಡೆದೂ || ಕಷ್ಟವಿಷ್ಟುರ ಸಹಿಸಿ | ಕೃಷ್ಣನಂಘ್ರಿಯ ಭಜಿಸಿ | ಇಷ್ಟಾರ್ಥ ಸಿದ್ಧಿಗೈದೂ || ನೆಟ್ಟನೇ ಹಂಸ ಪಟ್ಟಣದಿ ವ್ಯಾಸಮುನಿ ಶ್ರೇಷ್ಠರಿಂದುಪದೇಶ ಪಡದೂ || ನಲದೂ || ೧೨ ||

ಕೃಷ್ಣಪ್ಪನಾಯಕರು ಮನೆಯೊಳಕ್ಕೆ ನಡೆದು ಬಂದು ಹಜಾರದಲ್ಲಿ ಕುಳಿತರು. ಮತ್ತು ಪತ್ನಿಯನ್ನು ಕೂಗಿ ಕರಯಲು ಆ ಸಾಧ್ವೀಮಣಿಯು ಅಂಜುತ್ತಂಜುತ್ತಾ ನಡದು ಬಂದು ಒಳಬಾಗಿಲಲ್ಲಿ ನಿಂತಳು. ನಾಯಕರು ಮತ್ತೊಂದುಸಾರಿ ಆಕಯ ಮುಖವನ್ನು ನೋಡಿದರು. ಮೂಗುತಿಯಿಲ್ಲದ ಬರಿಯ ಮೂಗು! ಒಡನೆ ನಾಯಕರು—"ಎಲ್ಲಿ ನೀನು ಈ ದಿನ ಬೆಳಿಗ್ಗೆ ಇಟ್ಟುಕೊಂಡಿದ್ದ ನಿನ್ನ ಮೂಗುತಿಯೆಲ್ಲಿ?" ಎಂದು ಪ್ರಶ್ನಿಸಿದರು.

ತಾನು ಯಾವ ಪ್ರಶ್ನೆಯುಂಟಾದೀತೆಂದು ಭಯಪಟ್ಟಿದ್ದಳೋ ಗೊತ್ತಾಗಿ ಆ ಮೂಗುತಿಯ ವಿಷಯವೇ ಬಂದುದು, ಆಕಯನ್ನು ನಡುಗಿಸಿಬಿಟ್ಟಿತು. ಮನಸ್ಸಿನಲ್ಲಿ ಅತಿಶಯ ಭೀತಿ ತೋರಿತು. ಎದೆಯು ಅಧಿಕ ವೇಗದಿಂದ ಬಡಿದುಕೊಳ್ಳಲಾರಂಭಿಸಿತು. ಬಾಯಲ್ಲಿನ ದ್ರವವಾರಿತು. ನೈವೆ ದಿಸಿತು. ಆಗ ಆಕೆಗೆ ಅದನ್ನು ತಂದುಕೊಡುವುದಂತಿರಲಿ! ಅದು ಏನಾಯಿತೆಂಬುದನ್ನು ಕುರಿತು ಪತಿಯ ಪ್ರಶ್ನೆಗೆ ಸಮಂಜಸರೀತಿಯಿಂದ ಪ್ರತ್ಯುತ್ತರ ಕೊಡುವ ಮಾರ್ಗವೇ ಗೋಚರಿಸದಾಯಿತು. ಆದರ ಉತ್ತರ ಕೊಡುವುದಕ್ಕ ಸಾವಕಾಶವಾದರ ಈಗಲೇ ಇರುವ ಸಂಶಯವು ಇನ್ನೂ ಬಲಪಡಬಹುದೆಂದು ತೋರಲು ಆಕೆಯು 'ಮೂಗುತಿಯು ಮುರಿದಿದ ತೆಗೆದಿಟ್ಟಿದ್ದೇನೆ' ಎಂದು ಪ್ರತ್ಯುತ್ತರವಿತ್ತಳು. ಆಕೆಯ ಬಾಯಿಂದ ಬರುವ ಉತ್ತರಕ್ಕಾಗಿಯೇ ಕಾದಿದ್ದ ನಾಯಕರು ಲೇಶಮಾತ್ರವೂ ಸಾವಕಾಶವಿಲ್ಲದೆ ಒಡನೆಯೇ "ಸರಿ, ಹಾಗಾದರ ಆ ಮುರಿದ ಮೂಗುತಿಯನ್ನೇ ತಂದು ಕೊಡು ಸರಿಮಾಡಿಸೋಣ" ಎಂದರು. ಲಕ್ಷ್ಮೀಬಾಯಿಗೆ ಮುಂದ ಉತ್ತರವಿಲ್ಲದಾಯಿತು. "ಮುರಿದಿದೆ ಒಳಗಿಟ್ಟಿದ್ದೇನೆ" ಎಂದು ನುಡಿದುದಾಯಿತು. ಈಗ ಆ ಮುರಿದ ಮೂಗುತಿಯನ್ನಾದರೂ ತಂದು ಕೊಡದಿದ್ದರ ಮುಂದೆ ಗತಿಯೇನು? ಎಂಬ ಯೋಚನೆಯು ಬಾಧಿಸಲಾರಂಭವಾಯಿತು. ಮುಂದೆ ಉಪಾಯವೇ ತೋರದೆ ಕಣ್ಣುಗಳಿಗೆ ಕತ್ತಲೆಯಾದಂತಾಯಿತು. ಅರ್ಧಗಳಿಗೆ ಏನೂ ತೋರದೆ ನಿಂತುಬಿಟ್ಟಳು.

ಹೆಂಡತಿಯು ಮುರಿದ ಮೂಗುತಿಯನ್ನು ತರುವುದಕ್ಕಾಗಿ ಹೋಗಿ ದ್ದ ಸಾವಕಾಶವು ನಾಯಕರ ಸಂಶಯವನ್ನು ಮೇಲೆ ಮೇಲೆ ದೃಢಗೊಳಿಸ ತೊಡಗಿತು. "ಸಹಸ್ರಾರು ವರಹಗಳ ಬೆಲೆಯ ಮೂಗುತಿಯನ್ನು ಒಬ್ಬ ಕ್ಷುದ್ರ ಬ್ರಾಹ್ಮಣ ಹುಳುವಿಗೆ ಕೊಟ್ಟುಬಿಡುವುದೆಂದರ ಅರ್ಥವೇನು?' ಎಂದುಕೊಂಡರು. ಸಾವಕಾಶವಾದಂತೆಲ್ಲಾ ಕೋಪವು ವೃದ್ಧಿಯಾಗತೊಡ ಗಿತು. ಕಣ್ಣುಗಳು ಕೆಂಪಾದುವು. ತುಟಿಗಳು ನಡುಗಲಾರಂಭವಾದುವು. ಹಲ್ಲುಗಳನ್ನು ಕಟಕಟನೆಂದು ಕಡಿಯುತ್ತಾ—"ಹೂ, ಎಲ್ಲಿ? ಬೇಗ ತಂದು ಕೊಡು. ಈ ದಿನ ಮೂಗುತಿಯನ್ನು ತಾರದಿದ್ದರೆ ನಿನ್ನ ಪ್ರಾಣಗಳನ್ನು ಅರದುಬಿಡುವೆನು! ಎಲುಬುಗಳು ಮುರಿದು ಚೂರುಚೂರಾದಾವು! ಜೋಕೆ ಬೇಗ ತಂದು ಕೊಡು" ಎಂದು ಗರ್ಜಿಸಿದರು.

ಲೋಭಗುಣದ ಅವತಾರಮೂರ್ತಿಯಂತಿದ್ದ ಪತಿಯು ಅಷ್ಟು ಹೆಚ್ಚು ಬೆಲೆಯ ಮೂಗುತಿಯನ್ನು ತಾನು ಕಳೆದುದಕ್ಕಾಗಿ ಬಹು ಕೋಪಾಕ್ರಾಂತ ರಾಗಿರುವರೆಂಬುದೂ ಅದನ್ನು ತಾರದಿದ್ದರ, ಆ ದಿನ ತನಗೆ ಘೋರ ಶಿಕ್ಷೆಯಾ ಗಬಹುದೆಂಬುದೂ ಆಕೆಯ ಯೋಚನೆಗೆ ಬಂದುವು. ಆದರೆ ತರುವುದು ಹೇಗೆ? ಎಲ್ಲಿಂದ? ಲಕ್ಷ್ಮೀಬಾಯಿಯು ಒಡನೆ ಪತಿಯ ಸಮ್ಮುಖವನ್ನು ಬಿಟ್ಟು ಒಳಕ್ಕೆ ನಡೆದಳು. ಆಗತಾನೆ ಮಡಿಯಿಂದ ತುಲಸಾದೇವಿಯ ಪೂಜೆ ಮಾಡಿ ಬಂದಿದ್ದ ಆ ಸಾಧ್ವೀಮಣಿಗೆ ಇತರ ಯಾವ ಮಾರ್ಗವನ್ನ ಅನುಸರಿ ಸುವುದೂ ಸಾಧುವೆಂದು ತೋರಲಿಲ್ಲ. ಅದನ್ನು ಆರ್ತನಾದ ಬ್ರಾಹ್ಮಣನಿಗೆ ಶ್ರೀಕೃಷ್ಣಾರ್ಪಣವಾಗಿ ಒಪ್ಪಿಸಿಕೊಟ್ಟುದರಿಂದ ಈಗಲಾದರೂ ತನ್ನಾ ದೇಹ ವನ್ನೂ ಆ ಸ್ವಾಮಿಗೆ ಒಪ್ಪಿಸಿಬಿಡುವುದೇ ಉತ್ತಮೋತ್ತಮವಾದ ಕಾರ್ಯ ವೆಂದು ತೋರಿತು. ಕ್ಷಣಮಾತ್ರವೂ ಸಾವಕಾಶಮಾಡುವಂತಿಲ್ಲ. ಒಳಗೆ ಬರುವಾಗ್ಗೇ ಏನು ಮಾಡಬೇಕೆಂದು ಯೋಚಿಸಿಕೊಂಡಿದ್ದಳು ಒಡನೆ ಒಂದು ಸಾಣೆಯ ಕಲ್ಲಿನ ಮೇಲೆ ತನ್ನ ಕೈಯಲ್ಲಿದ್ದ ವಜ್ರದ ಉಂಗುರವನ್ನು ತೇಯ್ದು ಆ ಗಂಧವನ್ನು ಬಟ್ಟಲಿನಲ್ಲಿ ತೆಗೆದುಕೊಂಡು—"ಶ್ರೀಕೃಷ್ಣಾ, ದ್ವಾರಕಾವಾಸಾ, ದಯಾನಿಧೇ! ನಾನು ಆ ಮೂಗುತಿಯನ್ನು ನಿನ್ನ ಪ್ರೀತ್ಯ ರ್ಥವಾಗಿ ದಾನವಾಗಿ ಕೊಟ್ಟೆ. ಈಗ ಇಂತಹ ಪ್ರಮಾದವು ಪ್ರಾಪ್ತವಾಯಿತು. ಈಗ ನನ್ನ ಈ ತನುವನ್ನೂ ನಿನ್ನ ಪಾದಾರವಿಂದಗಳಿಗೇ ಸಮರ್ಪಿಸಿಕೋ!'

ಎಂದು ನುಡಿದು ಆ ಬಟ್ಟಲನ್ನು ಬಾಯಿಗೆ ಎತ್ತಿದಳು. ಇನ್ನೇನು ಕುಡಿಯ ಬೇಕು. ಒಂದು ಕ್ಷಣವೂ ಸಾವಕಾಶವಿಲ್ಲ. ಅದನ್ನು ಪಾನಮಾಡಿದೊಡನೆಯೇ ಲಕ್ಷ್ಮೀಬಾಯಿಯು ಗತಾಯುವಾಗತಕ್ಕವಳು! ಆದರ ಭಕ್ತಪರಾಧೀನನಾದ ನಾರಾಯಣಮೂರ್ತಿಯು ನಿಷ್ಕರುಣಿಯೆ? ಹಿಂದೆ ಆರ್ತರಾದ ಧ್ರುವ, ಗಜ ರಾಜ, ಪ್ರಹ್ಲಾದ, ದ್ರೌಪದಿ ಮುಂತಾದ ಭಕ್ತರನ್ನು ಅವರ ಆಪತ್ಕಾಲದಲ್ಲಿ ಬಂದು ಕಾಯ್ದುದಿಲ್ಲವೆ? ಲಕ್ಷ್ಮೀಬಾಯಿಯು ಆ ಬಟ್ಟಲನ್ನು ತುಟಿಗೆ ಸೋಕಿಸಿದಳೆಂಬ ವೇಳೆಗೆ ಅದರಲ್ಲಿ ಏನೋ ಒಂದು ವಸ್ತು ಬಿದ್ದಂತೆ ಕಾಣಿ ಸಿತು. ಲಕ್ಷ್ಮೀಬಾಯಿಯು ಗಾಬರಿಯಿಂದ ಕೆಳಕ್ಕಿಳಿಸಿ ನೋಡಿದಳು! ಆಶ್ಚ ರ್ಯಾಶ್ಚರ್ಯವು! ತಾನು ಬ್ರಾಹ್ಮಣನಿಗೆ ದಾನವಾಗಿ ಕೊಟ್ಟಿದ್ದ ಮೂಗು ತಿಯೇ ಅಚ್ಚಳಿಯದೆ ಪ್ರತ್ಯಕ್ಷವಾಗಿದೆ. ಆಗಿನ ಲಕ್ಷ್ಮೀಬಾಯಿಯ ಮನಸ್ಥಿತಿ ಯನ್ನು ವರ್ಣಿಸಬಲ್ಲ ಲೇಖಕನಾರು! ದಯಾನಿಧಿಯೂ ಭಕ್ತವತ್ಸಲನೂ ಆದ ಸ್ವಾಮಿಯನ್ನು ಮನಸಾ ಅನೇಕ ಬಗೆಯಿಂದ ಸ್ತುತಿಸಿದಳು. ಮತ್ತು ಒಡನೆ ಅಲ್ಲಿಂದ ಹೊರಟು ಪತಿಯ ಸಾನ್ನಿಧ್ಯಕ್ಕೆ ಬಂದು ಹೊತ್ತಾಯಿತೆಂದು ತನ್ನ ಮುಖವನ್ನೇ ಬರುಗಣ್ಣುಗಳಿಂದ ನೋಡುತ್ತಾ ಕುಳಿತಿದ್ದ ಪತಿಯ ಕೈಯಲ್ಲಿ ಅದನ್ನು ಕೊಟ್ಟಳು.

ನಾಯಕರು ಆ ಮೂಗುತಿಯನ್ನು ನೋಡಿದರು. ತಾವು ಅಂಗಡಿಯಲ್ಲಿ ಟ್ಟುಬಂದಿದ್ದ ಮೂಗುತಿಯಂತೆಯೇ ಕಾಣಿಸಿತು. ಬೆಳಕಿಗೆ ಹಿಡಿದು ನೋಡಿ ದರು! ಸರಿಯಾಗಿ ಅಷ್ಟೇ ಕೆಂಪುಗಳು, ಅಷ್ಟೇ ವಜ್ರದ ಹರಳುಗಳು, ಸುತ್ತಿದ ಅಷ್ಟೇ ಆಣೆಮುತ್ತುಗಳು, ಗೊತ್ತಾಗಿ ಅದೇ ಆಕಾರ, ಕಟ್ಟಣ, ಮೆರುಗು, ಕೈತಂಕ! ನಾಯಕರು ಶುದ್ಧಾಂಗವಾಗಿ ಅವಾಕ್ಕಾದರು. ಮುಂದೇನೂ ಹೇಳದೆ ತಕ್ಷಣ ಅಲ್ಲಿಂದೆದ್ದು ನೇರವಾಗಿ ತಮ್ಮ ಭಂಡಶಾಲೆಯನ್ನು ಕುರಿತು ನಡೆದು, ಅವಸರವಸರದಿಂದ ಬಾಗಿಲುತೆಗೆದು ಪೆಟ್ಟಿಗೆಯ ಬೀಗಮುದ್ರೆಗಳನ್ನು ಬಿಚ್ಚಿ ಭರಣಿಯನ್ನು ತೆಗೆದು ನೋಡಿದರು ಆದರ ಅಲ್ಲೇನಿದೆ? ತಾವು ಅಷ್ಟು ಭದ್ರವಾಗಿ ಇಟ್ಟು ಹೋಗಿದ್ದ ವಸ್ತುವು ಹೇಗೆ ಹೋಯಿತೆಂಬುದೂ ಅದೇ ಅಲ್ಲಿ ತಮ್ಮ ಪತ್ನಿಗೆ ದೊರತ ಬಗೆಯಾವುದೆಂಬುದೂ ಅವರಿಗೆ ತೋರದಾ ಯಿತು. ಅವರ ದೃಢಚಿತ್ತವೂ ಭ್ರಾಂತವಾಗಿ ಏನೂ ತೋರದಂತಾಯಿತು. ಸ್ವಲ್ಪ ಹೊತ್ತು ಶೂನ್ಯದೃಷ್ಟಿಯಿಂದ ಅಂಗಡಿಯ ಒಂದೊಂದು ವಸ್ತು

ವನ್ನೂ ನೋಡಿಕೊಂಡರು. ಆ ದಿನ ಅವರ ಮನಸ್ಸು ಎಂದಿನಂತಿರಲಿಲ್ಲ. ಒಡನೆ ಮೇಲಕ್ಕೆದ್ದರು. ಧರಣಿಯನ್ನೂ ಎತ್ತಿಡದೆ, ಲಕ್ಷಾಂತರ ಬೆಲೆಯ ಒಡವೆಗಳಿಂದ ತುಂಬಿದ ಪೆಟ್ಟಿಗೆಯ ಬಾಗಿಲನ್ನೂ ಮುಚ್ಚಿ ಬೀಗ ಹಾಕದೆ ಹೊರಬಾಗಿಲಿಗೆ ಮಾತ್ರ ಒಂದು ಸಾಮಾನ್ಯ ಬೀಗವನ್ನು ತಗುಲಿಸಿ ನೇರವಾಗಿ ಮನೆಗೆ ಬಂದರು.

ಇತ್ತ ಲಕ್ಷ್ಮೀಬಾಯಿಯು ಆ ದಿನ ನಡೆದ ಸಂಭವಕ್ಕೆ ಸದೃಶವಾದದೊಂದನ್ನು ತನ್ನ ಜೀವಮಾನದಲ್ಲೇ ನೋಡಿ ಕೇಳಿ ಅರಿತಿರಲಿಲ್ಲವಾದುದರಿಂದ ಆ ವಿಚಾರವೇ ಆಕೆಯ ಮನಸ್ಸನ್ನೆಲ್ಲಾ ಆವರಿಸಿಕೊಂಡು ಬಿಟ್ಟಿದ್ದಿತು ಆಕೆಯು ಮೇಲೆ ಮೇಲೆ ಆಶ್ಚರ್ಯಪಡುತ್ತಾ, "ಇದೇನಿದು! ಬ್ರಾಹ್ಮಣ ನಾರು? ನನ್ನಲ್ಲಿ ಬಂದು ಯಾಚಿಸಿದುದೇನು? ಯಜಮಾನರು ತಿರಸ್ಕರಿಸಿರಲಾಗಿ ನಾನು ಅಷ್ಟು ಬೆಲೆ ಬಾಳುವ ಮೂಗುತಿಯನ್ನು ಕೊಟ್ಟುದೇನು! ಪುನಃ ನನಗದು ಪ್ರಾಪ್ತವಾದ ಮಾರ್ಗವೇನು! ಇದೇನು ವಿಚಿತ್ರವು! ಇಲ್ಲ ಇಲ್ಲ. ನಿಜವಾಗಿಯೂ ವಿಠ್ಠಲಸ್ವಾಮಿಯೇ ನನ್ನ ಪರೀಕ್ಷೆಗಾಗಿ ಈ ರೀತಿ ಮಾಡಿರಬಹುದು! ಇದರಲ್ಲಿ ಸಂದೇಹವಿಲ್ಲ" ಎಂದುಕೊಳ್ಳುತ್ತಿದ್ದಳು. ಅಷ್ಟರಲ್ಲಿ ನಾಯಕರು ಬಹು ಆತುರದಿಂದ ಬಂದು ಬಾಗಿಲನ್ನು ತಟ್ಟಿದರು. ಲಕ್ಷ್ಮೀಬಾಯಿಯೂ ಬಾಗಿಲನ್ನು ತೆಗೆದಳು. ಆ ದಿನ ಅವರ ಮುಖವೇ ಒಂದು ಬಗೆಯಾಗಿದೆ. ಒಳಕ್ಕೆ ಬಂದು ಸ್ವಲ್ಪವೂ ಸಾವಕಾಶವಿಲ್ಲದೆ--"ಹೇಳು ಹೇಳು. ಈ ದಿನ ನಡೆದ ಸಂಗತಿಯೇನು? ನಿನಗೆ ಮೂಗುತಿಯು ಹೇಗೆ ದೊರಕಿತು ಹೇಳು. ನಿಶ್ಚಯ ಸಂಗತಿಯನ್ನು ಹೇಳು ಇಲ್ಲವಿದ್ದರೆ ನಾನು ಪ್ರಾಣತ್ಯಾಗ ಮಾಡಿಕೊಳ್ಳುವೆನು" ಎಂದರು. ತನ್ನ ಪತಿಯು ಎಂದೂ ಇಷ್ಟು ಕಾತುರರಾಗಿ ಮಾತನಾಡಿದುದನ್ನು ಕಾಣದ ಆ ಸಾಧ್ವಿಯು ಸಾವಧಾನದಿಂದ ತಾನು ಬ್ರಾಹ್ಮಣನಿಗೆ ಮೂಗುತಿಯನ್ನು ಕೊಟ್ಟಾಗಿನಿಂದ ಪುನಃ ಅದು ದೊರೆತವರೆಗಿನ ತನಗೆ ತಿಳಿದಿದ್ದ ಸಂಗತಿಗಳನ್ನೆಲ್ಲಾ ವಿಶದವಾಗಿ ತಿಳಿಸಿದಳು. ಕೇಳಿ ಕೇಳಿದಂತೆ ನಾಯಕರ ಮನಸ್ಸಿನಲ್ಲಿ ಬಗೆಬಗೆಯ ಸಂಗತಿಗಳು ಬರತೊಡಗಿದುವು ಕೊನೆಗೆ ತಮ್ಮ ಪರೀಕ್ಷೆಗಾಗಿ ಶ್ರೀಮನ್ನಾರಾಯಣನೇ ಬ್ರಾಹ್ಮಣ ರೂಪಿನಿಂದ ಬಂದಿದ್ದನೆಂಬ ಯೋಚನೆಯು ಮಿಂಚು ಹೊಳೆದಂತೆ ಕೇವಲ ಕ್ಷಣ ಕಾಲ ಮಾತ್ರ ಅವರ ಮನಃ ಪ್ರಪಂಚದ ಮೇಲೆ ಬೆಳಗಿತು. ಅಷ್ಟೇ! ಅದೇ

ಯೋಚನೆಯೇ ಸ್ಥಿರವಾಯಿತು. ಅದಕ್ಕೆ ಸಂಬಂಧಪಟ್ಟಂತೆಯೇ ಹಿಂದಿನ ಅನೇಕ ಸಂಗತಿಗಳು ಜ್ಞಾಪಕವಾದುವು. ತಾವು ಭೀಮಾ ತೀರ್ಥದಲ್ಲಿ ಬ್ರಾಹ್ಮಣನನ್ನು ವಂಚಿಸಿದುದು, ಆರ್ತರನ್ನೂ ಭಿಕ್ಷುಕರನ್ನೂ ಅತ್ಯಂತ ನಿಷ್ಠುರತೆಯಿಂದ ನಿಂದಿಸುತ್ತಿದ್ದುದು ಮುಂತಾದ ಸಂಗತಿಗಳೆಲ್ಲವೂ ಏಕ ಕಾಲಕ್ಕೆ ಜ್ಞಾಪಕಕ್ಕೆ ಬಂದು ಅವರ ಮನಸ್ಸು ಅಂತಃಕರಣಗಳನ್ನು ಬಹಳ ವಾಗಿ ಬಳಲಿಸಿಬಿಟ್ಟುವು. ಅವರು ಕೆಲಹೊತ್ತು ಏನೂ ಹೇಳದೆ, ಏನೂ ತೋರದೆ ಮಂಕರಂತೆ ಕುಳಿತುಬಿಟ್ಟರು.

ಹೀಗೆ ತಮ್ಮ ಜೀವಿತದ ಪೂರ್ವ ಕಾರ್ಯಗಳನ್ನು ಕುರಿತು ಯೋಚಿಸಿ ಕೊಂಡ ಒಡನೆಯೇ ನಾಯಕರಿಗೆ ಆದರ ನಿಜ್ವಯ ತತ್ವವು ತಿಳಿದುಹೋ ಯಿತು. "ಅಕ್ಕಟಾ ನಾನೆಂತಹ ಪರಮ ನೀಚನು! ದೇವರ ದೇವನಾದ ನಾರಾಯಣಮೂರ್ತಿಯೇ ಬಂದು 'ದೇಹಿ' ಎಂದು ಕೇಳಿಕೊಂಡಾಗಲೂ ಮೂರು ಕಾಸನ್ನಾದರೂ ಒಳ್ಳೆಯ ಮನಸ್ಸಿನಿಂದ ಎತ್ತಿ ಕೊಡಲರಿಯದ ನನ್ನ ಈ ಐಶ್ವರ್ಯವು ನಾಶವಾಗಲಿ ಸಂಪತ್ತು ಹಾಳಾಗಲಿ! ಛೀ, ಈ ಐಶ್ವ ರ್ಯವಲ್ಲವೆ ನನ್ನಲ್ಲಿ ಇಂತಹ ಕೃಪಣತ್ವವನ್ನು ಬೆಳೆಯಿಸಿ ಯುಕ್ತಾಯುಕ್ತ ವಿವೇಕವನ್ನು ನಾಶಮಾಡಿದುದು! ಇದರ ಸಂಬಂಧವೇ ಪಾಪಕಾರಿಯು ಇದನ್ನೆಲ್ಲವನ್ನೂ ಈ ದಿನವೇ ತ್ಯಾಗಮಾಡುತ್ತೇನೆ" ಎಂದು ಕೃತನಿಶ್ಚಿತರಾಗಿ ಮನೆಯೊಳಕ್ಕೆ ನಡೆದು ಸ್ನಾನ ಮಾಡಿ ಮಡಿಯನ್ನುಟ್ಟರು. ದೇವರ ಪೂಜೆ ಮಾಡಿ ತೀರ್ಥಪ್ರಾಶನ ಮಾಡಿದರು. ಮನೆಯಿಂದ ಹೇಗಿದ್ದವರು ಹಾಗೆಯೇ ಆ ಅಪಾರವಾದ ಆಸ್ತಿಯಲ್ಲಿ ಒಂದು ಕುರುಡ ಕವಡೆಯನ್ನೂ ತೆಗೆದುಕೊ ಳ್ಳದೆ ಹೊರಕ್ಕೆ ಬಂದು ನಿಂತರು. ಮತ್ತು ಎರಡು ಕೈಗಳನ್ನೂ ಮೇಲಕ್ಕೆತ್ತಿ, "ಓ ಪುರಂದರಗಡದ ನಿವಾಸಿಗಳೇ! ನಾನು ಈ ದಿನ ನನ್ನ ಚರಸ್ಥಿರ-ಪಿತ್ರಾ ರ್ಜಿತ ಸ್ವಾರ್ಜಿತ ಆಸ್ತಿಗಳನ್ನೆಲ್ಲಾ ಶ್ರೀ ವಿಷ್ಣು ಪ್ರೀತ್ಯರ್ಥವಾಗಿ ದಾನ ಮಾಡಲು ಆಶಿಸಿದ್ದೇನೆ. ದಾನ ಪಡೆಯುವವರೆಲ್ಲರೂ ಬನ್ನಿರಿ" ಎಂದು ಕೂಗಿ ಹೇಳಿದರು.

ಕೋಟ್ಯಾಧಿಪತಿಯಾದ ಕೃಷ್ಣಪ್ಪನಾಯಕರು ಮಧ್ಯಾಹ್ನದ ಹೊತ್ತಿನಲ್ಲಿ ಬೀದಿಯಲ್ಲಿ ನಿಂತು ಕೂಗಿದ ಆ ಮಾತನ್ನು ಕೇಳಿ ಪುರಂದರಗಡವೇ ಆಶ್ಚರ್ಯ ಸಾಗರದಲ್ಲಿ ಮುಳುಗಿಹೋಯಿತು. ಕ್ಷಣಮಾತ್ರದೊಳಗಾಗಿ ಊರಿನ ನೂರಾ

ರುಮುಂದಿ ಬ್ರಾಹ್ಮಣರು ಅವರ ಮನೆಯ ಹತ್ತಿರ ನೆರೆದರು. ಅವರಲ್ಲಿ ನಾಯಕರ ಬಂಧುಬಾಂಧವರು, ಸೆಂಟರಿಸ್ಟರು, ಸ್ನೇಹಿತರು, ಶ್ರೋತ್ರಿಯರು, ವಿದ್ವಾಂಸರು, ಪಾಮರರು ಎಲ್ಲರೂ ಇದ್ದರು. ಆದರೆ ಅವರ ಜೀವಿತದಲ್ಲಿ ಏಕಾಏಕಿ ಇಂತಹ ಪರಿವರ್ತನೆಯು ಏಕುಂಟಾಯಿತು, ಎಂಬುದು ಯಾರಿಗೂ ತಿಳಿಯದು ಆಪ್ತರು ಕಾರಣವನ್ನು ವಿಚಾರಿಸಿ ಅವರಿಗೆ ತಿಳಿವಳಿಕೆಯನ್ನು ಹೇಳಲು ಪ್ರಾರಂಭಿಸಿದರು ಆದರೇನು! ಆಗ ನಾಯಕರು ಕೇವಲ ಅಂತರ್ಮುಖಿಗಳಂತೆ ಇದ್ದುದರಿಂದ ಯಾರ ಬೋಧನೆಯೂ ಅವರಿಗೆ ಏರಲಿಲ್ಲ ಒಡನೆ ದಾನಕ್ಕೆ ಪ್ರಾರಂಭಿಸಿ ಪಾತ್ರೆ ಪದಾರ್ಥಗಳು, ವಸ್ತ್ರ ಒಡವೆಗಳು, ಭೂಮಿಕಾಣಿಗಳು ನಗದು ಹಣ ಮುಂತಾದ ಸಮಸ್ತ ವಸ್ತು ಸಾಮಗ್ರಿಗಳನ್ನೂ ಕೈಯಿಂದ ಎತ್ತುವುದು, ತುಲಸೀ ದಳವನ್ನು ಅದರ ಮೇಲಿಡುವುದು ಕೃಷ್ಣಾರ್ಪಣವೆಂದು ಕೈನೀಡಿದವರಿಗೆ ಕೊಡುವುದು, ಹೀಗೆ ಮಾಡಿ ಮನೆಯಲ್ಲಿದ್ದುದು, ಅಂಗಡಿಯಲ್ಲಿದ್ದುದು, ಗ್ರಾಮಾಂತರಗಳಲ್ಲಿದ್ದ ಹೊಲ ಗದ್ದೆ ತೋಟಗಳು, ದನಕರುಗಳು ಮುಂತಾಗಿ ಸಮಸ್ತವನ್ನೂ ದಾನಕೊಟ್ಟು ಆ ದಂಪತಿಗಳು ಮಕ್ಕಳೊಂದಿಗೆ ಅಂದು ಪುರಂದರಗಡವನ್ನು ಬಿಟ್ಟು ಹೊರಟರು

ಅವರು ಮನೆಯನ್ನು ಬಿಟ್ಟು ಹೊರಟಾಗ ಅವರಿಗಿದ್ದ ಮನಸ್ಥಿತಿಯು ಅವರ ಈ ಪದದಿಂದ ಚನ್ನಾಗಿ ವ್ಯಕ್ತವಾಗುತ್ತದೆ.

ರಾಗ ತಾಳ.

ಆದದ್ದೆಲ್ಲಾ ಒಳಿತೇ ಆಯಿತು || ಪ || ನಮ್ಮ ಶ್ರೀಧರನಸೇವೆಗೆ ಸಾಧನ ಸಂಪತ್ತಾಯಿತು || ಅ-ಪ || ದಂಡಿಗೆಬೆತ್ತ ಹಿಡಿಯುವುದಕ್ಕೆ | ಮುಂಡೆಬಾಗಿ ನಾಚುತಲಿದ್ದೆ || ಹೆಂಡತಿಸಂತತಿ ಸಾವಿರವಾಗಲಿ | ದಂಡಿಗೆ ಬೆತ್ತಾ ಹಿಡಿಸಿದಳಣ್ಣಾ || ೧ || ಗೋಪಾಳಬುಟ್ಟಿ ಹಿಡಿಯುವುದಕ್ಕೆ | ಭೂಪತಿಯೆಂದು ಗರ್ವಿಸುತಿದ್ದೆ || ಈ ಪತ್ನೀಕುಲ ಸಾವಿರವಾಗಲಿ | ಗೋಪಾಳಬುಟ್ಟೀ ಹಿಡಿಸಿದಳಣ್ಣಾ || ೨ || ತುಲಸೀಮಾಲೆ ಹಾಕುವುದಕ್ಕೆ | ಅರಸಾನೆಂದು ನಾಚುತಲಿದ್ದೆ || ಸರಸಿಜಾಕ್ಷ ನಮ್ಮ ಪುರಂದರವಿಠಲನ | ದಾಸಗೆ ಮಾಲೆ ಹಾಕಿಸಿದಳು || ೩ ||

ಪಿತೃ ಪಿತಾಮಹರ ಕಾಲದಿಂದಲೂ ಗಣ್ಯರಾಗಿ ವಾಸವಾಗಿದ್ದ ಪುರಂದರಗಡವನ್ನು ಬಿಟ್ಟು ಆ ದಂಪತಿಗಳು ಹೊರಹೊರಟರು. ಆಗ ಅವರ ಮೈಮೇಲೆ ಕೇವಲ ಉಟ್ಟು ಹೊದೆದ ಒಂದೊಂದು ವಸ್ತ್ರವಲ್ಲದೆ ಮತ್ತೇನೂ ಇರಲಿಲ್ಲ ನಾಯಕರ ಮನಸ್ಸು ಕೇವಲ ಭಗವನ್ಮಯವಾಗಿದ್ದಿತು. ಅವರಿಗೆ ಬಾಹ್ಯ ಪ್ರಪಂಚದ ಪರಿಚಯವು ಹತ್ತುವಂತಿರಲಿಲ್ಲ. ಅವರು ಪುರಂದರಗಡವನ್ನು ಬಿಟ್ಟು ಫಂಡರಾಪುರವನ್ನು ಕುರಿತು ಹೊರಟು ನಡೆದ ಮಾರ್ಗದಲ್ಲಿ ಒಂದು ವಿಶೇಷ ನಡೆಯಿತು ಕೆಲವು ಕಳ್ಳರು ಮಾರ್ಗಸ್ಥರಾದ ಅವರಿಗಾಗಿ ಹೊಂಚಿಕೊಂಡಿದ್ದರು. ನಾಯಕರು ಭಗವದ್ವಿಷಯ ಚಿಂತಾಪರರಾಗಿ ನಡೆಯುತ್ತಿರಲು ಕಳ್ಳರು ಅವರ ಪತ್ನಿಯ ಕಣ್ಣಿಗೆ ಕಾಣಿಸಿದರು ಆ ಸಾಧ್ವಿಯು ತನ್ನ ಪತಿಯನ್ನು ಕುರಿತು ಕಳ್ಳರು ಬಂದ ವಿಚಾರವನ್ನು ತಿಳಿಸಿ ಆತ್ಮರಕ್ಷಣೋಪಾಯವನ್ನು ಕುರಿತು ಗಮನಿಸಬೇಕೆಂದಳು. ನಾಯಕರು ತಮ್ಮಲ್ಲಿ ಬೆಲೆಬಾಳುವ ಯಾವ ಪದಾರ್ಥವೂ ಇಲ್ಲದುದರಿಂದ ತಾವು ಕಳ್ಳರಿಗಾಗಿ ಹೆದರಬೇಕಾದ ಕಾರಣವಿಲ್ಲವೆಂದು ನುಡಿದು "ನೀನು ಏನನ್ನಾದರೂ ತಂದಿದ್ದೀಯೋ?" ಎಂದರು. ಲಕ್ಷ್ಮೀಬಾಯಿಯು ತಾನು ಚಿಕ್ಕಂದಿನಿಂದಲೂ ಉಪಯೋಗಿಸುತ್ತಿದ್ದ ರತ್ನಖಚಿತವಾದ ಕುಂಕುಮದ ಭರಣಿಯೊಂದನ್ನು ಮಾತ್ರ ಬಿಡಲಾರದೆ ಉಡಿಯಲ್ಲಿಟ್ಟುಕೊಂಡುಬಂದಿದ್ದಳಾದ್ದರಿಂದ ಅದನ್ನು ತೆಗೆದು ತೋರಿಸಿದಳು. ಆಗ ನಾಯಕರು 'ಸರಿ, ಎಲ್ಲವೂ ಕೃಷ್ಣಾರ್ಪಣವೆಂದು ಹೇಳಿದ ತರುವಾಯ ಇದನ್ನು ತಂದುದೂ ನ್ಯಾಯವಲ್ಲ ಇದನ್ನೂ ಬಿಡಬೇಕೆಂದು ತೋರಿಸುವುದಕ್ಕಾಗಿಯೇ ಶ್ರೀ ಹರಿಯು ಕಳ್ಳರ ರೂಪಿನಿಂದ ಬಂದಿದ್ದಾನೆ. ಅದನ್ನು ಆಗೋ ಆ ಕಲ್ಲಿನ ಮೇಲೆ ಶ್ರೀ ಕೃಷ್ಣಾರ್ಪಣವೆಂದು ಇಟ್ಟುಬಿಡು" ಎಂದರು. ಆಕೆಯಾದರೂ ಅದನ್ನು ಹಾಗೆ ಇಟ್ಟುಬಿಡಲು ಮುಂದೆ ಕಳ್ಳರು ಕಾಣಿಸದೆ ಹೊರಟುಹೋದರು. ಆ ದಂಪತಿಗಳೂ ತರುವಾಯ ನಿಶ್ಚಿಂತರಾಗಿ ನಡೆದು ಫಂಡರಾಪುರವನ್ನು ಸೇರಿದರು

ಫಂಡರಾಪುರವು ದಕ್ಷಿಣದೇಶದ ಪುಣ್ಯಕ್ಷೇತ್ರಗಳಲ್ಲೆಲ್ಲಾ ಅತ್ಯಂತ ಪ್ರಸಿದ್ಧವಾದುವುಗಳಲ್ಲಿ ಒಂದು ಅಲ್ಲಿ ಭಕ್ತಶ್ರೇಷ್ಠರಾದ ಪುಂಡಲೀಕ, ನಾಮದೇವ, ತುಕಾರಾಮ ಮುಂತಾದ ಭಕ್ತಶಿರೋಮಣಿಗಳಿಂದ ಕೀರ್ತಿತನಾದ ವಿಠ್ಠಲಸ್ವಾಮಿಯು ಭಕ್ತಾಭೀಷ್ಟಪ್ರದಾಯಕನಾಗಿ ನೆಲೆಸಿರುವನು. ನಾಯ

ಕರು ಆ ಫಂಡರಾಪುರದಲ್ಲಿ ದಾರಿದ್ರ್ಯಕ್ಕೆ ಸಿಲುಕಿ ಅಗಾಧ ಕಷ್ಟತಾಪತ್ರಯು ಗಳಿಂದ ಬಳಲಿದರೂ ಮನಸ್ಸಿನಲ್ಲಿ ಯಾವ ವಿಕಲ್ಪವನ್ನೂ ಹೊಂದದೆ ಸರ್ವದಾ ವಿಟ್ಠಲನ ಪೂಜೆ, ಧ್ಯಾನ, ಭಜನೆ, ಕೀರ್ತನೆಗಳಿಂದ ಕಾಲಕಳೆಯುತ್ತಾ ಯಾಚ ನೆಯಿಂದ ಕುಟುಂಬಭರಣ ಮಾಡಿಕೊಂಡು ಸುಮಾರು ಹನ್ನೆರಡು ವರ್ಷ ಕಾಲ ವಾಸಮಾಡಿದರು ತರುವಾಯ ದಕ್ಷಿಣದೇಶದಲ್ಲಿ ಮುಸಲ್ಮಾನರ ಹಾವಳಿಯು ಅಧಿಕವಾಗಲು ಎಲ್ಲರಂತೆಯೇ ಅವರೂ ಆ ಸ್ಥಳವನ್ನು ಬಿಡಬೇ ಕಾಯಿತು. ಆ ಕಾಲಕ್ಕೆ ಸರಿಯಾಗಿ ಅವರಿಗೆ ಶ್ರೀ ವಿಟ್ಠಲಸ್ವಾಮಿಯು ಹಂಪೆಗೆ ಹೋಗಿ ಅಲ್ಲಿದ್ದ ಶ್ರೀ ವ್ಯಾಸರಾಯಸ್ವಾಮಿಗಳನ್ನು ಕಾಣಬೇಕೆಂದು ಸ್ವಪ್ನದಲ್ಲಿ ಆಜ್ಞಾಪಿಸಲು ನಾಯಕರು ಫಂಡರಾಪುರವನ್ನು ಬಿಟ್ಟು ಪತ್ನೀ ಪುತ್ರರೊಂದಿಗೆ ಅಲ್ಲಿಗೆ ಹೊರಟರು. ಶ್ರೀ ವ್ಯಾಸರಾಯರು ಅವರ ಭಕ್ತಿ ಸಾರವಶ್ಯತೆಯನ್ನೂ ಮುಖದಲ್ಲಿ ವ್ಯಕ್ತವಾಗುತ್ತಿದ್ದ ದೈವಿಕತೇಜಸ್ಸಂಪನ್ನತೆ ಯನ್ನೂ ಕಂಡು ಅವರಿಗೆ ಮಧ್ವಸಿದ್ಧಾಂತ ಗ್ರಂಥಗಳಲ್ಲಿ ಸಂಪೂರ್ಣ ಶಿಕ್ಷಣ ವನ್ನು ಕೊಟ್ಟರು ಅವರು ಪುರಂದರಗಡದಿಂದ ಹೊರಟು ಬಂದ ಹರಿ ದಾಸರಾದುದರಿಂದ ಅವರನ್ನು ಎಲ್ಲರೂ ಪುರಂದರದ ದಾಸರು-**ಪುರಂದರ ದಾಸರು** ಎಂತಲೇ ಕರೆಯಲಾರಂಭಿಸಿದರು. ಶ್ರೀ ವ್ಯಾಸರಾಯರು ಅವ ರಿಗೆ ವೈಷ್ಣವಮತಕ್ಕೆ ಮುದ್ರಧಾರಣೆ ಕೊಡಿಸಿ ವೀರ ವೈಷ್ಣವರಾದ ಅವರಿಗೆ ತತ್ತ್ವೋಪದೇಶ ಮಾಡಿ ಅವರ ಇಷ್ಟ ದೈವವನ್ನು **"ಪುರಂದರ ವಿಠಲ"** ನೆಂದು ಸಂಬೋಧಿಸಿ ಕೀರ್ತಿಸುವಂತೆ ಅಂಕಿತವನ್ನೂ ದಯೆಪಾಲಿಸಿ ಹೀಗೆ ಲೌಕಿಕ ರೀತ್ಯಾ ಅವರಿಗೆ ಗುರುಗಳೆನ್ನಿಸಿ ಮುಂದೆ ಅವರು ಮಾಡಬೇಕಾಗಿದ್ದ ಅಗಾಧ ಕಾರ್ಯಕ್ಕೆ ಅವರನ್ನು ಸಿದ್ಧಗೊಳಿಸಿದರು. ಇಂತು ನವಕೋಟಿಗೆ ಅಧಿಪತಿ ಯಾಗಿದ್ದ ಕೃಷ್ಣಪ್ಪನಾಯಕರು ಶುದ್ಧವೃತ್ತಿಗೆ ಪ್ರಥಮಾಧಿಕಾರಿಗಳಾದ "ಪುರಂದರ ದಾಸ"ರಾದರು.



**ಅಧ್ಯಾಯ ೬ "ಭಗವನ್ನಾಮಗಳು—ಮಹಿಮೆಗಳು"**

ಮಧ್ವಮತ ಸಿದ್ಧಾಂತ | ಪದ್ಧತಿಯನುದ್ಧರಿಸಿ | ಗದ್ಯ ಪದ್ಯಗಳಿಂದಲೀ |
ಮಧ್ವಪತಿಪದಪದ್ಮಹೃದಯದೊಳು ನೆನೆನೆನೆದು | ಮುದ್ದಾಗಿ ವರ್ಣಿಸುತಲಿ ||

ಮದ್ದಳೆಯು ತಾಳ ವೀಣೆಗಳ ಗತಿಯನು ಪಿಡಿದು ಶುದ್ಧ ರಾಗಗಳಿಂದಲೀ | ಉದ್ಧವನ ಸಖನೊಲಿದು ತದ್ಧಿಮಿತ | ಧಿಮಿಕೆಂದು ಪೊದ್ದಿ ಕುಣಿಯುವ ತೆರದಲೀ | ಪೊಗಳೀ || ೧೩ ||

ಈರೆರಡು ಲಕ್ಷಗಳಮೇಲೆ ಎಪ್ಪತ್ತೈದು | ಸಾವಿರದ ಗ್ರಂಥ ರಚಿಸೀ | ಈರೆರಡು ದಿಕ್ಕಿನಲಿ | ಚರಿಸಿ ತೀರ್ಥಕ್ಷೇತ್ರ | ಸಾರ ಮಹಿಮೆಗಳ ಸ್ತುತಿಸೀ || ಶೌರಿದಿನದಲನೂಪ್ವ | ಉಪವಾಸ ವ್ರತನೇಮ ಪಾರಣೆಯ ವಿಧಿಯ ತಿಳಿಸೀ | ತಾರತಮ್ಯವು ಪಂಚಭೇದಗಳು ಸ್ಥಿರವೆಂದು | ಸಾರಿ ಡಂಗುರವಹೊಯಿಸೀ | ಜಯಿಸೀ || ೧೪ ||

ತರುಣಿ ಮಕ್ಕಳು ಶಿಷ್ಯ | ಪರಿವಾರಗಳ ಸಹಿತ | ಧರೆಯನೆಲ್ಲವ ತಿರುಗುತ | ಕರದಿ ಕಿನ್ನರಿಧರಿಸಿ | ಸ್ವರವೆತ್ತಿ ಪಾಡುತಿರ | ಕೊರಳುಬ್ಬಿ ಶಿರಬಗಿಯುತ || ಎರಡುಕಂಗಳುಧಾರ ಸುರಿಯೆಬಾಷ್ಪೋದಕವು | ಹರಿಮಹಿಮೆ ಕೊಂಡಾಡುತ | ತಿರಿತಂದ ಧನದಿಂದ | ವಿಪ್ರರಿಗೆ ಮೃಷ್ಟಾನ್ನ | ಹರುಷದಿಂದಲಿ ಉಣಿಸುತಾ | ಸತತಾ || ೧೫ ||

ಗುಪ್ತವಾಗಿರೆ ಕಂಡು | ವ್ಯಕ್ತಮಾಡುವೆನೆಂದು | ಶಕ್ತನಹ ದೇವ ಬಂದೂ | ಘೃತದ ಬಿಂದಿಗೆ ತಂದ ತಿಥಿಯು ಓಗರವುಂಡ | ಸುತನಾಗಿ ನೀರತಂದ || ಯತಿಯು ಪಟ್ಟಿಗೆ ಭಾಗಿರಥಿಯನ್ನು ತರಿಸಿದಾ | ಕ್ಷಿತಿಪತಿಗೆ ದೃಢತೋರಿದಾ | ಸತಿಯೊಂದವಾತಿಗೇ | ಅತುಳ ಭಾಗ್ಯವನಿತ್ತ ಪಥದಲ್ಲಿ ತಲೆಗಾಯಿದಾ | ವರದಾ || ೧೬ ||

ಗಂಗೆ ಗೌತಮಿ ತುಂಗ | ಭದ್ರಾದಿ ದೇವ ತರಂ | ಗಿಣಿಯರೆಲ್ಲ ಬಂದೂ | ಅಂಗಳವ ಸಾರಿಸುತ | ರಂಗವಾಲೆಯನಿಕ್ಕಿ | ಶೃಂಗಾರಗೈವರಂದೂ || ಕಂಗಳಿಗೆತೋರಿದನು | ಡಿಂಗರಿಗ ಗುರುರಾಯ | ತಂಗಿಯನು ಕರೆದುತಂದೂ | ಮಂಗಳಾಂಗನ ಭಕ್ತಪುಂಗವನು ನೀನೆಂದು ಇಂಗಿತವ ಸಾರ್ದು ಬಂದೂ | ನಿಂದೂ || ೧೭ ||

ಪುರಂದರುಪನಿಷದೆಂದು | ಗುರುವ್ಯಾಸಮುನಿಯಿಂದ | ಮೆರೆವಬಿರುದನುಧರಿಸಿದೀ | ಕರೆಕರೆದು ಶಿಷ್ಯರಿಂಗೊರೆದು ತತ್ವಾರ್ಥವನು ದುರಿತದೂರರ ಮಾಡಿದೀ || ಹರಿದಾಸ್ಯದಾಸ್ಯದಾಸಿರಿಯು ನೊಬಗನು ಮೆರೆಸಿ | ಧರೆಗೆ ಹರ್ಷವನೀಡಿದೀ | ವರದಗುರು ಮಧ್ವಪತಿ | ಅಭಿನವ ಪುರಂದರರ | ತರುಣಸಂಘವನಿಲಿಸಿದೀ | ಮುದದೀ || ೧೮ ||

ಕ್ರಿ. ಶ. ೧೨ ನೆಯ ಶತಮಾನದ ಆದಿಭಾಗದಲ್ಲಿ ಜನಿಸಿದ ಶ್ರೀಮನ್ಮಧ್ವಾಚಾರ್ಯರು ಬ್ರಹ್ಮಸೂತ್ರಗಳು ಭಗವದ್ಗೀತೆ ಮುಂತಾದ ಗ್ರಂಥಗಳಿಗೆ ಭಾಷ್ಯಗಳನ್ನು ಬರೆದು ವಿಷ್ಣುಸರ್ವೋತ್ತಮತ್ವವನ್ನೂ ಅದರ ಸಾರ್ಥಕ್ಯಕ್ಕಾಗಿ ದ್ವೈತಮತಸಿದ್ಧಾಂತವನ್ನೂ ಸ್ಥಾಪಿಸಿದರಷ್ಟೆ! ಆ ದ್ವೈತಮತ ಪರಂಪರೆಯಲ್ಲಿ ಒಂದು ಕಡೆ ಉಡುಪಿಯಲ್ಲ ಶ್ರೀಕೃಷ್ಣದೇವರ ಆರಾಧನೆಗಾಗಿ ಎಂಟು ಮಠಗಳೂ ಮತ್ತೊಂದುಕಡೆ ಉತ್ತರಾದಿ ಅಕ್ಷೋಭ್ಯತೀರ್ಥ ಮುಂತಾದ ಮಠಗಳೂ ದೇಶದ ವಿವಿಧ ಭಾಗಗಳಲ್ಲ ಸಂಚರಿಸುತ್ತಾ ಆಚಾರ್ಯರ ದಿವ್ಯತತ್ವಗಳನ್ನು ಪ್ರಸಿದ್ಧಪಡಿಸುತ್ತಾ ದ್ವೈತಮತಪ್ರಚಾರಕಾರ್ಯದಲ್ಲ ನಿರತವಾಗಿದ್ದವು. ಆದರ ಮತತತ್ವಗಳು ದೇವವಾಣಿಯಾದ ಸಂಸ್ಕೃತ ಗ್ರಂಥಗಳಲ್ಲೇ ಅಡಗಿದ್ದು ಅವು ಆಯಾ ಮತ ಗುರುಗಳಲ್ಲಾಗಲೀ ಅಥವಾ ಆಯಾ ಸಾಂಪ್ರದಾಯಿಕ ವಿದ್ವಾಂಸರಲ್ಲಾಗಲೀ ಶಿಷ್ಯವೃತ್ತಿಯನ್ನು ಮಾಡಿ ಗ್ರಂಥ ಪಠನಮಾಡಿದವರಿಗಲ್ಲದೆ ಇತರರಿಗೆ ತಿಳಿಯಲು ಅವಕಾಶವಿಲ್ಲದೆ ಇತ್ತು. ಸಂಸ್ಕೃತ ವಿದ್ಯಾಭ್ಯಾಸ ಮಾಡಿ ಗ್ರಂಥ ಪಠನಮಾಡುವಷ್ಟು ಸಾಮರ್ಥ್ಯವಿದ್ದವರನ್ನು ಬಿಟ್ಟು ಮಿಕ್ಕ ಸಾಮಾನ್ಯರು ಕೇವಲ ಪಂಡಿತರ ಅನುಕರಣಮಾಡುವುದಷ್ಟಲ್ಲದೆ ಸ್ವತಃ ಮತಸಿದ್ಧಾಂತವನ್ನು ತಿಳಿದುಕೊಳ್ಳಲು ಅವಕಾಶ ಕಡಮೆಯಾಗಿತ್ತು. ಹೀಗೆ ನಡೆದು ಬರುತ್ತಿರಲು ವೈಷ್ಣವಮತಪರಂಪರೆಯಲ್ಲಿ ಬಂದ ಶ್ರೀ ಬ್ರಹ್ಮಣ್ಯತೀರ್ಥ ಶ್ರೀಪಾದಂಗಳವರಿಗೆ ಶ್ರೀ ವ್ಯಾಸರಾಯರೆಂಬ ಮಹಾಮಹಿಮರು ಶಿಷ್ಯರಾದರು. ಇವರು ಮಹಾ ಪ್ರತಿಭಾಶಾಲಿಗಳು. ಇವರ ಕಾಲದಲ್ಲೇ ವೈಷ್ಣವಮತದಲ್ಲಿ ಮತಪ್ರಚಾರಕ್ಕಾಗಿ ವ್ಯಾಸಕೂಟ-ದಾಸಕೂಟಗಳೆಂಬ ಸಾಧನಗಳು ಬೇರೆ ಬೇರೆಯಾಗಿ ಏರ್ಪಟ್ಟುವು. ಈ ಎರಡು ಕೂಟಗಳ ಪ್ರಾಧಾನ್ಯವನ್ನೂ ವಹಿಸಿ ಶ್ರೀ ವ್ಯಾಸರಾಯಸ್ವಾಮಿಗಳು ವೈಷ್ಣವಮತವನ್ನು ಅತಿಶಯರೀತಿಯಿಂದ ಪ್ರಸಿದ್ಧಪಡಿಸಿದರು. ವ್ಯಾಸರಾಯರ ಶಿಷ್ಯವರ್ಗದಲ್ಲಿ, ಅದ್ವೈತಿಗಳಲ್ಲಿ ಶ್ರೇಷ್ಠರೂ ಅಪ್ರತಿಮ ಪಂಡಿತರೂ ಆಗಿದ್ದ ಅಪ್ಪಯ್ಯದೀಕ್ಷಿತರನ್ನು ವಾದದಲ್ಲಿ ಗೆದ್ದ-ಅರವತ್ತು ಕಲೆಗಳಲ್ಲಿ ಪ್ರತಿಭೆಯನ್ನುಂಟಾಗಿದ್ದ,-ಶ್ರೀ ವಿಜಯೇಂದ್ರ ತೀರ್ಥರೂ, ಸ್ವಾದೀ ಮಠದ ಪೀಠಾಧಿಪತಿಗಳಾದ ವಾದಿರಾಜರೂ ಇತರ ಅನೇಕ ವಿದ್ವಾಂಸರೂ ವ್ಯಾಸಕೂಟವನ್ನು ಪೋಷಿಸಿಕೊಂಡು ಬರುತ್ತಿರಲು,-ನಮ್ಮ ಕಥಾನಾಯಕರೂ ಅವರಿಗೆ ಸಮಕಾಲೀನರಾಗಿದ್ದ ಕನಕದಾಸರೇ

ಮುಂತಾದವರೂ ದಾಸಕೂಟವನ್ನು ಪೋಷಿಸಿ ದ್ವೈತಮತವೆಂಬ ರತ್ನಾಕರದ ತಳದಲ್ಲಿ ಅಡಗಿದ್ದ ದಿವ್ಯ ರತ್ನಗಳನ್ನು ಮೃದುಮಧುರವಾದ ಕನ್ನಡ ಭಾಷೆಯಲ್ಲಿ ಪದ-ಪದ್ಯಗಳು, ಸುಳಾದಿಗಳು-ಉಗಾಭೋಗಗಳು ಮುಂತಾದ ಗೀತೆಗಳ ಮೂಲಕ ಸ್ತ್ರೀಯರು ಬಾಲಕರು ಸಾಮಾನ್ಯ ಜನಸಮಾಜ ಇವರ ಉಪಯೋಗಕ್ಕಾಗಿ ತಂದು ಕೊಟ್ಟು ಮಹದುಪಕಾರಮಾಡಿ ಜಗತ್ತನ್ನು ಉದ್ಧರಿಸಿದರು.

ಶ್ರೀ ವ್ಯಾಸರಾಯರು ಎಲ್ಲಿಗೆ ಸಂಚಾರ ಹೊರಟರೂ ಈ ಶಿಷ್ಯವರ್ಗವೆಲ್ಲಾ ಜೊತೆಗೇ ಹೊರಡುತ್ತಿದ್ದಿತು. ಅಪರೋಕ್ಷಜ್ಞಾನಿಗಳಾಗಿದ್ದ ಅವರಿಗೆ ಲೌಕಿಕರೀತ್ಯಾ ತಮ್ಮ ಶಿಷ್ಯಮಂಡಲಿಗೆ ಸೇರಿದ್ದ ಪ್ರತಿಯೊಬ್ಬರ ಯೋಗ್ಯತೆಯೂ ಮಹತ್ವವೂ ಜನ್ಮಾಂತರ ಸಂಸ್ಕಾರಗಳೂ ತಿಳಿದಿದ್ದುವು. ಆ ಮಹಾಮಹಿಮರು ತಾವು ಭಕ್ತಾಗ್ರಣಿಯಾದ ಪ್ರಹ್ಲಾದನ ಅಂಶವೆಂಬುದನ್ನೂ ಆಗ್ಗೆ ತಮಗೆ ಗುರುಗಳಾಗಿದ್ದ ನಾರದರೇ ಈಗ ಪುರಂದರದಾಸರಾಗಿ ಲೋಕಶಿಕ್ಷೆಗಾಗಿ ಬಂದಿದ್ದಾರೆಂದೂ ಅರಿತಿದ್ದರು. ಅವರವರಲ್ಲಿ ಅಂತರ್ಯ ಪ್ರೀತಿ ವಿಶ್ವಾಸ ಗೌರವಗಳು ಅಜ್ಞಲೋಕಕ್ಕೆ ಅಗೋಚರವಾಗಿ ದಿನದಿನಕ್ಕೆ ಅಭಿವೃದ್ಧಿಯಾಗುತ್ತಿದ್ದುವು. ಶ್ರೀ ದಾಸರಾಯರು ಪೂಜಾಕಾಲದಲ್ಲಿ ಭಗವಂತನ ಮಹಿಮೆಗಳನ್ನೂ-ತಾವು ಆಚಾರ್ಯರಿಂದ ತಿಳಿದ ಮಧ್ವಮತದ ಸಿದ್ಧಾಂತಗಳನ್ನೂ ಹಾಡಿ ಪಾಡಿ ಭಗವಂತನನ್ನು ಸ್ತುತಿಸುವರು. ದಿವ್ಯ ಕಾವೀ ವಸ್ತ್ರಗಳನ್ನುಟ್ಟು ಶಿರೋವೇಷ್ಟನದಿಂದ ಅಲಂಕೃತರಾಗಿ ದ್ವಾದಶ ನಾಮ ಮುದ್ರೆಗಳು-ತುಲಸೀಮಣಿಯ ದಿವ್ಯ ಹಾರಗಳನ್ನು ಧರಿಸಿ ಕಾಲಿಗೆ ಗೆಜ್ಜೆಗಳನ್ನು ಕಟ್ಟಿಕೊಂಡು ಕೈಯಲ್ಲಿ ತಾಳ ತಂಬೂರಿಗಳನ್ನು ಹಿಡಿದು ಭಕ್ತಿಪಾರವಶ್ಯತೆಯಿಂದ ಪುಳಕಾಂಕಿತರಾಗಿ ಅರ್ಧ ತೆರದ ಕಣ್ಣುಗಳಿಂದ ಆನಂದಬಾಷ್ಪವನ್ನು ಸುರಿಸುತ್ತಾ ವೈವಾಹಿಕ ಮದವೆಯುಂಟಾದವರಂತೆ ನಲಿದು ನರ್ತಿಸುತ್ತಾ ಪಾಡುತ್ತಿದ್ದ ಶ್ರೀ ದಾಸರಾಯರ ಆ ಮಧುರವಾಣಿಯನ್ನು ಕೇಳಿ ಭಕ್ತಿಪರವಶನಾಗದ ಮಾನವನುಂಟೆ! ಹೀಗೆ ಅವರು ಯಾವ ಗೋಸ್ಕರವೂ ಅಲ್ಲದೆ ಯಾರ ಮೆಚ್ಚಿಗೆಗಾಗಿಯೂ ಅಲ್ಲದೆ, ಕೇವಲ ಹರಿಸೇವೆಯೆಂದು ನಾಲ್ಕು ಲಕ್ಷದ ಎಪ್ಪತ್ತೈದು ಸಹಸ್ರ ಪದಗಳು ಸುಳಾದಿಗಳು ಉಗಾಭೋಗಗಳು ಮುಂತಾದುವುಗಳನ್ನು ನುಡಿದಿರುವರೆಂದು ಪ್ರಸಿದ್ಧವಾಗಿದೆ. ಈ ಸಂಗತಿಯನ್ನು ಅವರ ಶಿಷ್ಯಶ್ರೇಷ್ಠರಾದ ವಿಜಯವಿಟ್ಠಲರು,

ರಾಗ .

ಬೇಸರದೆ ಭಜಿಸಿರೋ-ಪುರಂದರದಾಸರಾಯರ || ಪ ||
ಲಕ್ಷ್ಮೀಪತಿಯ ಪಾದದಲ್ಲಿ ಲಕ್ಷ್ಯವಿಟ್ಟು ವ್ಯಾಸರಾಯರ ||
ಶಿಕ್ಷೆಯಿಂದಂಕಿತವ ಕೈಗೊಳುತ | ಪೌಣಿಐದೂ |
ಲಕ್ಷ (೪||| ಲಕ್ಷ) ಪದ ಸೂಳಾದಿಪೇಳುತ್ತ | ಪ್ರತಿದಿವಸದಲ್ಲ ||
ಪಕ್ಷಿವಾಹನ ನಾಟ್ಯವಾಡುತ್ತ | ಅಪರೋಕ್ಷ ಪುಟ್ಟಲು |
ಮೋಕ್ಷಸ್ಥಾನಕೆಕರೆದೊಯ್ದು ಅ | ಧೋಕ್ಷಜನು ತಾ ರಕ್ಷಿಸಿದನು

ಹೀಗೆಂದು ನುಡಿದಿರುವರು.

ಬಿಸಿಲ್ಗುದುರೆಯಂತಿರುವ ಇಪ್ಪತ್ತನೆಯ ಶತಮಾನದ ಈ ಶುಷ್ಕ ನಾಗ ರಿಕತೆಯನ್ನು ಮೆಚ್ಚಿ ಬುದ್ಧಿಗೆಟ್ಟು ಓಡುತ್ತಿರುವ ನಮಗೆ ನಮ್ಮ ಪೂರ್ವಿಕ ಗ್ರಂಥರತ್ನಗಳು-ಮಹರ್ಷಿಗಳು ಸಾಧುಸಂತರು ಮುಂತಾದವರ ನುಡಿಗಳು ಮುಂತಾದುವುಗಳಲ್ಲಿ ನಂಬಿಕೆಯೂ ಆಸ್ಥೆಯೂ ಇಲ್ಲದಿರುವುದು ಆಶ್ಚರ್ಯ ವಲ್ಲ. ಆದರ ಸಾಧುಸಂತರ ಅಥವಾ ಪ್ರಕೃತ ದಾಸರ ಒಂದೊಂದು ನುಡಿ ಯೂ ಒಂದೊಂದು ಪದವೂ ಅಮೌಲ್ಯ ತತ್ವಗಳನ್ನು ಒಳಕೊಂಡು ಎಷ್ಟು ಅರ್ಥಗರ್ಭಿತವಾಗಿದೆ ಎಂಬುದು ನಮ್ಮ ಗಮನಕ್ಕೆ ಬಂದಿತೆಂದರೆ ನಾವು ಅಂತಹ ನಿಧಿಯನ್ನಿಟ್ಟುಕೊಂಡಿದ್ದೂ ಎಷ್ಟುಮಟ್ಟಿಗೆ ಅಜ್ಞರಾಗಿದ್ದೇವೆಂಬು ದನ್ನು ಮನಗಾಣಬಹುದು. ದಾಸರು ಯಾವ ಮಾತನ್ನೂ ವ್ಯರ್ಥವಾಗಿ ನುಡಿ ದಿಲ್ಲ. ಪ್ರತಿಯೊಂದು ನಾಮವೂ ಉದ್ದೇಶಪೂರ್ವಕವಾಗಿ ಲೋಕಶಿಕ್ಷೆಗಾಗಿ ನುಡಿದುದಾಗಿದೆಯಲ್ಲದೆ ಬೇರೆಯಲ್ಲ ಉದಾಹರಣೆಗಾಗಿ ಇಲ್ಲಿ ಕೆಲವನ್ನು ಕೊಡುತ್ತೇವೆ. ಭಾವುಕರು ಅವುಗಳ ಅರ್ಥಸಾಮರಸ್ಯವನ್ನು ತಮ್ಮ ಪ್ರಪಂಚ ಜೀವಿತದೊಂದಿಗೆ ಹಚ್ಚಿ ನೋಡಿದರೆ ದಾಸರ ಮನೋಭಾವವು ಗೋಚರ ವಾಗುವುದು. ''ಲೊಟ್ಟೆಲೊಡಲೊಟ್ಟೆ ಈ ಸಂಸಾರ'' ''ಕದವ ಮುಚ್ಚಿದಳಿ ದಕೋ ಗಯ್ಯಾಳಿಮೂಳಿ'' ''ಮಣ್ಣಿಂದಾ ಎಲ್ಲಾ ಮಣ್ಣಿಂದಾ'' ''ರೊಕ್ಕಾ ಎರಡಕ್ಕೆ ದುಃಖ'' ''ಸುಣ್ಣವಿಲ್ಲ ಭಾಗವತರೇ'' ''ಸ್ಥಳವಿಲ್ಲವೈ ಭಾಗವತರೇ'' ''ಕೂಳಿಗೆ ಬಿದ್ದಿದ್ದ ಬೋಳಿಗೆ ನಿನಗಿಷ್ಟು ಗೈಯ್ಯಾಳಿತನವು ಯಾತಕೆ?'' ''ಹಿಗ್ಗುವೆ ಯಾಕೋ ಈ ದೇಹಕ್ಕೆ'' ಮುಂತಾದುವು ಅವುಗಳಲ್ಲಿ ಕೆಲವು.—

ಅವರು ಯಾಚನೆಯಿಂದ ಜೀವಿಸುತ್ತಿದ್ದರು ನಿಜ. ಆದರೆ ಯಾಚನೆಯೇ ಅವರಿಗೆ ಧ್ಯೇಯವಾಗಿರಲಿಲ್ಲ. ಅವರು ಶಿಕ್ಷಕರಾಗಿದ್ದರಲ್ಲದೆ ಯಾಚಕರಾಗಿರಲಿಲ್ಲ. ಹೀಗೆ ಅಯಾಚಿತವೃತ್ತಿಯನ್ನು ಅವಲಂಬಿಸಿದ ಅವರು ಮಾನಾಪಮಾನಗಳನ್ನೂ ಸುಖದುಃಖಗಳನ್ನೂ ಸಮಾನವೆಂದು ಭಾವಿಸಿದ್ದರು. ಕೆಲಕೆಲವು ವೇಳೆ ಅಧಿಕವಾದ ದಾರಿದ್ರ್ಯದೋಷದಿಂದ ಅವರು ಕೌಪೀನಧಾರಿಗಳಾಗಿ ಯಾಚನೆಗೆ ಹೋಗಬೇಕಾಗಿ ಬರುತ್ತಿದ್ದಿತು. ಆಗಲೂ ಅವರು ಮನಶ್ಶಾಂತಿಗೆ ಕುಂದುತಾರದೆ, "ಲಂಗೋಟೀ ಬಹು ಒಳ್ಳೇದಣ್ಣಾ | ಒಬ್ಬರ ಹಂಗಿಲ್ಲದಂತೆ ಆಚಾರಕ್ಕೆ ಒದಗುವ | ಲಂಗೋಟಿ" ಎಂದು ನುಡಿಯಲು, ಅಂತಹ ಬಡತನದ ತಾಪತ್ರಯದಲ್ಲಿಯೂ ಅವರ ಮನಸ್ಸು ಲೌಕಿಕವನ್ನು ಬಿಟ್ಟು ಎಷ್ಟು ಮೇಲಂತಸ್ತಿನ ತೃಪ್ತಭಾವನೆಯನ್ನು ಹೊಂದಿದ್ದಿತೆಂದು ತಿಳಿಯಬಹುದಲ್ಲವೆ?

ಭಕ್ತಿಮಾರ್ಗವನ್ನು ಅವಲಂಬಿಸುವವರ ಅಹಂಕಾರ ಖಂಡನೆಗಾಗಿ ಅವರು ಕೆಲವು ನುಡಿಗಳನ್ನು ನುಡಿದಿರುವರು. ಅವೂ ಮನನಯೋಗ್ಯವಾಗಿದೆ

ಉಗಾಭೋಗ—ನಿನ್ನ ಭಕ್ತರೆಂದೆನಿಸಿದಜನರು ಭಂಗಪಡಲೀಬೇಕು | ದಿನ ಪ್ರತಿದಿನ ಅನ್ನ ಉದಕವಸ್ತ್ರಂಗಳು ಕಾಣದೆ ಇರಲೀಬೇಕು | ಬೆನ್ನ ಹತ್ತಿರೋಗಂಗಾಳು ಹತ್ತಿ ಇರಲೀಬೇಕು | ತನ್ನವರ ಕೈಯಿಂದ ಛೀ ಅನಿಸಿಕೊಳಲೀಬೇಕು | ಪನ್ನಂಗಶಯನ ಶ್ರೀ ಪುರಂದರ ವಿಠಲನಾಜ್ಞೆ ||

ಹರಿನೀ ಎನಗೆ ವಲಿವಂತೆಮಾಡು | ವಲಿದರೆ ತಿರಿವಂತೆಮಾಡು | ತಿರಿದರೆ ಆರು ನೀಡದಂತೆಮಾಡು | ಆರು ನೀಡಿದರ ಹೊಟ್ಟೆ ತುಂಬದಂತೆಮಾಡು || ಹೊಟ್ಟೆ ತುಂಬಿದರೆ ಬಟ್ಟೆ ದೊರೆಯದಂತೆಮಾಡು | ಬಟ್ಟೆ ದೊರೆತರೆ ಇಂಬು ದೊರೆಯದಂತೆಮಾಡು | ಇಂಬು ದೊರೆತರೆ ನಿನ್ನ ಪಾದಾರವಿಂದದಲ್ಲಿ ಸ್ಥಳ ಕೊಡೋ ಪುರಂದರ ವಿಟ್ಠಲಾ ||

ವ್ಯಾಸರಾಯರ ಸಂಸ್ಥಾನವು ಸಂಚಾರಕ್ಕೆ ಹೊರಟಾಗ್ಗೆ ಹೆಚ್ಚು ಕಡಮೆ ಶಿಷ್ಯವರ್ಗಕ್ಕೆ ಸೇರಿದ ಇವರಲ್ಲರೂ ಜೊತೆಗೇ ಇರುತ್ತಿದ್ದರು. ಆದರೆ ಅವರು ಒಂದು ಸ್ಥಳದಲ್ಲಿ ನಿಂತಾಗ್ಗೆ ಮಾತ್ರ ದಾಸರಾಯರು ಬೇರೆ ಬೇರೆ ಸ್ಥಳಗಳಿಗೆ ಹೋಗುವ ಪದ್ಧತಿಯೂ ಇತ್ತು. ಆ ಕಾಲದಲ್ಲೂ ವ್ಯಾಸರಾಯರ ತರುವಾಯ ದಾಸರು ಜೀವಿಸಿದ್ದ ಇಪ್ಪತ್ತು ವರ್ಷಗಳ ಕಾಲದಲ್ಲೂ

ದಾಸರಿಂದ ಕೆಲಕೆಲವು ಅದ್ಭುತ ಕಾರ್ಯಗಳು ನಡೆದುವೆಂದು ಉಕ್ತವಾಗಿದೆ. ಅವರ ಮಹಿಮೆಯನ್ನು ತಿಳಿಸುವ ಈ ಕಥೆಗಳು ದಾಸರಾಯರ ಭಕ್ತರಿಗೆ ಅವರಲ್ಲಿ ಭಕ್ತಿ ಗೌರವ ವಿಶ್ವಾಸಗಳನ್ನು ಹೆಚ್ಚಿಸಲು ಸಹಕಾರಿಗಳಾಗಬಹುದಾದುದರಿಂದ ಅವುಗಳಲ್ಲಿ ಕೆಲವನ್ನು ಸಂಗ್ರಹವಾಗಿ ಇಲ್ಲಿ ಹೇಳುತ್ತೇವೆ.

(೧) ಪುರಂದರದಾಸರು ಹಂಪೆಯಲ್ಲಿ ವ್ಯಾಸರಾಯರ ಸಾನ್ನಿಧ್ಯದಲ್ಲೇ ಬಹು ದಿನಗಳು ವಾಸವಾಗಿದ್ದರೂ ಆಗಾಗ್ಗೆ ತಾವು ಹುಟ್ಟಿದ ಸ್ಥಳವಾದ ಪುರಂದರಗಡಕ್ಕೂ ತಮ್ಮ ಇಷ್ಟದೈವವಾದ ವಿಟ್ಠಲಸ್ವಾಮಿಯು ನಲೆಸಿದ್ದ ಪಂಡರಪುರಕ್ಕೂ ಹೋಗಿ ಬರುವ ಪದ್ಧತಿಯಿತ್ತು. ಹಾಗೊಂದು ಸಾರಿ ಬಂದ್ದಾಗ್ಗೆ ಎಂದಿನಂತೆ ವಿಟ್ಠಲಸ್ವಾಮಿಯನ್ನು ಭಜಿಸಿ, ಅರ್ಚಿಸಿ, ಕೀರ್ತಿಸಿ ಊರಲ್ಲಿ ಯಾಚನೆಮಾಡಿ ಕುಟುಂಬಭರಣ ಮಾಡಿಕೊಂಡರು. ಆಗ ಆ ಊರಿನ ಪುರರಕ್ಷಕಾಧಿಪತಿಯಾಗಿದ್ದವನು ದುರ್ವೃತ್ತನಾಗಿ ತನ್ನ ಅಧಿಕಾರದ ದಂಭ ದರ್ಪಗಳಿಂದ ಪ್ರಜಾಕಂಟಕನಾಗಿದ್ದನು. ದಾಸರು ಈ ಸಂಗತಿಯನ್ನು ತಿಳಿದು ಅವನ ಮನೆಯಲ್ಲಿ ಭಿಕ್ಷವನ್ನು ಸ್ವೀಕರಿಸುತ್ತಿರಲಿಲ್ಲ. ಅವನೂ ಒಂದೆರಡು ಸಾರಿ ಬಲಾತ್ಕರಿಸುವಂತಹ ಮಾತಿನ ದೋರಣೆಯಿಂದ ಅವರನ್ನು ಆಹ್ವಾನಿಸಿದನು. ದಾಸರು ಅದಕ್ಕೆ ಬೆದರಿ ಅವನಲ್ಲಿ ಹೋಗಲಿಲ್ಲ. ಇದರಿಂದ ಅವನು ತನ್ನ ಕೀರ್ತಿಪ್ರತಿಷ್ಠೆಗಳಿಗೆ ಕೊರತೆಯಾಯಿತೆಂದು ಭಾವಿಸಿ ದಾಸರಿಗೆ ಆ ಗ್ರಾಮದಲ್ಲಿ ಯಾರೂ ಭಿಕ್ಷೆ ಹಾಕಬಾರದೆಂದು ಆಜ್ಞಾಪಿಸಿದನು. ಆದರೂ ದಾಸರು ಬೆದರದೆ ಅಕ್ಕಪಕ್ಕದ ಗ್ರಾಮಗಳಲ್ಲಿ ಯಾಚಿಸಿ ತಂದು ವಿಟ್ಠಲಸ್ವಾಮಿಯನ್ನು ಎಂದಿನಂತೆ ಸೇವಿಸಿಕೊಂಡಿದ್ದರು. ಹೀಗಿರಲು ಅವನು ಇವರ ಮೇಲಿನ ದ್ವೇಷವನ್ನು ತೀರಿಸಿಕೊಳ್ಳುವಂತಹ ಒಂದು ಸಂದರ್ಭ ದೊರೆಯಿತು.

ಒಂದಾನೊಂದು ದಿನ ದಾಸರು ಮಧ್ಯರಾತ್ರಿಯ-ಅವೇಳೆಯಲ್ಲಿ ಬಹಿಶ್ಶಂಕೆಗೆ ಹೋಗಬೇಕಾಯಿತು. ಆ ದಿನ ಅವರ ಶಿಷ್ಯನು ಎಂದಿನಂತೆ ನೀರಿಡುವುದನ್ನು ಮರೆತಿದ್ದನಾದ್ದರಿಂದ ದಾಸರು ಎದ್ದು ಆವಸರದಿಂದ ಸಿಟ್ಟಾಗಿ ಅವನನ್ನು ನಾಲ್ಕಾರುಸಾರ ಕೂಗಿದರು. ಕೊನೆಗೆ ಅವರು ಆ ಸಾವಕಾಶವನ್ನು ತಡೆಯಲು ಸಾಧ್ಯವಿಲ್ಲದೆ ಬಹಿಶ್ಶಂಕೆಯನ್ನು ತೀರಿಸಿಕೊಳ್ಳಬೇಕಾಯಿತು. ಆಗ ತಮ್ಮ ಶಿಷ್ಯನಂತೆಯೇ ಇದ್ದ ಒಬ್ಬ ವ್ಯಕ್ತಿಯು ಒಂದು ಚಿನ್ನದ ತಂಬಿಗೆಯಲ್ಲಿ ನೀರು ತಂದು ಹಿಡಿದು ನಿಂತಿದ್ದಂತೆ ಕಾಣಿಸಿತು. ಅದನ್ನು

ತೆಗೆದುಕೊಳ್ಳಲು ಅದು ತುಂಬಾ ಬಿಸಿಯಾಗಿ ಪ್ರಾಶನಕ್ಕೆ ಸರಿಯಾಗಿ ಒದಗದೆ ತೊಂದರೆಯಾಯಿತು ಇವೆಲ್ಲವುಗಳಿಂದ ಅತ್ಯಂತ ಕುಪಿತರಾಗಿ ದಾಸರು ಒರುತ್ತಾ ಅಲ್ಲೇ ನಿಂತಿದ್ದ ಆ ವ್ಯಕ್ತಿಯು ತಲೆಯಮೇಲೆ ಚನ್ನಾಗಿ ಹಣಿದು ತರುವಾಯ ಮತ್ತೆ ಮಲಗಿಕೊಂಡರು. ಇತ್ತ ಆ ವ್ಯಕ್ತಿಯು ದಾಸರ ವೇಷದಿಂದ ಆ ಊರಿನಲ್ಲಿದ್ದ ಒಬ್ಬ ವೇಶ್ಯೆಯ ಮನೆಗೆ ನಡೆದು ಆಕೆಯೊಂದಿಗೆ ಸರಸಸಲ್ಲಾಪನಮಾಡಿ ವಿಟ್ಠಲಸ್ವಾಮಿಯ ಹಸ್ತಕಡಗ ಒಂದನ್ನು ಆಕೆಗೆ ಕೊಟ್ಟು ಹೊರಟುಹೋದನು. ಮಾರನೆಯ ಪ್ರಾತಃಕಾಲ ದೇವರ ಹಸ್ತ ಕಡಗವು ಕಳವಾಗಿದೆಯೆಂಬ ವಾರ್ತೆಯು ಊರಲ್ಲೆಲ್ಲಾ ಹಬ್ಬಿತು ಅಷ್ಟರಲ್ಲಿ ಆ ಕಡಗವನ್ನೇ ಕೈಯಲ್ಲಿಟ್ಟುಕೊಂಡು ಆ ವೇಶ್ಯೆಯೂ ದೇವಸ್ಥಾನಕ್ಕೆ ಬಂದಳು. ಅವಳನ್ನು ಹಿಡಿದು ನಿರ್ಬಂಧಿಸಿ ಅವಳಿಗೆ ಅದು ಎಲ್ಲಿಂದ ಬಂದಿತೆಂದು ಕೇಳಲು ಅವಳು ಪುರಂದರದಾಸರು ತನ್ನಲ್ಲಿಗೆ ಹಿಂದಿನ ರಾತ್ರಿ ಬಂದಿದ್ದರೆಂದೂ ಅವರೇ ಅದನ್ನು ತನಗೆ ಕೊಟ್ಟು ಹೋದರೆಂದೂ ಹೇಳಿದಳು. ಮುಂದೆ ಕೇಳಬೇಕೇ! ಅವರಮೇಲಿನ ದ್ವೇಷದಿಂದ ಉರಿದು ಬೀಳುತ್ತಿದ್ದ ಆ ಪುರಾಧ್ಯಕ್ಷನು ಒಡನೆ ದಾಸರನ್ನು ಹಿಡಿಸಿ ದೇವಸ್ಥಾನದಲ್ಲಿದ್ದ ಒಂದು ಕಂಭಕ್ಕೆ ಕಟ್ಟಿಸಿ ಚನ್ನಾಗಿ ಪ್ರಹರಿಸಲು ಆಜ್ಞೆ ಮಾಡಿದನು. ಸೇವಕರು ತಮ್ಮ ಒಡೆಯನ ಆಜ್ಞೆಯಂತೆ ಮಾಡುತ್ತಿರಲು ಕೆಲಹೊತ್ತು ದಾಸರು ಏನೂ ತಿಳಿಯದೆ ಮಂಕರಂತಿದ್ದು-ಹೀಗೇಕಾದುದೆಂದು ಧ್ಯಾನಿಸಿ ನೋಡಲು ನಡೆದ ಸಂಗತಿಯು ವ್ಯಕ್ತವಾಯಿತು. ಆಗಲವರು ಈ ಪದವನ್ನು ಹಾಡಿ ವಿಟ್ಠಲನನ್ನು ಬೇಡಿಕೊಂಡಿರುವರು.

ರಾಗ. ತಾಳ.

ಮುಯ್ಯಕ್ಕೆ ಮುಯ್ಯಿ ತೀರಿತು | ಜಗ | ದಯ್ಯ ವಿಜಯ್ಯ ಸಾಹಯ್ಯ ಪಂಡರಿರಾಯಾ || ಪ || ಸಣ್ಣವನೆಂದು ನಾ ನೀರುತಾರೆಂದರ | ಬೆಣ್ಣೆ ಕಳ್ಳ ಕೃಷ್ಣ ಮರವುಮಾಡೀ | ಚಿನ್ನದ ಗಿಂಡಿಲ ನೀರತಂದಿತ್ತರೆ | ಕಣ್ಣುಕಾಣದೆನಾ ಹಣಿದೆ ಪಂಡರಿರಾಯಾ || ೧ || ಎನ್ನ ಪಸರುಮಾಡಿ ನೂಳೆಗೆ ಕಂಕಣ | ವನ್ನು ನೀನಿತ್ತೆಯೊ ನಿಜರೂಪದೀ || ಎನ್ನ ಪರರೊಳಗೆ ಭಂಡನಮಾಡಿ ಈ | ಮಾನವರೊಳಗೆಲ್ಲ ಮಾನವಕೊಂಡಿ ಪಂಡರಿರಾಯಾ || ೨ || ಭಕ್ತವತ್ಸಲನೆಂಬೊ ಬಿರುದು ಬೇಕಾದರ | ಭಕ್ತರಾಧೀನ ನೀ ನಿರಬೇಕವೇ || ಯುಕ್ತಿಲ ನಿನ್ನಂಥ ದೇವರನಾಕಾಣೆ | ಮುಕ್ತೀಶ ಪುರಂದರ ವಿಠಲ ಪಂಡರಿರಾಯಾ || ೩ ||

ಎಂದು ಪಾಡಿದರು ಆದರೂ ಬಂಧನವು ನಿವೃತ್ತಿಯಾಗದಿರಲು ದಾಸರು ಹುಸಿ ಕೋಪದಿಂದ,

ಉಗಾಭೋಗ —ಆಸೆಯನ್ನು ಕಾಯುವಾಗ ಜ್ಞಾನವಿದ್ದದ್ದು ಏನು! ನಾನು ವದರಲು ಕೇಳದಿದ್ದದ್ದು ಏನು! ದಾನವಾಂತಕ ದೀನರಕ್ಷಕ ನೆಂಬ ಮಾನ ಉಳಿಸಿಕೊಳ್ಳೊ ಪುರಂದರ ವಿಟ್ಠಲ ||

ಎಂದು ಹಾಡಲು ಒಡನೆ ಅವರ ಕಟ್ಟುಗಳೆಲ್ಲವೂ ಚಟಚಟನೆಂದು ಕಿತ್ತುಹೋದುವು! ಎಲ್ಲರಿಗೂ ನಿಜ ಸಂಗತಿ ತಿಳಿದು ದಾಸರ ಮಹಿಮೆಗಾಗಿ ಪರಮಾಶ್ಚರ್ಯಪಟ್ಟರು ಪುರಾಧ್ಯಕ್ಷನು ಅವರ ಪಾದಕ್ಕೆ ಬಿದ್ದು ತನ್ನ ಅಪರಾಧವನ್ನು ಮನ್ನಿಸಬೇಕೆಂದು ಬೇಡಿಕೊಂಡನು ದಾಸರು ಅವನನ್ನು ಮನ್ನಿಸಿ.— "ಇರಬೇಕು ನಿಂದಕರು ಸಜ್ಜನರಿಗೇ!" ಎಂಬ ಪದವನ್ನು ಹಾಡಿರುವರು ಇದರ ನುಡಿಗಳಲ್ಲಿ.—'ನಾಯಿ ಹಂದಿಗಳಿಂದ ಗ್ರಾಮವು ಪರಿಶುದ್ಧವಾಗುವಂತೆ ಸಜ್ಜನರ ಪಾಪವಾದರೂ ನಿಂದಕರಿಂದ ಪರಿಹಾರವಾಗುತ್ತದೆಂದೂ' "ತಾಯಿಯು ತನ್ನ ಮಗುವಿನ ಮಲವನ್ನ ಅಸಹ್ಯಪಟ್ಟು ಎಡಗೈಯಿಂದ ಶುದ್ಧಗೊಳಿಸುತ್ತಿದ್ದರ, ನಿಂದಕರು ಸಜ್ಜನರ ಪಾಪವೆಂಬ ಮಲವನ್ನು ಬಹು ಸಂತೋಷದಿಂದ ತಮ್ಮ ನಾಲಿಗೆಯಿಂದಲೇ ಶುದ್ಧಗೊಳಿಸಿ ಅವರನ್ನು ಪಾವನರನ್ನಾಗಿ ಮಾಡುತ್ತಾರಾದ್ದರಿಂದ ಸಜ್ಜನರಿಗೆ ನಿಂದಕರು ಇರಬೇಕು" ಎಂದು ನುಡಿದಿರುವರು. ಈ ಸಂದರ್ಭವನ್ನು ಜ್ಞಾಪಿಸಲು ಫಂಡರಾಪುರದ ವಿಟ್ಠಲಸ್ವಾಮಿಯ ಆಲಯದಲ್ಲ ಪುರಂದರನ ಕಂಭವೆಂದು ಒಂದು ಕಂಭವಿರುವುದು ಅದಕ್ಕೆ ಬೆಳ್ಳಿಯ ತಗಡನ್ನು ಹೊದ್ದಿಸಿ ಈಗಲೂ ಪೂಜಿಸುತ್ತಿರುವರು.

ತರುವಾಯ ಫಂಡರಾಪುರದಲ್ಲ ದಾಸರ ಕೀರ್ತಿ ಪ್ರಸಿದ್ಧಿಗಳು ವಿಶೇಷವಾಗಿ ಹಬ್ಬಲು ಯಾಚನೆಯಲ್ಲಿ ದಕ್ಷಿಣೆ ದಾನಗಳೂ-ಇತರ ಪದಾರ್ಥಗಳೂ ಅತಿಶಯವಾಗಿ ದೊರಯಲಾರಂಭವಾದುವು. ದಾಸರಾದರೋ ಬಂದುದೆಲ್ಲವನ್ನೂ ಮಹಾ ಸಂಭ್ರಮದಿಂದ ಆ ದಿನವೇ ಬ್ರಾಹ್ಮಣ ಭೋಜನಾದಿಗಳಿಗಾಗಿ ಖರ್ಚು ಮಾಡಿ ವಿಶೇಷ ಅನ್ನದಾನವನ್ನು ನಡೆಯಿಸಲು ಆರಂಭಿಸಿದರು. ಆಗ ಶಿಷ್ಯರು ಲೋಭಬುದ್ಧಿಯಿಂದ ನಾಳೆಗೆಂದು ಇಡಲು ಪ್ರಯತ್ನಿಸುತ್ತಿರಲು ದಾಸರಾಯರು,

ಉ ಗಾ ಭೊ ೯ ಗ —ಹರಿಯ ಕರುಣದೊಳಾದ ಭಾಗ್ಯವ || ಹರಿಸವು ಪ ಣೆ ಮಾಡಿ ಬದುಕಿರೊ || ಕೆರೆಯ ನೀರನು ಕೆರಗೆಚಲ್ಲೀ | ವರವ ಪಡೆದವ ರಂತೆ ಕಾಣಿರೊ || ಸಿರಿಪುರಂದರ ವಿಠಲರಾಯನ | ಚರಣಕಮಲವ ನಂಬಿ ಭಜಿಸಿರೊ || ಹೀಗೆಂದು ನುಡಿದು ಅವರ ಮನಸ್ಸಿನ ಕ್ಷುದ್ರಭಾವವನ್ನು ಪರಿಹರಿಸಿದರು.

(೨) ಎಷ್ಟು ಕೃಪಣರೀತಿಯಿಂದ ಇದ್ದರೂ ಐಶ್ವರ್ಯಸ್ಥಿತಿಯನ್ನು ಅನುಭವಿಸಿದ್ದ ಲಕ್ಷ್ಮೀಬಾಯಿಯು ಈ ಕಷ್ಟ ತಾಪತ್ರಯಗಳಿಗಾಗಿ ನೊಂದು ಸಂಕಟಪಡುತ್ತಿರಲು ಒಂದು ದಿನ ಒಂದು ಅದ್ಭುತ ನಡೆಯಿತು. ಎಂದಿನಂತೆ ಶಿಷ್ಯರು ನಿತ್ಯಯಾತ್ರೆಗೆ ಹೋಗಿದ್ದರು. ಆಗ ದಾಸರ ಪತ್ನಿಯು ಹರಿದು ಚಿಂದಿಯಾಗಿ ಹೋಗಿದ್ದ ತಮ್ಮ ಸೀರೆಯನ್ನು ಹೊಲಿದುಕೊಳ್ಳುತ್ತಾ ಕುಳಿತಿರಲು ಯಾರೋ ಬಂದು "ಅಮ್ಮಾ ದಾಸರೆಲ್ಲಿ, ದಾಸರಲ್ಲ" ಎಂದು ಕೂಗಿದಂತಾಯಿತು. ತಮ್ಮ ಹಿಂದಿನ ಸ್ಥಿತಿಯನ್ನೂ-ಮನೆ ಬಾಗಿಲು ಆಸ್ತಿಪಾಸ್ತಿ ಮುಂತಾದ ವಿಚಾರಗಳನ್ನೂ ಈಗಿನ ಸ್ಥಿತಿಯನ್ನೂ ಕುರಿತು ಯೋಚಿಸಿಕೊಳ್ಳುತ್ತಿದ್ದ ಆಕೆಗೆ ಅದು ಕೇಳಿಸದಿರಲು ಅದಕ್ಕೆ ಪ್ರತ್ಯುತ್ತರ ಕೊಡಲಿಲ್ಲ. ಆ ವ್ಯಕ್ತಿಯು ಪುನಃ 'ಅಮ್ಮಾ ದಾಸರಲ್ಲಿ?" ಎಂದನು ಆಗ ತಲೆಯೆತ್ತಿ ಯಾರೆಂದು ನೋಡುವಲ್ಲಿ ಕೈಯಲ್ಲಿದ್ದ ಸೂಜಿಯು ಆಯತಪ್ಪಿ ಉಗುರಿನ ಸಂದಿನಲ್ಲಿ ಚುಚ್ಚಿತು. ಅದರಿಂದಲೂ ದೀರ್ಘ ದಾರಿದ್ರ್ಯ ರೋಗದಿಂದಲೂ ನೊಂದಿದ್ದ ಆಕೆಯು 'ಆ' ಎಂದುಕೊಂಡು "ಯಾಕೆ ಹಾಗೆ ಕೂಗಿಕೊಳ್ಳುತ್ತೀಯೋ? ದಾಸರು ಆ ವಿಟ್ಠಲನ ಹೆಣಕ್ಕೆ ಹೊಡೆದುಕೊಳ್ಳುವುದಕ್ಕೆ ಹೋಗಿದ್ದಾರೆ" ಎಂದು ನುಡಿದಳು. ಒಡನೆ ಆ ವ್ಯಕ್ತಿಯು ಮಾಯವಾಯಿತು. ಉತ್ತರಕ್ಷಣದಲ್ಲೇ ಅವರಿದ್ದ ಆ ಮನೆಯು ದಿವ್ಯ ಮಂದಿರದಂತಾಯಿತು. ಎಲ್ಲಿ ನೋಡಿದರೂ ಉತ್ತಮವಾದ ಪಾತ್ರೆ ಪದಾರ್ಥಗಳು, ವಿಶೇಷ ಬೆಲೆಯ ವಸ್ತ್ರವಡವೆಗಳು ಮುಂತಾಗಿ ಸರ್ವ ಸೌಭಾಗ್ಯದಿಂದ ಆ ಮನೆಯು ಲಕ್ಷಾಧಿಪತಿಯ ಮನೆಯಂತೆ ಶೋಭಿಸತೊಡಗಿತು. ನಿತ್ಯಯಾತ್ರೆಯಿಂದ ಬಂದ ಶಿಷ್ಯರೂ ದೇವಾಲಯದಿಂದ ಬಂದ ದಾಸರೂ ತಮ್ಮ ಪೂರ್ವದ ಮನೆಯೆಲ್ಲೆಂದು ಕಾಣದೆ ಗಾಬರಿಯಿಂದ ಅಲ್ಲಲ್ಲಿ ಹುಡುಕಿ ಕೊನೆಗೆ ಕ್ಷಣಮಾತ್ರದಲ್ಲಾದ ಈ ವ್ಯತ್ಯಾಸವನ್ನು ಕಂಡು ಎಲ್ಲರೂ ಗಾಬರಿಯಾದರು. ಆಗ ಶ್ರೀ ದಾಸರಾಯರು "ಛೀ

ಛೀ ಇದು ತುಚ್ಛವಾದುದೆಂದು ಬಿಟ್ಟಿರುವಾಗ್ಗೆ ಪುನಃ ಇದನ್ನು ಕೇಳ ಬಹುದೇ?" ಎಂದುಕೊಂಡು ತಮ್ಮ ಸ್ವಾರ್ಜಿತವಲ್ಲದ ಅದನ್ನು ದಾನ ಕೊಡುವುದಕ್ಕೂ ತಮಗೆ ಬಾಧ್ಯವಿಲ್ಲವೆಂದು ತಿಳಿದು ದೂರದಿಂದಲೇ ಆ ಮೂಗುತಿ ಮೇಲೊಂದು ತುಲಸಿ [illegible] ಹಾಕಿ ಕೃಷ್ಣಾರ್ಪಣ ಎಂದುಬಿಟ್ಟರು. ಮತ್ತು ಪತ್ನಿಯನ್ನು ಕುರಿತು,

'ಈಸಬೇಕು ಇದ್ದು ಜೈಸಬೇಕು | ಹೇಸಿಕೆ ಸಂಸಾರದಲ್ಲಿ ಆಸೆಲೇಸ ಪಡದ್ಹಾಂಗೆ ||' ಎಂಬ ಪದವನ್ನು ಹೇಳಿ ಸಮಾಧಾನಗೊಳಿಸಿದರು.

(೩) ಹಿಂದೆ ಹೇಳಿದಂತೆ ಅಪರೋಕ್ಷ ಜ್ಞಾನಿಗಳಾಗಿದ್ದ ಶ್ರೀ ವ್ಯಾಸರಾಯರು ಪುರಂದರ ದಾಸರ ಚೇತನದ ಪಾವಿತ್ರ್ಯತೆಯನ್ನು ತಿಳಿದುಕೊಂಡು ಅವರಿಗೆ ಎಲ್ಲರಿಗಿಂತಲೂ ಮೊದಲು ತೀರ್ಥಕೊಡುತ್ತಾ ಅವರು ಬರುವವರೆಗೆ ತಾವು ಭೋಜನಕ್ಕೆ ಕುಳ್ಳಿರದೆ ಗೌರವಿಸುತ್ತಿದ್ದರು ಮತ್ತು ಅವರು ಪದಗಳನ್ನು ಬರೆದ ಕಾಗದಗಳನ್ನು ಸಂಸ್ಕೃತದ ಮಧ್ವಸಿದ್ಧಾಂತ ಗ್ರಂಥಗಳ ಮೇಲಿಟ್ಟು **"ಪುರಂದರೋಪನಿಷತ್"** ಎಂದು ಗೌರವಿಸಿ ಪೂಜಿಸುತ್ತಿದ್ದರು. ಅವರ ಆಶ್ರಯದಲ್ಲಿದ್ದ ಕೇವಲ ಅಕ್ಷರ ಪಂಡಿತರಾದ ಕೆಲಮಂದಿ ಶುಂಠರಿಗೆ ಆದ ಸರಿಬೀಳದೆ ಪ್ರಾಕೃತ ಭಾಷೆಯಲ್ಲಿ ಬರೆದ ಹರುಕು ಕಾಗದಕ್ಕೆ ಅಷ್ಟು ಗೌರವವೇ ಎಂದು ದ್ವೇಷಿಸುತ್ತಾ ಅದಕ್ಕಾಗಿ ಸ್ವಾಮಿಗಳನ್ನು ನಿಂದಿಸುತ್ತಿದ್ದರು ಮತ್ತು ದಾಸರನ್ನೂ ಬಹಳವಾಗಿ ದ್ವೇಷಿಸುತ್ತಿದ್ದರು ಅಲ್ಲದೆ ಸಾಧ್ಯವಿದ್ದಂತೆಲ್ಲಾ ಇಲ್ಲ-ಸಲ್ಲದ ಚಾಡಿಗಳನ್ನು ಹೇಳಿ ಸ್ವಾಮಿಗಳವರ ಮನಸ್ಸನ್ನು ಕೆಡಿಸಲು ಪ್ರಯತ್ನಿಸುತ್ತಿದ್ದರು ಹೀಗಿರಲು ಒಂದುಸಾರಿ ಸಾಧನೆ ದ್ವಾದಶಿಯು ಪ್ರಾಪ್ತವಾಯಿತು. ಮಠದಲ್ಲಿ ಅರುಣೋದಯ ಕಾಲಕ್ಕೆ ಮುಂಚಿತವಾಗಿಯೇ ದೇವರ ಪೂಜೆಯೂ ಅಡಿಗೆ ನೈವೇದ್ಯಗಳೂ ಸಾಗಿವೆ ವಿದ್ವಾಂಸರೂ ಆಚಾರ್ಯರೂ ಎಲ್ಲರೂ ಸ್ನಾನ ಮಾಡಿ ಸಿದ್ಧರಾಗಿದ್ದಾರೆ. ಆದರೆ ಪುರಂದರದಾಸರು ದಶಮಿಯ ದಿನ ಮಧ್ಯಾಹ್ನ ಊಟ ಮಾಡಿ ಮಲಗಿದವರು ಇನ್ನೂ ಏಳಲೇ ಇಲ್ಲ! ಆ ಸಂಗತಿಯು ಸ್ವಾಮಿಗಳಿಗೆ ಬಹು ಹೇಳನರೀತಿಯ ವಾಕ್ಯಗಳಿಂದ ತಿಳಿಸಲ್ಪಟ್ಟಿತು. ಅವರು ಧ್ಯಾನದೃಷ್ಟಿಯಿಂದ ನೋಡಿ ದಾಸರು ಮಾನಸಪೂಜಾ ಮಗ್ನರಾಗಿದ್ದಾರೆಂದು ತಿಳಿದು ಆದರ ಯಾರೂ ಆ ಸಂಗತಿ

ಯನ್ನು ತಿಳಿಸದೆಯೂ ಪುನಃ ಆ ವಿಷಯವನ್ನು ಕುರಿತು ಪ್ರಶ್ನಿಸದೆಯೂ ಸುಮ್ಮನಿದ್ದುಬಿಟ್ಟರು. ಆದರೆ ಇತರರು ಸುಮ್ಮನಿರುವರೇನು? ಹೋಗಿ, ಕೂಗಿ, ಗಲಭೆಮಾಡಿ, ಕೊನೆಗೆ ಮೈಮುಟ್ಟಿ ಅಲುಗಾಡಿಸಿ ಅಂತೂ ದಾಸರನ್ನು ಎಬ್ಬಿಸಿಬಿಟ್ಟರು. ದಾಸರು 'ಅಪ್ಪಾ ಮಂಗಳಾರತಿಯಾಗುತ್ತಿದ್ದ ಹೊತ್ತಿನಲ್ಲಿ ಏಕಪ್ಪ ತೊಂದರೆಪಡಿಸಿರಿ' ಎಂದುಕೊಳ್ಳುತ್ತಾ ಎದ್ದುಬಂದರು. ಅಷ್ಟರಲ್ಲ ಮಠದಲ್ಲಿ ಎಲ್ಲವೂ ಮುಗಿದು ಎಲೆಗಳನ್ನು ಹಾಕಿರಲು, ಬಂದವರು ಹಾಗೆಯೇ ಭೋಜನಕ್ಕೆಂದು ಮಣೆಯ ಮೇಲೆ ಕುಳಿತರು. ಸ್ವಾಮಿಗಳವರು ಹಾಗೆ ಏಕೆಂದು ಪ್ರಶ್ನಿಸದೆ ತೀರ್ಥವನ್ನು ಕೊಟ್ಟರು. ಅದನ್ನು ಕಂಡ ಮೇಲಂತೂ ಅಲ್ಲಿದ್ದ ಅವರ ದ್ವೇಷಿಗಳಿಗೆ ದೇಹಮಧ್ಯಾಂತವೂ ಕಾಯ್ದು ಹೋಯಿತು! "ನಿದ್ರೆಯಿಂದೆದ್ದು ಮುಖವನ್ನು ಸಹ ತೊಳೆಯದೆ ಊಟ ಮಾಡುವ ಮಾತ್ಯನಿಗೆ ಅಗ್ರ ಮರ್ಯಾದೆಯೇ?" ಎಂದು ಹಾರಾಡಿದರು ಆದರೆ ಏನೂ ಫಲವಾಗ ಲಿಲ್ಲ ಊಟವಾಯಿತು. ಕೊನೆಗೆ ದಾಸರು ನದಿಯ ಮಧ್ಯಕ್ಕೆ ನಡೆದು ಸ್ನಾನ ಮಾಡಿ ಅಲ್ಲಿ ತಾವು ಉಂಡ ಪದಾರ್ಥಗಳೆಲ್ಲಾ ಒಂದೊಂದನ್ನಾಗಿ ಪ್ರತ್ಯೇಕ ಪ್ರತ್ಯೇಕವಾಗಿ ತೆಗೆದು ಕಲ್ಲುಬಂಡೆಯ ಮೇಲಿಟ್ಟು ಕ್ರಮವಾಗಿ ದೇವತಾರ್ಚನೆ ಮಾಡಿಕೊಂಡು, ಆಗತಾನೆ ಮಾಡಿದ ಬಿಸಿಬಿಸಿಯಾದ ಅಡಿಗೆಗಳಂತಿದ್ದ ಆ ಪದಾರ್ಥಗಳನ್ನು ಪುನಃ ಸ್ವಾಮಿಗೆ ನಿವೇದಿಸಿದರು ದ್ವಾದಶಿಯ ಭೋಜನಾ ನಂತರ ಗ್ರಾಮ ಪ್ರದಕ್ಷಿಣೆಗೆಂದು ಆ ಋಷ್ಯಮೂಕಪರ್ವತ ಪ್ರಾಂತದಲ್ಲಿ ಹೋಗುತ್ತಿದ್ದ ಮೇಲ್ಕಂಡ ದಾಸರ ದ್ವೇಷಿಗಳು ಈ ದೃಶ್ಯವನ್ನು ಕಂಡು ಪರಮಾಶ್ಚರ್ಯಪಟ್ಟು ಅವರ ಮಹಿಮೆಗಾಗಿ ಅದ್ಭುತಪಟ್ಟು ಅಲ್ಲಿಂದ ಬಂದು ಸಾಷ್ಟಾಂಗವಾಗಿ ನಮಸ್ಕರಿಸಿ ತಮ್ಮ ಅಪರಾಧವನ್ನು ಕ್ಷಮಿಸ ಬೇಕೆಂದು ಬೇಡಿಕೊಂಡರು.

ಈ ಸಂಗತಿಯು ವ್ಯಾಸರಾಯರಿಗೂ ತಿಳಿಯಿತು ಆಗ ಒಬ್ಬೊಬ್ಬರೂ ಒಂದೊಂದಾಗಿ ಅವರ ಮಹಿಮೆಯನ್ನು ಕುರಿತು ಸ್ವಾಮಿಗಳವರಲ್ಲಿ ಹೇಳತೊ ಡಗಿದರು. ಆಗ ದಾಸರಾಯರ ಎರಡನೆಯ ಮಕ್ಕಳಾದ 'ಗುರುಪುರಂದರ'ರು "ಗಂಗೆಗೌತಮಿ ತುಂಗೆಭದ್ರೆ ಮೊದಲಾದವರು | ಶೃಂಗಾರದಿಂದನಮ್ಮಂಗ ಳಾದೊಳು | ರಂಗವಾಲಿಕ್ಕುವುದು | ಮಂಗಳಾವ ಮಾಡುವುದು | ರಂಗಾ ಳಿಂದಾಲಕಂಡೆ ||" ಎಂದು ವ್ಯಾಸರಾಯರಲ್ಲಿ ವಿಜ್ಞಾಪಿಸಿದರು.

ತರುವಾಯ ಕೆಲವು ದಿನಗಳಲ್ಲಿ ಶ್ರೀ ವ್ಯಾಸರಾಯರು ದೇಹತ್ಯಾಗ ಮಾಡಿದರು ಮುಂದೆ ಶ್ರೀ ಪುರಂದರ ದಾಸರಾಯರು ಇಪ್ಪತ್ತು ವರ್ಷಕಾಲ ಜೀವಿಸಿದ್ದು ಭಾರತದೇಶದ ಸಮಸ್ತ ತೀರ್ಥಕ್ಷೇತ್ರಗಳಿಗೂ ಕರ್ನಾಟಕ ದೇಶದ ಪ್ರತಿಯೊಂದು ಪ್ರದೇಶಕ್ಕೂ ಹೋಗಿ, ಅಲ್ಲಲ್ಲದ್ದ ತೀರ್ಥ-ಕ್ಷೇತ್ರ-ಮೂರ್ತಿಗಳನ್ನು ಮನಸಾರ ಹೊಗಳಿ, ಗೀತೆಗಳನ್ನು ಪಾಡಿ ಮಾನವ ಲೋಕವನ್ನು ಉದ್ಧರಿಸಿದರು. ದಾಸರು ತಮ್ಮಿಂದ ಪ್ರಾರಂಭವಾದ ದಾಸಕೂಟದ ಈ ಸಂಘವು ತಮ್ಮ ತರುವಾಯ ಅನಾಯಕವಾಗಿ ವ್ಯರ್ಥವಾಗಬಾರದೆಂದು ಯೋಚಿಸಿ ತನ್ನ ನಾಲ್ಕು ಮಂದಿ ಮಕ್ಕಳನ್ನು ಅದರ ರಕ್ಷಕರಾಗಿ ನಿಯಮಿಸಿದರು ಅವರು ಈಗಿನ **"ಬಾಲಭಟ"** ಸಂಘದಂತೆಯೇ ತರುಣ ಸಂಘವಾಗಿ ಏರ್ಪಟ್ಟು ದಾಸರು ಹಾಡಿದ ಪದಗಳು, ಸುಳಾದಿಗಳು, ಉಗಾಭೋಗಗಳು ಮುಂತಾದ ಮಧ್ವಸಿದ್ಧಾಂತ ತತ್ವಗಳನ್ನು ಕನ್ನಡ ದೇಶದ ದಶದಿಕ್ಕುಗಳಲ್ಲೂ ಹರಡಿದರು. ಅಲ್ಲದೆ ತಾವೂ ಅನೇಕ ಪದಗಳನ್ನು ರಚಿಸಿದರು.

ಈಗ ದೊರೆಯುತ್ತಿರುವ " **ಪುರಂದರ ದಾಸರ ಪದಗಳು** " ಎಂಬ ಪುಸ್ತಕಗಳಲ್ಲಿ ದಾಸರಿಂದಲೇ ರಚಿತವಾದ ಪದಗಳಾವುವು. ಅವರ ಮಕ್ಕಳಿಂದ ರಚಿತವಾದುವು ಯಾವುವು ಎಂಬ ಭೇದವನ್ನು ತಿಳಿಯಲಾರದೆ ಅನೇಕರು ಎಲ್ಲವೂ ಪುರಂದರದಾಸ ಕೃತವೆಂದೇ ಭಾವಿಸಲು ಅವಕಾಶವುಂಟು. ಈ ಸಂದರ್ಭದಲ್ಲ ಈ ಸೂಚನೆಯನ್ನು ಗಮನಿಸುವುದು ಸೂಕ್ತವೆಂದು ತೋರುವುದು. ಅವರಿಗಿದ್ದ ನಾಲ್ಕು ಮಂದಿ ಮಕ್ಕಳೂ ಹಿರಿಯರಿಂದ ಅನುಕ್ರಮವಾಗಿ 'ವರದ ಪುರಂದರ ವಿಠಲ' 'ಗುರು ಪುರಂದರ ವಿಠಲ' 'ಮಧ್ವಪತಿ ಪುರಂದರ ವಿಠಲ' 'ಅಭಿನವ ಪುರಂದರ ವಿಠಲ' ಎಂಬ ಅಂಕಿತದಿಂದಲೂ, ಮಗಳು ತಂದೆ ಪುರಂದರ ವಿಠಲ' ಎಂತಲೂ, ಪತ್ನಿಯು 'ಶ್ರೀ ಪುರಂದರ ವಿಠಲ' ಎಂಬದಾಗಿಯೂ ಮತ್ತು ಭೃತ್ಯನು 'ವನೆಯ ಪುರಂದರ ವಿಠಲ' ಎಂಬ ಅಂಕಿತವನ್ನಿಟ್ಟುಕೊಂಡೂ ಭಗವಂತನನ್ನು ಹೊಗಳಿ ಪಾಡಿದರೆಂದು ತಿಳಿಯಬರುತ್ತದೆ.

ಹೀಗೆ ಶ್ರೀ ದಾಸರಾಯರೂ ಅವರ ಸಂಪೂರ್ಣ ಕುಟುಂಬವೂ ಕೇವಲ ಭಗವದಧೀನರಂತೆ ಲೌಕಿಕವನ್ನು ಸಾಗಿಸುತ್ತಾ ತಮ್ಮ ಅನೇಕ

ಮಹಿಮೆಗಳಿಂದಲೂ, ಪಾಡಿದ ಅನೇಕ ಭಗವನ್ನಾಮಗಳಿಂದಲೂ ಜಗತ್ತಿನ ಪಾಪರಾಶಿಯನ್ನು ನೀಗಿಸುತ್ತಾ ನಿರ್ಮಮರಾಗಿ ಪ್ರಪಂಚದಲ್ಲಿ ವಾಸಿಸಿದರು.



# ಉ ಪ ಸಂ ಹಾ ರ



ನಿನ್ನ ಮಹಿಮೆಗಳನ್ನು | ಬಣ್ಣಿಸಲು ಎನ್ನಳವೆ | ಘನ್ನ ಕಾರುಣ್ಯ ನಿಧಿಯೇ | ನಿನ್ನ ದಾಸರ ಸೂನುವೆನ್ನುತ್ತ | ಕೃಪೆಗೈದು | ಎನ್ನೊಳಗೆ ಇದ್ದು ನುಡಿಯೇ | ಧನ್ಯನಾದೆನು ನಾನು | ನಿನ್ನ ವರ ನುಡಿಗ್ರಹಿಸಿ | ಅನ್ಯಥಾ ಪೊಂದನರಿಯೇ | ಚಿನ್ನಪವನವರ್ಧಿನಿ | ಸಂಪನ್ನ ಮತಿಯುತ್ತು | ನಿನ್ನಪ ದೊಳಿಟ್ಟು ಪೊರೆಯೋ ಮೆರೆಯೋ || ೧೮ ||

**ಶ್ರೀ** ಎನಲು ಶ್ರೀಮಂತ | **ಪು** ಎನಲು ಪುಣ್ಯಾತ್ಮ | **ರಂ** ಎನಲು ರಂಜಿಸುವನು | **ದ** ಎನಲು ದಯವಂತ | **ರ** ಎನಲು ರಕ್ಷಕನು | **ಗು** ಎನಲು ಗುಣವಂತನು || **ರ** ಎನಲು ರಜದೂರ | **ವೇ** ಎನಲು ವೇದವಿದ | **ನ** ಎನಲು ನಯವಂತನು | **ಮಃ** ಎನಲು ಮಹ ಜ್ಞಾನಿಂಗಾಗುವನು **ಓಂ** ಎನಲು | ಶ್ರೀಯರಸ ತಾನೊಲಿವನು | ಬಿಡನು || ೨೦ ||

ರಕ್ತಾಕ್ಷಿ ವತ್ಸರದಿ | ಪುಷ್ಯಬಹುಳಮಾವಾಸ್ಯೆ | ಮಾರ್ತಾಂಡಸುತ ನದಿನದಿ | ಸ್ತುತ್ಯಅರುಣೋದಯದಿ | ನಿತ್ಯಕರ್ಮವಗೈದು | ಸ್ವಸ್ಥ್ಯದಲ ಕುಳಿದು ಮುದದೀ || ಭಕ್ತ್ಯಾತಿಶಯದಿಂದ | ಮಾರುತನ ಬಿಗಿಯೊತ್ತಿ | ಚಿತ್ತಜನ ಪಿತನಪದದಿ | ಚಿತ್ತವನು ನೇಮಿಸುತ | ಹಂಪೆಯಲಿ ನಿತ್ಯಾತ್ಮ ಲಕ್ಷ್ಮೀಕಾಂತನ ಸೇರಿದೀ | ಭರದೀ || ೨೧ ||

ಶ್ರೀ ಪುರಂದರ ದಾಸರಾಯರು ತಮ್ಮ ವೃದ್ಧಾಪ್ಯದಲ್ಲಿ ಹಂಪೆಯಲ್ಲೇ ವಾಸ ಮಾಡುತ್ತಿದ್ದಂತೆ ತೋರುತ್ತದೆ. ವೃದ್ಧಾಪ್ಯದಿಂದ ದೇಹವು ಗಳಿತವಾಗುತ್ತಿರಲು ಐವತ್ತೊಂದು ರಕ್ತಾಕ್ಷಿ ಸಂವತ್ಸರದ ಪುಷ್ಯಮಾಸದಲ್ಲಿ ಬಹುಳ ಅಮಾವಾಸ್ಯೆ ಶನಿವಾರದ ದಿನ ಪ್ರಾತಃಕಾಲ ಎದ್ದುಸಂತೆಗ್ಸ್ನಾನಾದಿಗಳನ್ನು ತೀರಿಸಿಕೊಂಡು ನಿತ್ಯಕರ್ಮಾನುಷ್ಠಾನಗಳು ನೆರವೇರಲು ಎಲ್ಲರ ಕುಶಲವಾರ್ತೆಗಳನ್ನೂ ಕೇಳಿ ಮಕ್ಕಳಿಗೂ ಇತರರಿಗೂ ಶಿಷ್ಯರಾದ ಅಪ್ಪಣ್ಣ ಭಾಗವತರಿಗೂ ಯೋಗ್ಯ ಬುದ್ಧಿ ಮಾತುಗಳನ್ನು ಹೇಳಿ ತರುವಾಯ ಚಿತ್ತ ಶುದ್ಧಿಯಿಂದ ಧ್ಯಾನಧಾರಣೆ ಮಾಡಿ ಮನಸ್ಸನ್ನು ಪರಮಾತ್ಮನಲ್ಲಿಟ್ಟು "ಜೀರ್ಣವಾದ ಮಾನವ ಕಳೇಬರವನ್ನು ತ್ಯಜಿಸಬೇಕು" ಎಂದು ಸಂಕಲ್ಪ ಮಾಡಲು ಪ್ರಾಣವಾಯುವು ಬ್ರಹ್ಮರಂಧ್ರವನ್ನು ಭೇದಿಸಿಕೊಂಡು ತೆರಳಿ ಶ್ರೀ ಹರಿಯ ಪಾದಕಮಲಗಳಲ್ಲಿ ಐಕ್ಯವಾಯಿತು.

ಶ್ರೀ ದಾಸರಾಯರ ಚರಮಗೀತೆಯನ್ನು ಶ್ರೀ 'ಮಧ್ವಪತಿ ಪುರಂದರ ದಾಸರು' ಈ ಪದದಿಂದ ಹಾಡಿರುವರು

ರಾಗ—ಮಧ್ಯಮಾವತಿ

ಭೇರಿದುಂದುಭಿ ಮೊಳಗುತಿರೆ, ಪುರಂದರದಾಸ | ತಾ ತೆರಳಿದ ವೈಕುಂಠಕ್ಕೆ ‖ ಪ ‖ ರಕ್ತಾಕ್ಷಿ ಸಂವತ್ಸರ ಪುಷ್ಯ ಬಹುಳದ ಅತಿಶಯವಾದ ಅಮಾವಾಸ್ಯೆ ಮಂದವಾರ ‖ ೧ ‖ ವಿಜಯನಗರದ ವಿಠ್ಠಲನ ಸನ್ನಿಧಿಯಲಿ | ಕೂಡಿದ್ದ ಭಾಗವತರ ಸಮ್ಮೇಳನದಿ ‖ ೨ ‖ ವೈಕುಂಠಕ್ಕೆ ಭೂಮಿಗೆ ಹರಿದಾಸರ ಸೋಪಾನ ಮಾಡಿ ಭಕ್ತರಿಗೆ ಮಾರ್ಗವ ತೋರಿ ‖ ೩ ‖ ಅಷ್ಟಗಸ್ಯ ಜಯರಾಜ ಜಯವೆನುತ್ತಲಿ | ಶಿಷ್ಯತತಿದ್ವಡೆಗತಿಸಂಭ್ರಮದಿಂದ ‖ ೪ ‖ ಗುರುಮಧ್ವಪತಿವಿಠಲನ ಧರೆಗೆ ತೋರಿ | ಪುರಂದರರಾಯ ಸ್ಥಿರವೈಕುಂಠಕ್ಕೆ ‖ ೫ ‖

ಭಗವಂತನಿಂದ ಆಜ್ಞಪ್ತರಾಗಿ ಕಲಿಯುಗದಲ್ಲಿ ಅವತಾರಮಾಡಿದ ಶ್ರೀ ನಾರದ ಮಹರ್ಷಿಗಳ ಆಶಯವು ಅಕ್ಷರಶಃ ನೆರವೇರಿದಂತಾಯಿತು. ಪುರಂದರ ದಾಸರು, ಮೇಲೊಂದೆಡೆಯಲ್ಲಿ ಹೇಳಿದಂತೆ ನಾಲ್ಕು ಲಕ್ಷದ ಎಪ್ಪತ್ತೈದು ಸಾವಿರ ಪದ ಸುಳಾದಿ ಉಗಾಭೋಗಗಳನ್ನು ಹಾಡಿದರು. ಅವರ ಸಂಕಲ್ಪದಂತೆ ಐದುಲಕ್ಷಕ್ಕೆ ಪೂರ್ಣವಾಗಲು ಮಿಕ್ಕ ಇಪ್ಪತ್ತೈದು ಸಾವಿರ

ವನ್ನು ಇವರು ಸ್ವರ್ಗಸ್ಥರಾದ ನೂರೈವತ್ತು ವರ್ಷಗಳ ತರುವಾಯ ಜನಿಸಿದ ದಾಸವರ್ಯ ಶ್ರೀ **"ವಿಜಯರಾಯರು"** ರಚಿಸಿ ತಮ್ಮ ಗುರುಗಳ ಆಶಯವನ್ನು ಪೂರ್ಣಮಾಡಿದರೆಂದು ಹೇಳುತ್ತಾರೆ. ಈ ಒಟ್ಟು ಸಂಖ್ಯೆಯಲ್ಲಿ ಈಗ ಒಂದು ಲಕ್ಷ ಪದಗಳು ಮಾತ್ರವೇ ಮಾನವಲೋಕಕ್ಕೆ ದೊರೆತಿವೆ ಎಂಬ ಪ್ರತೀತಿಯುಂಟು. ಪೂರ್ವಿಕರ ಗ್ರಂಥಗಳು, ಪೂರ್ವಿಕ ವಿಚಾರಗಳು, ದೇಶಭಾಷೆಗಳು ಮುಂತಾದುವುಗಳಲ್ಲಿ ಕೇವಲ ಅನಾದಾರಣೆಯನ್ನುಂಟಾಗಿರುವ ಕನ್ನಡಿಗರಾದ ನಮ್ಮ ಅಶ್ರದ್ಧೆ ಅಲಸಿಕೆಗಳಿಂದ ಈಗ ಅವುಗಳಲ್ಲಿ ಎಷ್ಟು ಗೆದ್ದಲುಹುಳುಗಳ ಪಾಲಾಗಿವೆಯೋ, ಮಿಕ್ಕುವು ಎಲ್ಲಿವೆಯೋ, ಈಗ ದೊರೆತಿರುವ ಗೊತ್ತಾದ ಸಂಖ್ಯೆಯೆಷ್ಟೋ, ಅವುಗಳಲ್ಲಿರುವ ಅಮೂಲ್ಯ ತತ್ತ್ವಗಳೇನೋ ಎಂಬ ವಿಚಾರಗಳನ್ನು ಕನ್ನಡಿಗ ಮಹಾಶಯರು ಯೋಚಿಸುವರೇನು! ಪ್ರತಿಯೊಬ್ಬರೂ ನಮ್ಮ ಪೂರ್ವಿಕರ ಮಹತ್ವವನ್ನು ನಮ್ಮ ಆಸ್ತಿಯಾಗಿ ಉಳಿಸಿಕೊಳ್ಳಬೇಕೆಂದು ಬದ್ಧಕಂಕಣರಾಗುವರೇನು? ಅದಕ್ಕಾಗಿ ಹೇಯವಾದ ಭೋಗಭಾಗ್ಯಗಳಿಗಾಶಿಸುವುದನ್ನು ಕಡಮೆ ಮಾಡಿ ತಮ್ಮ ತನುಮನ ಧನಗಳನ್ನು ಅರ್ಪಿಸಲು ಸಿದ್ಧರಾಗಿರುವರೇನು? ಏನು, ಕನ್ನಡಿಗರಲ್ಲಿ ಅಷ್ಟು ಮಟ್ಟಿನ ಅಭಿಮಾನವಿಲ್ಲವೆಂದು ನಿರಾಶರಾಗಬಹುದೆ?

ಬೇಡ! ಅಂತಾಗದಿರಲಿ! ಶ್ರೀ ಪುರಂದರದಾಸರ ಪೂತಮಾರ್ಗವನ್ನು ಕನ್ನಡಿಗರೂ ಅನುಸರಿಸಿ ನಶ್ವರವಾದ ಐಹಿಕ ಸಂಪತ್ತನ್ನೇ ಮುಖ್ಯವೆಂದು ಭಾವಿಸದೆ ಶಾಶ್ವತವಾದ ದೈವಿಕ ಸಂಪತ್ತನ್ನು ಗಳಿಸಲು ಆಶಿಸಲಿ! ಪ್ರಪಂಚದಲ್ಲಿ ಕೇವಲ ಉದರಂಭರಣೋದ್ಯೋಗಕ್ಕಿಂತಲೂ ಸಾಧಿಸಬೇಕಾದ ಇನ್ನೂ ಹಲವು ಕಾರ್ಯಗಳು ಉಂಟೆಂದು ಭಾವಿಸಲಿ! ಹಾಗೆ ಜೀವಿತ ಸಾರ್ಥಕ್ಯಕ್ಕಾಗಿ ತನುಮನಧನಗಳನ್ನು ವ್ಯಯಿಸಿ ದೇಶಸೇವೆಯೇ ಈಶಸೇವೆಯೆಂದೂ ಭಾಷಾಸೇವೆಯೇ ಭಗವತ್ಸೇವೆಯೆಂದೂ ಎಣಿಸಿ ದಾಸರಾಯರಂತೆ ಧರ್ಮಾರ್ಥಕಾಮ ಮೋಕ್ಷಗಳೆಂಬ ಚತುರ್ವಿಧ ಫಲಗಳನ್ನೂ ಗಳಿಸಿ ಜೀವಿತವನ್ನು ಸಾರ್ಥಕಪಡಿಸಿಕೊಳ್ಳಲು ಹೆಣಗುವುದಕ್ಕಾಗಿ ಕೃತನಿಶ್ಚಯರಾಗಲಿ.

ತಥಾಸ್ತು.



ಪ್ರಥಮ ಮುದ್ರಣ ೧೦೦೦ ಪ್ರತಿಗಳು ೧೯೨೫
ದ್ವಿತೀಯ ಮುದ್ರಣ ೨೦೦೦ ಪ್ರತಿಗಳು ೧೯೨೭

ಸುಬೋಧ ಮುದ್ರಣಾಲಯ, ಬೆಂಗಳೂರು ಸಿಟಿ —೧೯೨೭

ಶ್ರೀರಾಮಸಹಾಯಂ

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

**ಮುನ್ನುಡಿ:—**

ಅದ್ವೈತ ಸಿದ್ಧಾಂತ ಸ್ಥಾಪನಾಚಾರ್ಯರಾದ "**ಶ್ರೀ ಶಂಕರಾಚಾರ್ಯರು**" ಜಗತ್ಪ್ರಸಿದ್ಧರು, ಲೋಕಮಾನ್ಯರು, ಪೂಜ್ಯತಮರು! ಅಮಾನುಷ ಪ್ರಜ್ಞಾಸಾಮರ್ಥ್ಯ, ಅವಿರಳ ಕಾರ್ಯತತ್ಪರತೆ, ಅದ್ವಿತೀಯ ಪವಿತ್ರ ಚಾರಿತ್ರ್ಯ, ಅಸಾಧಾರಣ ಆತ್ಮತೇಜ ಮುಂತಾದುವುಗಳಿಂದ ನಮ್ಮ ಭಾರತದೇಶವನ್ನು ಮಾತ್ರವೇ ಅಲ್ಲದ, ಭೂಮಂಡಲವನ್ನೇ ಬೆಳಗಿದ ಮಹಾನ್ ವ್ಯಕ್ತಿಗಳಲ್ಲಿ ಶ್ರೇಷ್ಠರೆನ್ನಿಸಿದ ಶ್ರೀಶಂಕರಾಚಾರ್ಯರ ಪವಿತ್ರನಾಮವು ಹಿಂದೆ ಹೇಗಿತ್ತೋ, ಈಗ ಹೇಗಿದೆಯೋ, ಹಾಗೆಯೇ ಮತ್ತು ಇನ್ನೂ ಅತಿಶಯವಾಗಿ ಎಂದೆಂದಿಗೂ, ಪಂಚಭೂತಗಳೂ, ಸೂರ್ಯಚಂದ್ರಾದಿಗಳೂ ಇರುವವರೆಗೂ-ಪ್ರಪಂಚದಲ್ಲಿ ಸ್ಥಿರವಾಗಿ ಪ್ರಕಾಶಿಸುತ್ತಾ ಇರುವುದು. ಜಗದುದ್ಧಾರಕ್ಕಾಗಿ ಆ ಮಹಾತ್ಮರು ಮಾಡಿದ ಮಹತ್ಕಾರ್ಯಗಳೂ, ರಚಿಸಿದ ಅವಿನಾಶಿಗಳಾದ ಗ್ರಂಥರತ್ನಗಳೂ, ಶಾಸ್ತ್ರಮಹೋದಧಿಯನ್ನು ಮಥಿಸಿಪಡೆದ ಅಮೃತಸ್ವರೂಪವಾದ ಅದ್ವೈತಸಿದ್ಧಾಂತವೂ, ಆ ಸಾಧುವರ್ಯರ ಪವಿತ್ರಯಶಶ್ಚಂದ್ರಿಕೆಯನ್ನು ಎಂದೆಂದಿಗೂ ಕೃಷ್ಣಪಕ್ಷವಿಲ್ಲದೆ ಪ್ರಕಾಶಿಸುವಂತೆ ಕಾಪಾಡಲು ಸಾಕಾದ ಆಧಾರಗಳಾಗಿವೆ. ಆ ಮಹಾನುಭಾವರು ಸಂಚರಿಸಿದ ದೇಶಗಳ ವಿಸ್ತಾರ, ಆ ಪಂಡಿತಸಾರ್ವಭೌಮರು ರಚಿಸಿದ ಗ್ರಂಥಗಳಸಂಖ್ಯೆ, ತರ್ಕಮಾಡಿ ಗೆದ್ದ ಪಂಡಿತಮಂಡಲಿ, ಆ ಗುರುವರ್ಯರು ಪ್ರಕಟಿಸಿದ ಸಿದ್ಧಾಂತಗಳು ಸ್ಥಾಪಿಸಿದ ಮಠಾದಿಗಳು, ಮಾಡಿದ ಇತರ ಮಹಾಕಾರ್ಯಗಳು ಇವುಗಳನ್ನು ಅವರು ಜೀವಿಸಿದ್ದ ಕಾಲಪ್ರಮಾಣದೊಂದಿಗೆ ಹೋಲಿಸಿದ್ದಾದರೆ ಆ ಪುಣ್ಯಶೀಲರು ತಮ್ಮ ಜೀವಿತದ ಪ್ರತಿಯೊಂದು ನಿಮಿಷಕಾಲವನ್ನೂ ಹೇಗೆ-ಎಷ್ಟು ಪ್ರಯೋಜನಕರವಾದ ರೀತಿಯಲ್ಲಿ ಉಪಯೋಗಿಸಿಕೊಂಡು ಪ್ರಪಂಚಕ್ಕೆ ಶಾಶ್ವತವಾದ ಎಂತಹ ಮಹೋಪಕಾರವನ್ನು ಮಾಡಿದರೆಂಬುದನ್ನು ಮನಗಾ

ರುವುದು ಯಾವ ಆ ಮಹಾತ್ಮರ ಸಂಪೂರ್ಣ ಜೀವಿತವನ್ನೆಲ್ಲಾ ಶೋಧಿಸಿದರೂ ಸ್ವಾರ್ಥತೆ ಎಂಬುದರ ಛಾಯೆಯೂ ತೋರಿಬರಲಾರದೋ, ಅಹಂಕಾರ ಮಮಕಾರಗಳ ಸುಳಿವಾದರೂ ಗೋಚರಿಸದೋ, ಯಾರ ಪವಿತ್ರ ಚರಿತ್ರೆಯಲ್ಲಿ ಲೋಭ ಮೋಹಗಳ ಗಂಧವೂ ಸಿಕ್ಕಲಾರದೋ, ಅಲ್ಲದೆ ಅತಿಶಯ ಉದಾರತೆ, ಪ್ರಪಂಚದ ಅಣುರೇಣು-ಜೀವಿತಕೋಟಿಯೊಂದಿಗೆ ಸಹಾನುಭೂತಿ, ಭಕ್ತಿ, ಜ್ಞಾನ ವೈರಾಗ್ಯಾದಿಗಳ ಪರಮಾವಧಿಸ್ಥಿತಿ, ಪರಮಸಾಧು ಜೀವನ, ಲೋಕಕ್ಕೆ ಮಾಡಿದ ಅಸಾಧಾರಣವಾದ ಶಾಶ್ವತವಾದ ಮಹೋಪಕಾರ ಇವುಗಳನ್ನು-ದೃಷ್ಟಿದೋಷದಿಂದ ದೂಷಿತರಾಗದೆ, ನೋಡಿ ಸಂತೋಷಪಡುವ ಯೋಗ್ಯತೆಯಿದ್ದರೆ, ಆ ಮಹಾತ್ಮರನ್ನು ಅವತಾರಪುರುಷರೆಂದೂ, ಜಗದುದ್ಧಾರಕ್ಕಾಗಿಯೇ ಜನ್ಮತಾಳಿದ ಸಾಕ್ಷಾತ ರಶಿವಮೂರ್ತಿಯೆಂದೂ ಭಾವಿಸಿ ಗೌರವಿಸಲು ಕೊರತೆಯೇಸಿದೆ?

ವೈದಿಕಧರ್ಮದ ಪುನರುದ್ಧಾರಕ್ಕಾಗಿ ಆಗ ಶ್ರೀಮದಾಚಾರ್ಯರು ಜನ್ಮತಾಳಿ ಗ್ರಾಮೈಕರಾತ್ರಿಯಾಗಿ ತಿರುಗಿ ಶ್ರಮಿಸದಿದ್ದರೆ, ಭಾರತ ಭೂಮಿಯ ಧಾರ್ಮಿಕ ಜೀವನವು ಬೌದ್ಧ ಚಾರ್ವಾಕಾದಿ ಮತಗಳಿಂದ ತುಂಬ ಕಲುಷಿತವಾಗುತ್ತಿತ್ತೋ, ಅಥವ ಯವನ ಹೂಣಾದಿ ಧರ್ಮದವರಿಂದ ತುಂಬ ಭಯಂಕರವಾಗುತ್ತಿತ್ತೋ, ಅಥವ ಮತ್ತೇನಾಗುತ್ತಿತ್ತೋ ಊಹಿಸಲಸಾಧ್ಯ! ಅವರ ಅವತಾರಕಾಲದಲ್ಲಿದ್ದ ದೇಶದ ಮತ್ತು ಧರ್ಮದ ಶೋಚನೀಯ ಸ್ಥಿತಿಯನ್ನು ನಿಷ್ಪಕ್ಷಪಾತದೃಷ್ಟಿಯಿಂದ ಕಣ್ಣುಬಿಟ್ಟು ನೋಡಿ ವಿಚಾರಮಾಡಿದರಲ್ಲದೆ, ಅವರು ಸಾಧಿಸಿದ ಮಹತ್ಕಾರ್ಯದ ವಿಷಯದಲ್ಲಿ ಸಂಪೂರ್ಣಸಹಾನುಭೂತಿಯು ಉಂಟಾಗದು ನಮ್ಮಲ್ಲಿನ ಒಳಕಡಿದಾಟ-ಹೊಡೆದಾಟಗಳಿಂದಲೇ ನಮ್ಮ ಮತ್ತು ದೇಶದ ಸ್ಥಿತಿಯು ಇಂತಹ ದುರವಸ್ಥೆಗಿಳಿದಿರುವ ಈ ಕಾಲದಲ್ಲಾದರೂ ನಾವು ತ್ರಿಕಾಲಾಬಾಧಿತವಾದ ತತ್ವಗಳನ್ನು ವ್ಯಕ್ತಿಯೊಂದಿಗೆ ಸಂಬಂಧಿಸಿ ಪರಸ್ಪರ ದ್ವೇಷಭಾವನೆಗಳಿಂದ ಬೇರೆ ಬೇರೆ ಯಾಗುವುದನ್ನು ಸಾಕುಮಾಡಿ-ನಿಲ್ಲಿಸಿ, ಐಕ್ಯಭಾವ ಉದಾರತೆಗಳಿಂದ ಪರಸ್ಪರರ ಕ್ಷೇಮಚಿಂತನೆಗಾಗಿ ಹೆಣಗತಕ್ಕದು ಪರಮಾವಶ್ಯಕವಾಗಿದೆ!

ಶ್ರೀಶಂಕರರು ಉಪನಿಷತ್ತುಗಳು, ಬ್ರಹ್ಮಸೂತ್ರಗಳು, ಶ್ರೀಮದ್ಭಗವದ್ಗೀತೆ, ಈ ಪ್ರಸ್ಥಾನತ್ರಯಕ್ಕೆ ಭಾಷ್ಯಗಳನ್ನು ಬರೆದು ಆಚಾರ್ಯ ಪದವಿ

ಯನ್ನು ಹೊಂದಿ ಲೋಕಮಾನ್ಯರಾದರು ಶ್ರೀಶಂಕರರು ವೇದಬಾಹ್ಯಗಳಾದ ದುರ್ಮತಗಳನ್ನು ಖಂಡಿಸಿ, ಆಸ್ತಿಕಧರ್ಮದ ಷಣ್ಮತಗಳನ್ನು ಸ್ಥಾಪಿಸಿ ಜಗದ್ಗುರು ಪದವಿಯನ್ನು ಪಡೆದು ಜಗತ್ಪೂಜ್ಯರಾದರು. ಶ್ರೀಶಂಕರರು ಭೇದಭಾವನೆಯನ್ನು ನೀಗಿ, ಸ್ಥಾವರ ಜಂಗಮಾತ್ಮಕವಾದ ಈ ಪ್ರಪಂಚದ ಅಸಂಖ್ಯ ಜೀವತತ್ವಗಳಲ್ಲಿ ಅವ್ಯಕ್ತರೂಪದಿಂದ ಅಡಗಿರುವ ಅವಿನಾಶಿಯಾದ ಅನಾದಿಯಾದ ಆದಿಮಧ್ಯಾಂತರಹಿತವಾದ ಆತ್ಮವನ್ನು ಸಹಜದೃಷ್ಟಿಯಿಂದ ನೋಡಿ, ಹಾಗೆಂದು ತಿಳಿದು, ಅದನ್ನು ಬೋಧಿಸಿ ಅದಕ್ಕಾಗಿ ಅಹರ್ನಿಶಿ ಶ್ರಮಿಸಿ ಅದ್ವೈತಶ್ರೇಷ್ಠರೆನ್ನಿಸಿದರು ಹೀಗೆ ಆ ಮಹಾನುಭಾವರು ತಮಗೆ ದೊರೆತ ಅತ್ಯಲ್ಪಕಾಲದ ಜೀವಾವಧಿಯಲ್ಲಿ ಅಷ್ಟು ಬಗೆಯ ಅದ್ಭುತ-ಅಗಾಧ ಕಾರ್ಯ ಕಲಾಪಗಳಲ್ಲಿ ತೊಡಗಿ, ಎಲ್ಲವನ್ನೂ ಅತ್ಯುತ್ಕೃಷ್ಟರೀತಿಯಿಂದ ಮಾಡಿರುತ್ತಿರಲು, ನಾವು ಮಾಡುತ್ತಿರುವ ಕೇವಲ ಆಹಾರ ನಿದ್ರಾದಿ ಮಹತ್ಕಾರ್ಯಗಳಲ್ಲಿ ನಮಗೆ ಮಾತೃಭಾಷಾ ಪುಸ್ತಕಗಳನ್ನು, ಓದಲೂ ದಿನಕ್ಕೆ ಒಂದೆರಡು ಗಂಟೆಗಳ ಅವಕಾಶ ಸಿಕ್ಕಲಾರದೆಂದು ಮುಂತಾಗಿ ಗೊಣಗಿ-ಕಾರಣಗಳನ್ನು ಹೇಳಿ, ಮಾತೃಭಾಷಾಭಿವೃದ್ಧಿಗೆ ಸಹಕರಿಸದಿರತಕ್ಕದು ಶೋಚನೀಯ ವಿಚಾರವು' ಪ್ರಿಯವಾಚಕಮಹಾಶಯರು, ತಾವು ಮಾತ್ರ ಓದುವುದರಿಂದ ತೃಪ್ತರಾಗದೆ, ತಮ್ಮ ನೆರೆಹೊರೆಯವರು, ದೂರ ಸ್ಥಳಗಳಲ್ಲಿರುವ ಬಂಧುಬಾಂಧವರು ಸ್ನೇಹಿತರು ಮುಂತಾದವರಿಗೂ ಗ್ರಂಥಮಾಲಾ ಪುಸ್ತಕಗಳನ್ನು ಪಡೆವ ಮಾರ್ಗಗಳನ್ನು ಸೂಚಿಸಿ, ಅವರಲ್ಲೂ ವಾಚನಾಭಿರುಚಿಯನ್ನು ಹೆಚ್ಚಿಸಲು ಪ್ರಯತ್ನಿಸಿ, ಭಾಷಾಸೇವೆಗೆ ಸಹಕರಿಸಬೇಕೆಂದು ಪ್ರಾರ್ಥಿಸುತ್ತೇನೆ.

ಬೆಂಗಳೂರು ಸಿಟಿ
೩೧—೩—೧೯೩೬

ಇತಿ ಸುಜನ ವಿಧೇಯ,
**ಯಂ ರಾಮರಾವ್.**

ಸುಬೋಧ ಮುದ್ರಣಾಲಯ, ಬೆಂಗಳೂರು ಸಿಟಿ — ೩೦೦೦ — ೧೯೩೬

ಭಜಗೋವಿಂದಂ ಭಜಗೋವಿಂದಂ ಗೋವಿಂದಂ ಭಜ ಮೂಢಮತೇ ||
ಸಂಪ್ರಾಪ್ತೇ ಸನ್ನಿಹಿತೇ ಕಾಲೇ ನಹಿ ನಹಿ ರಕ್ಷತಿ ಡುಕೃಞ್ ಕರಣೇ || ಪ ||

ಜಟಿಲೋ ಮುಂಡೀ ಲುಂಛಿತಕೇಶಃ ಕಾಷಾಯಾಂಬರಬಹುಕೃತವೇಷಃ ||
ಪಶ್ಯನ್ನಪಿ ಚ ನ ಪಶ್ಯತಿ ಮೂಢಃ ಉದರನಿಮಿತ್ತಂ ಬಹುಕೃತವೇಷಃ || ೧ ||

ಭಗವದ್ಗೀತಾ ಕಿಂಚಿದಧೀತಾ ಗಂಗಾಜಲಲವ ಕಣಿಕಾಪೀತಾ ||
ಸಕೃದಪಿ ಯಸ್ಯ ಮುರಾರಿಸಮರ್ಚಾ ತಸ್ಯ ಯಮಃ ಕಿಂ ಕುರುತೇ ಚರ್ಚಾಂ || ೨ ||

ಬಾಲಸ್ತಾವತ್ಕ್ರೀಡಾ ಸಕ್ತಃ ತರುಣಸ್ತಾವತ್ತರುಣೀಸಕ್ತಃ |
ವೃದ್ಧಸ್ತಾವಚ್ಚಿಂತಾಸಕ್ತಃ ಪರೇ ಬ್ರಹ್ಮಣಿ ಕೋಽಪಿ ನ ಸಕ್ತಃ || ೩ ||

ಪುನರಪಿ ಜನನಂ ಪುನರಪಿ ಮರಣಂ ಪುನರಪಿ ಜನನೀ ಜಠರೇ ಶಯನಮ್ ||
ಇಹ ಸಂಸಾರೇ ಭವದುಸ್ತಾರೇ ಕೃಪಯಾಪಾರೇ ಪಾಹಿ ಮುರಾರೇ || ೪ ||

ಗೇಯಂ ಗೀತಾ ನಾಮಸಹಸ್ರಂ ಧ್ಯೇಯಂ ಶ್ರೀಪತಿರೂಪಮಜಸ್ರಮ್ ||
ನೇಯಂ ಸಜ್ಜನಸಂಗೇ ಚಿತ್ತಂ ದೇಯಂ ದೀನಜನಾಯ ಚ ವಿತ್ತಮ್ || ೫ ||

ಭಜಗೋವಿಂದಂ ಭಜಗೋವಿಂದಂ ಗೋವಿಂದಂ ಭಜ ಮೂಢಮತೇ!

" ಶ್ರೀ ಶಂಕರಾಚಾರ್ಯರು "

ಸುಬೋಧ ಕುಸುಮಾಂಜಲಿ ಗ್ರಂಥಮಾಲಾ ಮಾರ್ಚಿ ೧೯೨೬



ಅದ್ವೈತಮತ ಸ್ಥಾಪಕರಾದ ಶ್ರೀ ಶಂಕರಾಚಾರ್ಯರು

ಶ್ರೀರಾಮ ಸಹಾಯಂ

ಅಷ್ಟೋತ್ತರ ಸುಕಥಾಸಾರದ

ಶ್ರೀ

# ಶಂಕರಾಚಾರ್ಯರು



## ಅಧ್ಯಾಯ ೧ — "ಪುತ್ರರತ್ನ ಜನನ"

ಪ್ರಪಂಚದಲ್ಲಿ ಮತ್ತಾವ ದೇಶಕ್ಕೂ ಇಲ್ಲದ ಪುಣ್ಯಭೂಮಿ ಎಂಬ ಗೌರವನಾಮವು ನಮ್ಮ ಮಾತೃಭೂಮಿಯಾದ ಈ ಭಾರತದೇಶಕ್ಕೆ ಅನ್ವರ್ಥಕ ವ್ಯಾಪ್ತವಾಗಿರುವುದು. ಮನುಷ್ಯರಾಗಲಿ ದೇವತೆಗಳೋ ಮಹರ್ಷಿಗಳೋ ಎಂಬಂತಹ ನಮ್ಮ ಪ್ರತ್ಯಕ್ಷ ಚರಿತ್ರವನ್ನು ಪ್ರಪಂಚಕ್ಕೆ ಉದಾಹರಣೆಯನ್ನಾಗಿ ಇಟ್ಟ, ಸರ್ವಶಕ್ತನಾದವರಿಂದ ಈ ಭೂತಳದಲ್ಲಿ, ಸ್ವರ್ಗವೋ ಎನಿಸುವಂತ ಸಕಲ—ಸಂಕ್ರಾಂತಿಗಳನ್ನು ಸ್ಥಾಪಿಸಿ ಭೂಮಾತೆಯ ಭಾರವನ್ನಿಳಿಸಿದ ಪುತ್ರರತ್ನರನೇಕರು ಈ ಭಾರತಭೂಮಿಯಲ್ಲಿ ಜನ್ಮವೆತ್ತಿದುದರಿಂದಲೇ ಇದನ್ನು ಪುಣ್ಯಭೂಮಿಯೆಂದು ಕರೆದಿರುವರು. ಭೂಭಾರವನ್ನು ಇಳಿಸುವುದೆಂದರೆ ಅರ್ಥವೇನು? ಕೋಟ್ಯಾಂತರ ಪರ್ವತಗಳೂ—ಮಹಾಸಾಗರಗಳೂ, ಮಹಾರಣ್ಯ ಗಿಡ ಬೆಟ್ಟಗಳೂ ಅಸಂಖ್ಯಾತ ಜೀವರಾಶಿಗಳೂ ಭೂಮಿಗೆ ಭಾರವೆನಿಸದೆ ಕೇವಲ ಒಬ್ಬಿಬ್ಬರು ಅಥವ ಕೆಲವೊಂದು ಮಾನವರು ಭೂಮಿಗೆ ಭಾರವಾಗಿರುವರೆಂದರೆ ಅರ್ಥವೇನು? ಅದರ ತತ್ವವಿಷ್ಟೆ! ಪ್ರಪಂಚವು ಯಾವ ಪೃಥ್ವಿ ಅಪ್ ತೇಜೋ, ವಾಯು, ಆಕಾಶಗಳೆಂಬ ಪಂಚಭೂತಗಳಿಂದ ವ್ಯಾಪ್ತವಾಗಿದೆಯೋ ಆ ಐದು ತತ್ವಗ

ಳಿಂದಲೇ ಮನುಷ್ಯದೇಹವೂ ಮಾಡಲ್ಪಟ್ಟಿದೆ. ಈ ದೇಹವು ಜೀವಾತ್ಮನು ವಾಸಿಸುವ ಮನೆಯಾಗಿ ಅವನ ಲೌಕಿಕ ಜೀವನ-ಬೆಳೆವಣಿಗೆ ಮುಂತಾದುವುಗಳಿಗೆ ಸಹಕರಿಸುವುದು ಆ ಚೇತನನು ತನ್ನ ಸದ್ಗುಣಸದಾಚರಣೆಗಳಿಂದ ಜೀವಿತವನ್ನು ಉತ್ತಮಗೊಳಿಸಿದನೆಂದರೆ ತನ್ನ ದೇಹದ ಭಾಗಕ್ಕೆ ಬಂದ ಆದ್ಯಂತ ಪೃಥ್ವಿಯ ಅಷ್ಟು ಭಾಗವನ್ನು ಉದ್ಧರಿಸಿದಂತಾಯಿತು ಅಷ್ಟು ಭಾಗದ ಪೃಥಿವ್ಯಂಶವು ಆ ಚೇತನನ ಸಂಬಂಧದಿಂದ ಉದ್ಧರಿಸಲ್ಪಟ್ಟಂತಾಯಿತು ಹಾಗಲ್ಲದೆ, ಅನ್ಯಾಯ ಅನೀತಿ ದುರಾಚಾರಾದಿಗಳಿಂದ ದೇಹಧಾರಿಯಾದ ಆ ಜೀವನು ತನ್ನ ಜೀವಿತವನ್ನು ಭ್ರಷ್ಟಗೊಳಿಸಿದನೆಂದರೆ, ಅವನ ಜೀವಿತವು, ಆ ದೇಹದಲ್ಲಿರುವಷ್ಟು ಪೃಥಿವ್ಯಂಶವು ಭರಿಸುವುದಕ್ಕೆ ಅಸಹನೀಯವಾಗುವುದು, ಭಾರವೆನ್ನಿಸುವುದು! ಇಂತಹ ಅನ್ಯಾಯ, ಅನೀತಿ, ದುರಾಚಾರಾದಿಗಳಲ್ಲಿ ತೊಡಗಿದ ದುಷ್ಟ ಜೀವಿಗಳೇ ಪ್ರಪಂಚದಲ್ಲ ಹೆಚ್ಚಿದರೆ, ಅವರ ಆ ಅಸಹ್ಯ ಜೀವಿತವು ಅಷ್ಟು ಅಂಶದ ಪೃಥ್ವಿಗೆ ಭಾರವೆನ್ನಿಸುವುದು ಅವರ ಚರ್ಯೆಯು ಇತರರಿಗೂ ಕೆಟ್ಟ ಉದಾಹರಣೆಯನ್ನು ತೋರಿಸಿ ಅವರನ್ನೂ ಅಯಾದು ಮಾರ್ಗಗಳಿಗೆ ಎಳೆಯುವುದು ಹೀಗಾಗಿ ಭೂಮಿಗೆ ಭಾರವು ಹೆಚ್ಚುತ್ತಾ ಹೋಗುವುದು ಆದರೆ ಯಾರು ತಮ್ಮ ಪವಿತ್ರಚರಿತ್ರೆಯಿಂದ ತಮ್ಮ ಜೀವಿತಗಳನ್ನು ಉತ್ತಮಗೊಳಿಸಿಕೊಂಡು, ಮೇಲ್ಕಂಡ ದುಶ್ಚರಿತರ ಚೇತನಗಳನ್ನು ಬೋಧನೆಗಳ ಮೂಲಕ ಉತ್ತಮಗೊಳಿಸುವುದರಿಂದಲಾಗಲೀ, ಅಥವ ಆರೀತಿ ಸಾಮಕ್ಕೆ ಸಾಧ್ಯಬರದಿದ್ದರೆ, ದಂಡದಿಂದ ಅವುಗಳನ್ನು ಆ ದೇಹಗಳಿಂದ ತೊಲಗಿಸುವುದರಿಂದಲಾಗಲೀ, ಅವರ ದೇಹಗಳಷ್ಟು ಪೃಥಿವ್ಯಂಶವನ್ನು ಆ ದುಷ್ಟ ಚೇತನಗಳ ಭಾರದಿಂದ ಮುಕ್ತಮಾಡುತ್ತಾರೆಯೋ ಅಂತಹ ಮಹಾಪುರುಷರು ಭೂಭಾರವನ್ನು ಇಳಿಸುವವರಾಗುವರು. ಹೀಗೆ ಸಚ್ಚರಿತ-ದುಶ್ಚರಿತ, ದೇವ-ದೈತ್ಯ, ಸುರ-ಅಸುರ, ಇವರಿಗೆ ಯುದ್ಧವು ಆದಿಯಿಂದಲೂ ನಡಯುತ್ತಿರುವುದು ಅಸುರರು ತಮ್ಮ ದುರಾಚಾರಗಳಿಂದ ಮೇಲ್ಕಂಡಂತೆ ಭೂಮಿಗೆ ಭಾರವೆನಿಸುವರು ಸುರರು, ಅವರನ್ನು ಸಂಹರಿಸಿ ಆ ಪೃಥ್ವಿಯ ಭಾರವನ್ನು ಇಳಿಸುವರು

ಕಲಿಯುಗದಲ್ಲ ಸುಮಾರು ಎರಡುಸಾವಿರದ ಐನೂರು ವರ್ಷಗಳು ಕಳೆಯುವ ವೇಳೆಗೆ ವೇದಧರ್ಮವುಲುಪ್ತವಾಗತೊಡಗಿತು. ಯುಜ್ಞಯಾಗಾ

ವಿಗಳ ಮೂಲಸ್ವರೂಪಗಳು ಕೆಟ್ಟುವು ಪಶುಹಿಂಸೆಯು ಪ್ರಬಲಿಸಿತು ಸ್ವಾರ್ಥತೆ ದಂಭಗಳು ಮೇರೆಯಿಲ್ಲದಂತೆ ಹೆಚ್ಚಿದುವು, ಜನಗಳು ವಿಷಯ ಲೋಲುಪರಾದರು, ನಾಲಿಗೆಯ ರುಚಿಗೆ ದಾಸರಾಗಿ ಯಜ್ಞಯಾಗಾದಿಗಳೆಂದು ನೆಪವಿಟ್ಟು ಅಸಂಖ್ಯ ಪ್ರಾಣಿಗಳನ್ನು ಕೊಲ್ಲ ತೊಡಗಿದರು ಮೂಗು ಪ್ರಾಣಿಗಳ ಕಷ್ಟ ದುಃಖ ಸಂಕಟಗಳು ಅತಿಶಯವಾದುವು. ಪ್ರಪಂಚದಲ್ಲಿ ಎಲ್ಲಾ ಜೀವಿಗಳಲ್ಲಿ ಶ್ರೇಷ್ಠನೆನಿಸಿದವನು ಮನುಷ್ಯನು ಅವನು ತನ್ನ ಪೋಷಣೆಗೊಳಪಟ್ಟ ಹಸು ಎತ್ತು ಎಮ್ಮೆ ಕುರಿ ಮೇಕೆಗಳು, ಕತ್ತೆ ಕೋಳಿಗಳನ್ನು ಕಾಪಾಡಿಕೊಂಡು ಅವುಗಳಿಂದ ಸ್ವಾಭಾವಿಕರೀತಿಯಲ್ಲಿ ದೊರೆವ ಪ್ರಯೋಜನವನ್ನು ಹೊಂದಿ ಸುಖಿಸುವುದನ್ನು ಬಿಟ್ಟು, ತನ್ನ ಮಕ್ಕಳಂತೆ ತನ್ನನ್ನೇ ನಂಬಿಕೊಂಡಿರುವ ಅವುಗಳ ಕತ್ತು ಕೊಯ್ದು ತಿನ್ನ ತೊಡಗಿದರೆ ಇನ್ನು ಅವನ ನಾಲಿಗೆಯೆಂಬ ಶಸ್ತ್ರಕ್ಕೆ ಯಾವುದು ಅಡ್ಡಿಯಾದೀತು? ಹಾ ಹಾ ಕಾರವೆದ್ದಿತು! ಆಗ ಮಹಾದಯಾಳುವಾದ ಗೌತಮನೆಂಬ ರಾಜಪುತ್ರನು ಪ್ರಾಣಿಗಳಿಗೆ ಪ್ರಾಪ್ತವಾದ ಆ ದುಃಖವನ್ನು ನೋಡಲಾರದೆ ತನ್ನ ರಾಜ್ಯಭೋಗ ಸುಖಸೌಭಾಗ್ಯಗಳನ್ನೆಲ್ಲ ತ್ಯಜಿಸಿ, ಅರಣ್ಯಕ್ಕೆ ನಡೆದು ತಪಸ್ಸು ಮಾಡಿ ಸಿದ್ಧಿಯನ್ನು ಹೊಂದಿ ಬುದ್ಧನಾಗಿ ತನ್ನ ಸಚ್ಚರಿತ್ರೆಯಿಂದ ಜನಗಳ ಮನಸ್ಸಿನಲ್ಲಿ ಬೇರೂರಿಕೊಂಡಿದ್ದ ದುರಭಿಪ್ರಾಯಗಳನ್ನು ತೊಲಗಿಸಿ ಯಜ್ಞಯಾಗಾದಿಗಳ ನಿಶ್ಚಯವಾದ ಅರ್ಥವೇನೆಂಬುದನ್ನು ಬೋಧಿಸತೊಡಗಿದನು "ಅಯ್ಯಾ ಯಜ್ಞವೆಂದರೇನೆಂದು ತಿಳಿದು, ಕುರಿಯನ್ನು ಕೊಂದು ತಿನ್ನುವುದು ಯಜ್ಞವಲ್ಲ! ಕೇಳು ನಿನ್ನ ಹೃದಯವೆಂಬುದೇ ಯಜ್ಞಕುಂಡವು, ಧ್ಯಾನವೆಂಬುದೇ ಅಗ್ನಿಯು, ನಿನ್ನ ಪಂಚೇಂದ್ರಿಯಗಳ ವಿಷಯಾಸಕ್ತಿಯೇ ಆ ಅಗ್ನಿಗೆ ಹೊಯ್ಯುವ ಘೃತ (ತುಪ್ಪ)ವು ನಿನ್ನಲ್ಲಿರುವ ಕೋಪವೇ ಆ ಯಜ್ಞ ಪಶುವಾದ ಹೋತನು-ಕುರಿಯು, ದೇಹಧಾರಣೆಗಾಗಿ ಏನು ತಿನ್ನುವೆಯೋ ಅದೇ ಯಜ್ಞಾಂಗವಾದ ಚರುಹೋಮವು, ಏನನ್ನು ಕುಡಿಯುವೆಯೋ ಅದು ಸೋಮಪಾನವು, ಆದ್ಯಂತ ಜೀವಿತ ಕಾಲವೇ ಯಜ್ಞಾವಧಿಯು, ಮರಣವೇ ಯಜ್ಞಾಂತವಾದ ಅವಭೃತಸ್ನಾನವು ಈ ನಿಶ್ಚಯವಾದ ಯಜ್ಞಸ್ವರೂಪವನ್ನು ತಿಳಿದು ಹೃದಯವೆಂಬ ಯಜ್ಞಕುಂಡದಲ್ಲಿ, ಕಾಮಕ್ರೋಧ ಲೋಭ ಮೋಹ ಮದಮಾತ್ಸರ್ಯಗಳೆಂಬ ನಿನ್ನ ಅಂತಶ್ಶತ್ರುಗಳನ್ನು ಹೋಮ ಮಾ

ಜೀವಿತ ಸುಧಾರಣೆಗೆ ಅತ್ಯಾವಶ್ಯಕವಾದ ಮಾರ್ಗಗಳನ್ನು ಬೋಧಿಸತೊಡಗಿದನು ಆದರ ಮಹತ್ವಾಗಿ ಆದ್ಯಂತ ದೇಶವನ್ನೂ ವ್ಯಾಪಿಸಿದ್ದ ಅಜ್ಞಾನಾಂಧಕಾರವನ್ನು ತೊಲಗಿಸುವುದು ಆತನಿಂದಲೂ ಆತನ ಕರ್ಮಕಾಂಡದ ಮಾರ್ಗದಿಂದಲೂ ಸಾಗದ ಕಾರ್ಯವಾಗಿದ್ದಿತು ಆದರ ಕುಮಾರಿಲ ಭಟ್ಟನೂ, ಸೂರ್ಯೋದಯವನ್ನು ಸೂಚಿಸುವ ಅರುಣನಂತೆಮಾತ್ರ ತನ್ನ ಭಾಗದ ಕೆಲಸವನ್ನು ಮಾಡಿರಲು, ನಮ್ಮ ಕಥಾನಾಯಕರ ಅವಿಶ್ರಾಂತ ಉದ್ಯಮಗಳಿಂದ ಪ್ರಕಾಶಿತವಾದ ಜ್ಞಾನರವಿಯು ದೇಶದಮೇಲೆ ಮುಸುಕಿದ್ದ ಗಾಢವಾದ ತಮಸನ್ನು ನೀಗಿಸಿ, ಸಕಲರ ಮನಸ್ಸನ್ನೂ ಆಹ್ಲಾದಗೊಳಿಸಿತು

ಭಾರತದೇಶದ ಪಶ್ಚಿಮ ಪ್ರಾಂತದ ಎಂದರೆ ಈಗಿನ ಅರಬ್ಬೀ ಸಮುದ್ರದ ಅಂಚಿನಲ್ಲಿರುವ ಭೂಭಾಗವು ಖನಿಜಉದ್ಭಿಜಾದಿ ಸಂಪತ್ತುಗಳಿಂದಲೂ ಸ್ವಾಭಾವಿಕವಾದ ಪ್ರಕೃತಿ ಸೌಂದರ್ಯದಿಂದಲೂ ರಮಣೀಯವಾಗಿ ಪ್ರಕಾಶಿಸುತ್ತಾ ನೋಟಕರನ್ನು ಪರಮಾಹ್ಲಾದಗೊಳಿಸುತ್ತಿರುವುದು. ಆದರಲ್ಲೂ ಮಲೆಯಾಳ ಪ್ರಾಂತವನ್ನಂತೂ ನಿಸರ್ಗ ಸೌಂದರ್ಯದ ತೌರೂರೆನ್ನಬಹುದು. ಶ್ರೀಮಹಾವಿಷ್ಣುವಿನ ಅವತಾರಿಯಾದ ಶ್ರೀಪರಶುರಾಮನು ದುಷ್ಟಕ್ಷತ್ರಿಯವಂಶವನ್ನು ಇಪ್ಪತ್ತೊಂದಾವೃತ್ತಿ ಬೇಟೆಯಾಡಿ ವಧಿಸಿ ಅಜೇಯನನ್ನಿಸಿ, ಸಮುದ್ರರಾಜನಿಂದಲೇ ಈ ಭೂಭಾಗವನ್ನು ಪಡದನೆಂದು ಈಗಲೂ ಆ ಪ್ರಾಂತದ ಸ್ಥಳಪುರಾಣದಲ್ಲಿ ಹೇಳಿಕೊಂಡು, ಅಲ್ಲಿಯವರು ಅದನ್ನು ಶ್ರೀಪರಶುರಾಮಕ್ಷೇತ್ರವೆಂಬ ರೂಢನಾಮದಿಂದ ಕರೆಯುತ್ತಿರುವರು. ಅಲ್ಲಿಯ ನೆಲವು ಫಲವತ್ತಾಗಿರುವುದು ಸಮೃದ್ಧಿಯಾದ ನಿರಾಸರೆಯುಳ್ಳುದಾಗಿರುವುದು ಅಲ್ಲಿಯ ಪರುತಗ್ಗುಗಳು ಅಂತರಿಕ್ಷವನ್ನು ಮುಟ್ಟುವಂತೆ ಎತ್ತರವಾಗಿ ಬೆಳೆದಿರುವ ತೆಂಗು ಅಡಕೆಗಳ ತೋಟಗಳಿಂದಲೂ, ಭೂದೇವಿಯು ಪಗಡೆಯಾಟವನ್ನಾಡಲು ಹಾಸಿಕೊಂಡಿರುವ ಹಸುರುಚಾಪೆಯೋ ಎಂಬಂತಿರುವ ಮನೋಹರವಾದ ವಿಸ್ತಾರವಾದ ಶಾಲಿವನ (ಬತ್ತದಗದ್ದೆ)ಗಳಿಂದಲೂ ನೋಟಕರ ಕಣ್ಮನಗಳನ್ನು ಅಪಹರಿಸುತ್ತಿರುವುವು ಈಗ ಹೇಗೋ ಹಾಗೆಯೇ ಪೂರ್ವದಲ್ಲೂ ಅಲ್ಲಿ ನಂಬೂದರಿ ಬ್ರಾಹ್ಮಣರ ಅಗ್ರಹಾರಗಳು ತುಂಬಿದ್ದುವು. ನಂಬೂದರಿ ಬ್ರಾಹ್ಮಣರ ಆಚಾರವ್ಯವಹಾರಗಳು ಭಾರತ

ಭೂಮಿಯ ಇತರ ಭಾಗಗಳ ಬ್ರಾಹ್ಮಣರ ಆಚಾರವ್ಯವಹಾರಗಳಿಗಿಂತಲೂ ಅನೇಕ ವಿಷಯಗಳಲ್ಲಿ ವ್ಯತ್ಯಾಸವಾಗಿದ್ದು ವಿಚಿತ್ರವೆನಿಸುತ್ತವೆ ಪರಶುರಾಮ ಮಹರ್ಷಿಯಿಂದ ಅನುಗ್ರಹಿಸಲ್ಪಟ್ಟುವೆಂದು ಆಯಾ ಆಚಾರಗಳನ್ನು ಆ ಜನರು ಈಗ್ಲೂ ಅನುಸರಿಸುತ್ತಿರುವರು

ತಿರುವನಂತಪುರ (ಈಗಿನ ಟ್ರಾವನ್ಕೂರು) ಸಂಸ್ಥಾನದಲ್ಲಿ ಕಾಲಟಿ ಎಂಬೊಂದು ಅಗ್ರಹಾರವು ಧನಧಾನ್ಯ ಸಮೃದ್ಧರಾದ ನಂಬೂದರಿ ಬ್ರಾಹ್ಮಣರಿಂದ ತುಂಬಿ ಶೋಭಿಸುತ್ತಿದ್ದಿತು ಅವರಲ್ಲಿ ವಿದ್ಯಾಧಿರಾಜನೆಂಬ ಒಬ್ಬ ಬ್ರಾಹ್ಮಣೋತ್ತಮನು ವೇದಶಾಸ್ತ್ರ ಪಾರಂಗತನಾಗಿ, ಸದಾಚಾರನಿರತನಾಗಿ ಅತಿಥಿ ಗೋಬ್ರಾಹ್ಮಣಸೇವಾದಿ ಗೃಹಧರ್ಮಗಳಲ್ಲಿ ಆಸಕ್ತನಾಗಿ ಸಂಸಾರಯಾತ್ರೆಯನ್ನು ಸಾಗಿಸುತ್ತಿದ್ದನು ಆತನಿಗೆ ಯುಕ್ತಕಾಲದಲ್ಲಿ ಶಿವಗುರುವೆಂಬ ಪುತ್ರ ಪುತ್ರನುದಯಿಸಿ ದಿನದಿನಕ್ಕೆ ಅಭಿವೃದ್ಧಿಯಾಗುತ್ತಿದ್ದನು. ವಿದ್ಯಾಧಿರಾಜನು ತನ್ನಾ ಮಗನನ್ನು ಉಪನೀತನನ್ನಾಗಿ ಮಾಡಿ ಯೋಗ್ಯ ಗುರುವಿನ ಸಮೀಪಕ್ಕೆ ವಿದ್ಯಾಭ್ಯಾಸಕ್ಕಾಗಿ ಕಳುಹಿಸಲು, ಅಲ್ಲಿ ಶಿವಗುರುವು ಉಪಾಧ್ಯಾಯನಿಗೆ ಪರಮವಿಧೇಯನಾಗಿ ನಡೆದು ಅತ್ಯಲ್ಪಕಾಲದಲ್ಲೇ ಕಾವ್ಯನಾಟಕಾದಿಗಳನ್ನು ಅಭ್ಯಾಸಮಾಡಿ ತರುವಾಯ ವೇದಾಂತಗ್ರಂಥಗಳನ್ನೂ ಓದಿ ಪ್ರಾಜ್ಞನೆನಿಸಿ, ವಿದ್ಯಾಭ್ಯಾಸವನ್ನು ಮುಗಿಸಿ ಗುರುವರ್ಯನ ಆಜ್ಞೆಯಿಂದ ತಾಯಿತಂದೆಗಳ ಸಮೀಪವನ್ನು ಸೇರಿದನು ವಿದ್ಯಾಧಿರಾಜನು ಪ್ರೌಢನಾದ ತನ್ನಾ ಮಗನು ಸಮಂಜಸವೂ ಸಮರ್ಪಕವೂ ಆದ ವಿಚಾರಗಳಿಂದ ವೇದಾಂತದ ಗೂಢತತ್ವಗಳನ್ನು ಕುರಿತು ವಿವರಿಸುತ್ತಿದ್ದುದನ್ನು ಕೇಳಿ ಪರಮಾನಂದದಿಂದ ಒಂದೆರಡು ವರ್ಷಗಳನ್ನು ಕಳೆದನು. ಅಷ್ಟರಲ್ಲಿ ಶಿವಗುರುವು ವಿವಾಹಯೋಗ್ಯವಯಸ್ಕನಾಗಲು ಸಮೀಪದ ಅಗ್ರಹಾರದಲ್ಲೇ ವಾಸವಾಗಿದ್ದ ಮಹಾ ವಿದ್ವಾಂಸನೂ ಧನಾಢ್ಯನೂ ಆದ ಮಾಘಪಂಡಿತನೆಂಬ ಮತ್ತೊಬ್ಬ ನಂಬೂದರಿ ಬ್ರಾಹ್ಮಣನ ಮಗಳಾದ ಸತಿ ಎಂಬ ಸ್ಫುರದ್ರೂಪಿಯಾದ ಕನ್ಯಾರತ್ನವನ್ನು ತಂದು ತನ್ನ ಮಗನ ವಿವಾಹವನ್ನು ಅತಿಶಯ ವಿಜೃಂಭಣೆಯಿಂದ ನೆರವೇರಿಸಿ ಅನುರೂಪರಾದ ಮಗ ಸೊಸೆಯರನ್ನು ನೋಡಿ ಆತನೂ ಆತನ ಪತ್ನಿಯೂ ಪರಮಾನಂದಪಟ್ಟರು.

ಶಿವಗುರುವು ತಾಯಿತಂದೆಗಳ ಕಾಲಾನಂತರ ಮನೆಯ, ಆಸ್ತಿಪಾಸ್ತಿ

ಗಳ, ವೃತ್ತಿ, ಕ್ಷೇತ್ರಗಳ ಯಾಜಮಾನ್ಯವನ್ನು ವಹಿಸಿ ತನ್ನ ಪತ್ನಿಯೊಂದಿಗೆ ಯುಕ್ತ ಗೃಹಧರ್ಮವನ್ನು ಪಾಲನೆಮಾಡುತ್ತಾ ತನ್ನ ಸದ್ಗುಣಸದಾಚರಣೆಗಳಿಂದ ತನ್ನ ನೆರೆಹೊರೆಯವರ, ಗ್ರಾಮದವರ, ಆ ಪ್ರಾಂತದವರ ವಿಶೇಷಗೌರವ ಆದರಗಳಿಗೆ ಪಾತ್ರನಾಗಿ ಪರೋಪಕಾರಿಯೆಂದು ಪ್ರಸಿದ್ಧನಾಗಿ ಸಂಸಾರಮಾಡಿಕೊಂಡಿದ್ದನು ಹಾಗೆಯೇ ಹತ್ತು ಹನ್ನೆರಡು-ಹದಿನೆಂಟಿಪ್ಪತ್ತು ವರ್ಷಗಳು ಕಳೆದುವು. ಶಿವಗುರುವಿಗೆ ಪುತ್ರಸಂತಾನವೇ ಆಗಲಿಲ್ಲ! ಆಗಲಾತನನ್ನು ಚಿಂತೆಯು ವ್ಯಾಪಿಸಿತು ತನ್ನ ಆಸ್ತಿಪಾಸ್ತಿಗಳಿಗೆ ಉತ್ತರಾಧಿಕಾರಿಯಾಗಿದ್ದು ಊರ್ಧ್ವದೈಹಿಕಾದಿ ಕೃತ್ಯಗಳಿಂದ ತನಗೆ ಸದ್ಗತಿಯನ್ನು ಕಾಣಿಸುವುದಕ್ಕೆ ಒಬ್ಬ ಪುತ್ರನು ಉದಯಿಸಲಿಲ್ಲವಲ್ಲಾ, ವಂಶವು ಪಾಪಿಯಾದ ತನ್ನಲ್ಲೇ ಕೊನೆ ಗಂಡಂತಾಯಿತಲ್ಲಾ ಎಂದು ಅಹರ್ನಿಶಿ ಮರುಗಿ, ಕೊನೆಗೆ ಎಲ್ಲಾ ಲೌಕಿಕ ವಿಷಯಗಳಲ್ಲೂ ಜಿಗುಪ್ಸೆಪಟ್ಟುಕೊಂಡು ಪತ್ನಿಯೊಂದಿಗೆ ಸಮೀಪದಲ್ಲಿದ್ದ ವೃಷಭಾಚಲ ಪರ್ವತವನ್ನು ಸೇರಿ ಅದರ ಪಕ್ಕದಲ್ಲೇ ಪ್ರವಹಿಸುತ್ತಿದ್ದ ಪೂರ್ಣಾನದಿಯಲ್ಲಿ ಸ್ನಾನಸಂಧ್ಯಾದಿ ನಿತ್ಯಕೃತ್ಯಗಳನ್ನು ನೆರವೇರಿಸಿಕೊಂಡು, ಪತ್ನಿಯೊಡಗೂಡಿ ಭಕ್ತಾಭೀಷ್ಟವರಪ್ರದನಾದ, ಶ್ರೀವೃಷಭಾಚಲಾಧೀಶನಾದ ಶ್ರೀಪರಶಿವಮೂರ್ತಿಯನ್ನು ಕುರಿತು ತ್ರಿಕರಣಶುದ್ಧಿಯಿಂದ ತಪಸ್ಸು ಮಾಡತೊಡಗಿದನು ಲೋಕಗುರುವಾದ ಶಂಕರನು ನಿಷ್ಕರುಣಿಯೇ! ಜಗದಂಬೆಯು ದಯಾವಿಹೀನಳೇ! ಅಲ್ಪಕಾಲದೊಳಗಾಗಿಯೇ ಸಾಧುಹೃದಯರಾದ ಆ ದಂಪತಿಗಳ ಪ್ರಾರ್ಥನೆ-ತಪಸ್ಸುಗಳು ಆ ದಯಾನಿಧಿಗೆ ಮನವರಿಕೆಯಾದುವೋ ಎಂಬುದನ್ನು ಸೂಚಿಸುವಂತೆ, ಒಂದಾನೊಂದು ದಿನ ಬೆಳಗಿನ ಜಾವದಲ್ಲಿ ಶಂಕರನು ವೃದ್ಧಬ್ರಾಹ್ಮಣ ರೂಪದಿಂದ ಆ ದಂಪತಿಗಳಿಬ್ಬರಿಗೂ ಅವರವರ ಸ್ವಪ್ನದಲ್ಲಿ ದರ್ಶನವನ್ನಿತ್ತು, "ಓ ಸಾಧು ಹೃದಯರೇ, ನಿಮ್ಮ ಕೋರಿಕೆಯು ಪರಮೇಶ್ವರನಿಗೆ ಅರಿಕೆಯಾಯಿತು. ನಿಮಗೆ ಪುತ್ರಲಾಭವುಂಟಾಗುವುದು ಆದರೆ, ಸಕಲ ವೇದಶಾಸ್ತ್ರಪಾರಂಗತನೂ ವಿದ್ಯಾವಿನಯ ವಿವೇಕಾದಿ ಸರ್ವಸದ್ಗುಣ ಮಂಡಿತನೂ ಅಂತೆಯೇ ಅಲ್ಪಾಯುಷ್ಕನೂ ಆದ ಒಬ್ಬ ಮಗನು ಬೇಕೇ, ಅಥವಾ ದೀರ್ಘಾಯುಷ್ಮಂತರೂ ಮೂಢರೂ ದುಷ್ಟಬುದ್ಧಿಗಳೂ ಆದ ಅನೇಕ ಮಂದಿ ಪುತ್ರರು ಬೇಕೇ ಕೇಳಿಕೊಳ್ಳಿರಿ" ಎಂದು ನುಡಿದನು ಆ ವಿಪ್ರವಾಕ್ಯವನ್ನು ಕೇಳಿ

ಆ ದಂಪತಿಗಳು ಸ್ವಾಭಾವಿಕವಾಗಿಯೇ, ಅಲ್ಪಾಯುಷಿಯಾದರೂ ವಿದ್ವಾಂಸನೂ ಗುಣಾಢ್ಯನೂ ಆದ ಒಬ್ಬನೇ ಮಗನು ಸಾಕೆಂದು ತಮ್ಮ ಅಪೇಕ್ಷೆಯನ್ನು ತಿಳಿಸಿದರು ತರುವಾಯ ಎಚ್ಚತ್ತು, ಒಬ್ಬರೊಬ್ಬರ ಕನಸಿನ ಅನುಭವವನ್ನು ಮತ್ತೊಬ್ಬರೊಂದಿಗೆ ಹೇಳಿಕೊಂಡು ಇಬ್ಬರಿಗೂ ಏಕಕಾಲದಲ್ಲಿ ಏಕಾರ್ಥದ ಶುಭಸೂಚಿಯಾಗಿ ಪ್ರಾಪ್ತವಾದ ಆ ಕನಸಿನ ವಿಚಾರಕ್ಕಾಗಿ ಅತ್ಯಂತ ಸಮಾಧಾನಪಟ್ಟುಕೊಂಡು ಆ ದಂಪತಿಗಳು ದೀನದಯಾಪರರಾದ, ದೇವಾದಿದೇವರಾದ ಶಂಕರಪಾರ್ವತಿಯರನ್ನು ಅನನ್ಯಭಾವದಿಂದ ಸ್ತೋತ್ರಮಾಡಿ, ಮುಂದೆ ತಪಸ್ಸನ್ನು ಸಾಕುಮಾಡಿ ಮನೆಯನ್ನು ಸೇರಿ ಎಂದಿನಂತೆ ಗೋಬ್ರಾಹ್ಮಣಸೇವಾತತ್ಪರರಾಗಿರುತ್ತಿದ್ದರು

ಶಿವಗುರುವು, ದೀನರಾದ ತಮ್ಮ ಮೊರೆಯನ್ನು ಲಾಲಿಸಿ ವರಪ್ರದಾನ ಮಾಡಿದ ಪರಮೇಶ್ವರನ ಪ್ರೀತ್ಯರ್ಥವಾಗಿ ಮುಂದೊಂದು ದಿನ ಬ್ರಾಹ್ಮಣಸಂತರ್ಪಣೆ ಮಾಡಿದನು ಬ್ರಾಹ್ಮಣಸುವಾಸಿನಿಯರೆಲ್ಲರೂ ದಿವ್ಯಭಕ್ಷ್ಯಭೋಜ್ಯಗಳಿಂದಲೂ, ಭೂರಿದಕ್ಷಿಣೆ ತಾಂಬೂಲಗಳಿಂದಲೂ ತೃಪ್ತರಾಗಿ ಹೊರಟು ನಡೆದ ತರುವಾಯ ಶಿವಗುರುವು ಪತ್ನಿಯೊಂದಿಗೆ ಭಗವತ್ಪ್ರಸಾದವನ್ನು ಭುಜಿಸಲುದ್ಯುಕ್ತನಾದನು ಆಗ ಆ ಅನ್ನವನ್ನು ಅತಿಶಯ ಪ್ರಕಾಶಮಾನವಾದ ದಿವ್ಯತೇಜಸ್ಸೊಂದು ಪ್ರವೇಶಿಸಿದಂತೆ ಕಾಣಿಸಿತು ಅದನ್ನು ಕಂಡು ಆ ದಂಪತಿಗಳು ಪರಮೇಶ್ವರನ ಅವ್ಯಕ್ತ ಚರಿತೆಗಾಗಿ ಅದ್ಭುತಪಟ್ಟು ಆ ಶೇಷಾನ್ನವನ್ನು ಪರಮಾನಂದದಿಂದ ಭುಂಜಿಸಲು, ಮುಂದೆ ಕಾಲಧರ್ಮದಿಂದ ಸತೀಮಣಿಯಾದ ಶ್ರೀ ಆರ್ಯಾಂಬೆಯು ಗರ್ಭವನ್ನು ಧರಿಸಿದಳು

ಪರಶಿವನ ದಿವ್ಯತೇಜಸ್ಸನ್ನು ಗರ್ಭದಲ್ಲಿ ಧರಿಸಿದ ಸಾಧ್ವೀಮಣಿಯಾದ ಆರ್ಯಾಂಬೆಯ ಮುಖವು ಸುಪ್ರಸನ್ನವಾಯಿತು. ಚಿಂತೆಯು ಆಕೆಯನ್ನು ತೋರದಾಯಿತು. ಸ್ವಾಭಾವಿಕವಾಗಿ ಗರ್ಭಿಣಿಸ್ತ್ರೀಯರಿಗೆ ಪ್ರಾಪ್ತವಾಗುವಂತೆ ನಿದ್ರೆ ಆಯಾಸ ತಾಮಸಾದಿಗಳು ಆಕೆಗೆ ಸಂಭವಿಸವೆ, ಆಕೆಯು ಯಾವಾಗಲೂ ಪ್ರಸನ್ನಚಿತ್ತಳೂ ಭಗವದ್ಭಕ್ತಿನಿರತಳೂ, ದೀನದಯಾಪರಳೂ ಆಗಿದ್ದಳು ಯಾವಾಗಲೂ ಆಕೆಯು, ತನ್ನ ಗರ್ಭಸ್ಥಶಿಶುವು ಮುಂದೆ ಆರೋಗದೃಢಕಾಯನೂ, ವಿದ್ಯಾವಿನಯ ಸಂಪನ್ನನೂ, ತಪೋನಿರತನೂ, ಭಗವದ್ಭಕ್ತನೂ, ಸ್ವಧರ್ಮಾಭಿಮಾನಿಯೂ ಆಗಿ ಜಗನ್ಮಾನ್ಯನಾಗುವಂತೆ

ಕರುಣಿಸಬೇಕೆಂದು ಶ್ರೀಪರಶಿವಮೂರ್ತಿಯನ್ನು ಧ್ಯಾನಿಸುತ್ತಿದ್ದಳು ಹೀಗೆ ಆ ಪೂತಗರ್ಭವು ಮಾನವ ಶರೀರಧರ್ಮದಂತೆ ಒಂಬತ್ತು ತಿಂಗಳ ಕಾಲ ಬೆಳೆದು ಸುರಕ್ಷಿತವಾಗಿ ಅಭಿವೃದ್ಧಿಗೊಂಡಿತು ಮುಂದೆ *ಕ್ರಿ ಶ ೭೮೮ ನೆಯ ಒಂದಾನೊಂದು ವಿಭವಸಂವತ್ಸರ ವೈಶಾಖಮಾಸದ ಶುಕ್ಲಪಕ್ಷ ಪಂಚಮಿಯ ಶುಭದಿನದಲ್ಲಿ ಆರಿದ್ರಾ ನಕ್ಷತ್ರ ಯುಕ್ತವಾದ, ಮಧ್ಯಾಹ್ನದ ಅಭಿಜಿನ್ಮುಹೂರ್ತದಲ್ಲಿ ಜನ್ಮಕಾಲದ ಎಲ್ಲಾ ಗ್ರಹಗಳೂ ಅತ್ಯುಚ್ಚದೆಸೆಯಲ್ಲಿದ್ದು ಮಂಗಳಕರಗಳಾಗಿರಲು ಶ್ರೀಸತಿ ಆರ್ಯಾಂಬೆಯು ಧರ್ಮೋದ್ಧಾರಕನಾದ ಆ ಮಹಾತ್ಮನನ್ನು ಪ್ರಸವಿಸಿದಳು ಈ ಅಪ್ರತಿಮ ತೇಜೋವಂತವಾದ ಶಿಶುವು ಜನನವಾದಾಗ ಧನ್ಯರಾದ ಆ ತಾಯಿತಂದೆಗಳ ಮನಸ್ಸು ಎಷ್ಟುಮಟ್ಟಿಗೆ ತೃಪ್ತವಾಯಿತೆಂಬುದನ್ನು ಹೇಗೆ ಹೇಳಬಹುದು! ಅವರ ಆನಂದಕ್ಕೆ ಮೇರೆಯೇ ಇಲ್ಲದಾಯಿತು. ಒಡನೆಯೆ ಯಥೇಷ್ಟ ದಾನಗಳು ಕೊಡಲ್ಪಟ್ಟುವು ಬ್ರಾಹ್ಮಣರು ದಕ್ಷಿಣೆದಾನಗಳಿಂದಲೂ ದಿವ್ಯಭೋಜನಗಳಿಂದಲೂ ತೃಪ್ತಿಪಡಿಸಲ್ಪಟ್ಟರು. ಹಿರಣ್ಯದಾನ ಗೋದಾನಾದಿಗಳು ಸತ್ಪಾತ್ರಗಳಲ್ಲಿ ಕೊಡಲ್ಪಟ್ಟುವು ಸಕಲರ ಮನಸ್ಸೂ ಆನಂದವನ್ನು ಹೊಂದಿ ಪ್ರಸನ್ನವಾಗಿತ್ತು. ಅಷ್ಟುಮಾತ್ರವಲ್ಲ, ಶಿವತೇಜವು ಜಗತ್ತಿನಲ್ಲಿ ಅವತರಿಸಿದುದಕ್ಕಾಗಿಯೋ ಎಂಬಂತೆ ಪ್ರಕೃತಿಯಲೂ ಅನೇಕಾನೇಕ ಶುಭಸೂಚನಗಳು ತೋರಿದುವು. ಗಿಡಮರಬಳ್ಳಿಗಳು ಪುಷ್ಪಫಲಭರಿತವಾದುವು ನದಿಗಳು ತಿಳಿಯಾದ ನೀರಿನಿಂದ ತುಂಬಿ ಹರಿದುವು ಮೇಘಗಳು ದಿವ್ಯವೃಷ್ಟಿಯನ್ನು ಸುರಿಸಿದುವು. ಪಕ್ಷಿಗಳು ಮಂಜುಳಸ್ವರದಿಂದ ಗಾನಮಾಡಿದುವು ವಂಶೋದ್ಧಾರಕನಾದ ಒಬ್ಬ ಮಗನಿಗಾಗಿ ಬಹುಕಾಲಗಳಿಂದ ಹಲುಬಿ ಹಲುಬಿ ಹಂಬಲಿಸುತ್ತಿದ್ದ ಶಿವಗುರು-ಆರ್ಯಾಂಬೆಯರ ಮುಖಕಮಲಗಳು ತೇಜೋವಂತವಾದ ಆ ಪುತ್ರನ ಮುಖಮಂಡಲವೆಂಬ ಸೂರ್ಯೋದಯದಿಂದ ವಿಕಸಿತವಾಗಲು ಹೊರಬಿದ್ದ ನವಮಕರಂದಸಾರದಿಂದ ಅನೇಕಾನೇಕ ತುಂಬಿಗಳು ಆನಂದಗೊಂಡುವೆಂಬುದರಲ್ಲಿ ಆಶ್ಚರ್ಯವೇನು?

*ಈಚೆಗೆ ಕೆಲವರು ಅವರ ಗೊತ್ತಾದ ಜನ್ಮಕಾಲವನ್ನು ತಿಳಿವ ವಿಷಯದಲ್ಲಿ ವಿಶೇಷ ಪರಿಶ್ರಮಮಾಡಿ ಶ್ರೀಶಂಕರಾಚಾರ್ಯರು ೨೪೦೦ ವರ್ಷಗಳಿಗೆ ಮೊದಲು ಅವತರಿಸಿದ್ದರೆಂದು ಹೇಳುತ್ತಿದ್ದಾರೆ

## ಅಧ್ಯಾಯ ೨ "ವಿದ್ಯಾಭ್ಯಾಸ-ತೀವ್ರವೈರಾಗ್ಯ"

ಶಿವಗುರುವು ಯುಕ್ತಕಾಲಗಳಲ್ಲಿ ಜಾತಕರ್ಮ ನಾಮಕರಣಾದಿ ಮಹೋತ್ಸವಗಳನ್ನು ವಿಧ್ಯುಕ್ತರೀತಿಯಿಂದ ನೆರವೇರಿಸಿ ಮಗುವನ್ನು ಶಂಕರನೆಂಬ ಪವಿತ್ರನಾಮದಿಂದ ಕರೆದನು. ಬೇಕುಬೇಕೆಂದು ಬಹುದಿನಗಳಿಂದ ಬಯಸಿ ಬಯಸಿ ಹೆತ್ತ ಮಗುವನ್ನು ಆ ದಂಪತಿಗಳು ಎಷ್ಟುಮಟ್ಟಿನ ಮಮತೆ ಮೋಹಗಳಿಂದ ಮುದ್ದಿಸಿ ನಲಿಯುತ್ತಿದ್ದರು, ಆ ಕಂದಮ್ಮನ ಶಿಶುಸಹಜವಾದ ಆಟಪಾಟಗಳಿಂದ ಎಷ್ಟುಮಟ್ಟಿಗೆ ಆನಂದಾಂಬುಧಿಯಲ್ಲಿ ಮಗ್ನರಾಗುತ್ತಿದ್ದರು, ತಮ್ಮ ಮನೆಯ ನಿತ್ಯದ ಕೆಲಸಕಾರ್ಯಗಳನ್ನೂ ಹೆಚ್ಚೇನು ಹಸಿವೆ ಬಾಯಾರಿಕೆಗಳನ್ನೂ ಮರೆತು ಆ ಮಗುವಿನ ಬಾಲಲೀಲೆಗಳೊಂದಿಗೆ ತಾವೂ ಮಕ್ಕಳೋ ಎಂಬಂತೆ ಬೆರೆದು ಎಷ್ಟುಮಟ್ಟಿಗೆ ಸಂತೋಷಪಡುತ್ತಿದ್ದರು ಎಂಬುದರ ಗೊತ್ತಾದ ಪ್ರಮಾಣವನ್ನು, ತಮ್ಮ ಗೃಹಸ್ಥಧರ್ಮದಲ್ಲಿ ಅಂತಹ ಅನುಭವವನ್ನು ಹೊಂದಿದ ಮಾತಾಪಿತೃಗಳು ಮಾತ್ರ ತಿಳಿಯಬಲ್ಲರಲ್ಲದೆ, ಅದನ್ನು ಬರೆದು ತಿಳಿಸಲೂ, ತಿಳಿದುಕೊಳ್ಳಲೂ ಸಾಧ್ಯವಿಲ್ಲ! ಮಗುವು ಆ ಶಿಶುವ ಚಟುವಟಿಕೆ, ಅಸಾಧಾರಣ ತಿಳಿವಳಿಕೆಗಳಿಂದ ಎಲ್ಲರನ್ನೂ ಮುಗ್ಧರನ್ನಾಗಿ ಮಾಡಿಬಿಡುತ್ತಿದ್ದಿತು. ಆದರೇನು! ಶಿವಗುರುವು, ತನ್ನ ಮಗನು ಮುಂದ ಲೋಕೋಪಕಾರಕ್ಕಾಗಿ ಮಾಡಿದ ಮಹತ್ಕಾರ್ಯಗಳನ್ನು ನೋಡಿ ಸಂತೋಷಪಡುವ ಸುಯೋಗವನ್ನು ಮಾತ್ರ ಪಡೆದಿರಲಿಲ್ಲ! ಶಂಕರನಿಗೆ ಮೂರನೆಯ ವರ್ಷವು ತುಂಬುವ ವೇಳೆಗೇ ಆತನಿಗೆ ಮೃತ್ಯುವೊದಗಿತು! ಮುಂದೆ ತಾಯಿಯೇ ಮಗುವಿನ ಪೋಷಣೆಯ ಭಾರವನ್ನು ವಹಿಸಿದಳು. ಶಿವತೇಜೋಂಶಸಂಭವನಾದ ಆ ಬಾಲಕನು ಮೂರನೆಯ ವರ್ಷದೊಳಗಾಗಿ ವೇದಗಳಲ್ಲೂ ಶಾಸ್ತ್ರಗಳಲ್ಲೂ ಹೊಂದಿದ ಅಸಾಮಾನ್ಯ ಪರಿಚಯವನ್ನೂ ಆತನ ತೇಜಸ್ವಿತೆಯನ್ನೂ ನೋಡಿ ಎಲ್ಲರೂ ಅದ್ಭುತಪಡುತ್ತಿದ್ದರು. ಶಂಕರನ ಬಾಲ್ಯದಲ್ಲೂ ಶ್ರೀಕೃಷ್ಣ ಮುಂತಾದ ಅವತಾರ ಪುರುಷರ ಜೀವಮಾನದಲ್ಲಿ ನಡೆದಂತೆಯೇ ಅನೇಕ ಅದ್ಭುತ-ಅಮಾನುಷ ಕಾರ್ಯಗಳು ನಡೆದುವೆಂದು ಕೆಲಕೆಲವು ಕಥೆಗಳು ಹೇಳಲ್ಪಟ್ಟಿವೆ! ಅವುಗಳಲ್ಲಿ ಒಂದೆರಡನ್ನು ಇಲ್ಲ ಹೇಳುತ್ತೇವೆ. ಶಂಕರನಿಗೆ ಐದನೆಯ ವಯಸ್ಸಿನಲ್ಲಿ ಗೋವಿಂದ ಭಗವತ್ಪಾದರಿಂದ ಉಪ

ನಯನ ಸಂಸ್ಕಾರವು ನೆರವೇರಿತು. ಆ ವೇಳೆಗೇ ವೇದವೇದಾಂಗಾದಿಗಳಲ್ಲಿ ಅತಿಶಯ ಪ್ರಜ್ಞೆಯನ್ನು ಹೊಂದಿದ್ದ ಆ ಬಾಲಕನು ಕ್ರಮವಿದ್ಯಾಭ್ಯಾಸಕ್ಕಾಗಿ ಗುರುಕುಲವಾಸ ಮಾಡತೊಡಗಿದನು. ಈ ಬ್ರಹ್ಮಚರ್ಯಾಶ್ರಮದಲ್ಲಿದ್ದಾಗಲೇ, ಏಳನೆಯ ವಯಸ್ಸಿನಲ್ಲಿ ಒಂದಾನೊಂದು ದಿನ ಎಂದಿನಂತೆ ಒಂದು ಮನೆಯ ಬಾಗಿಲಲ್ಲಿ ನಿಂತು "ಭವತೀಭಿಕ್ಷಾಂದೇಹಿ" ಎಂದು ಕೂಗಿದನು ಆ ಮನೆಯಲ್ಲಿ ಒಬ್ಬಳೇಒಬ್ಬಳು ವಿಧವೆಮಾತ್ರ ವಾಸಿಸುತ್ತಿದ್ದಳು ಅವಳು ಅತಿಶಯ ದಾರಿದ್ರ್ಯದಿಂದ ಪೀಡಿತಳಾಗಿದ್ದಳಾದ್ದರಿಂದ ಆ ಬಾಲಕನಿಗೆ ಭಿಕ್ಷೆ ನೀಡುವುದಕ್ಕಾಗಿ ಮನೆಯಲ್ಲಿ ಏನೂ ಇಲ್ಲದಿರಲು, ತನ್ನ ದುರ್ದೈವಕ್ಕಾಗಿ ವ್ಯಸನಪಡುತ್ತಾ, ಆ ತೇಜಸ್ವಿಯಾದ ಬಾಲಬ್ರಹ್ಮಚಾರಿಯನ್ನು ಹತಾಶನನ್ನಾಗಿ ಕಳುಹಿಸಬೇಕಾದುದಕ್ಕಾಗಿ ಅತಿಶಯ ಮರುಗಿದಳು ಕೊನೆಗೆ ಮನೆಯನ್ನೆಲ್ಲಾ ಹುಡುಕಿನೋಡಲು ಒಂದು ನೆಲ್ಲಿಯ ಕಾಯಿ ಸಿಕ್ಕಿತು ಅದನ್ನೇ ತಂದು ಆತನ ಭಿಕ್ಷಾಪಾತ್ರೆಯಲ್ಲಿ ಹಾಕಿ, "ಅಪ್ಪಾ, ನಾನು ಗರ್ಭದರಿದ್ರಳು, ನನ್ನ ಮನೆಯಲ್ಲಿ ಇದು ಹೊರತು ಮತ್ತಾವ ಪದಾರ್ಥವೂ ಇಲ್ಲ. ನೀನು ಸದ್ಯಃ ಇದನ್ನೇ ಸ್ವೀಕರಿಸಿ ತೃಪ್ತನಾಗಬೇಕು" ಎಂದು ಕೇಳಿಕೊಂಡಳು ಆಕೆಯ ಧರ್ಮಬುದ್ಧಿಯನ್ನೂ ದೀನವಾಣಿಯನ್ನೂ ಕಂಡು, ಮೃದುಹೃದಯನಾದ ಆ ಬಾಲಕನ ಮನಸ್ಸು ಆಕೆಯ ಆ ಸ್ಥಿತಿಗಾಗಿ ಮರುಗಿ ಕರಗಿಹೋಯಿತು ಹೇಗಾದರೂ ಆಕೆಯನ್ನು ಆ ದುಸ್ಥಿತಿಯಿಂದ ಮುಕ್ತಮಾಡಬೇಕೆನ್ನಿಸಿತು. ಒಡನೇ ಅಲ್ಲೇ ನಿಂತು, ಲೋಕಮಾತೆ ಶ್ರೀಮಹಾಲಕ್ಷ್ಮೀದೇವಿಯನ್ನು ಧ್ಯಾನಿಸತೊಡಗಿದನು ಅನನ್ಯಭಕ್ತಿಭಾವದಿಂದ ಮಾಡಿದ ಶಂಕರಬಾಲಕನ ಆ ಪ್ರಾರ್ಥನೆಗೆ ಮೆಚ್ಚಿ ಮಹಾಲಕ್ಷ್ಮಿಯು ಒಡನೆ ಪ್ರತ್ಯಕ್ಷಳಾಗಿ, ತನ್ನನ್ನು ಪ್ರಾರ್ಥಿಸಿದ ಕಾರಣವೇನೆಂದು ಪ್ರಶ್ನಿಸಿದಳು ಆಗ ಶಂಕರನು, "ತಾಯೇ ಈ ಸಾಧ್ವಿಯು ಅತಿಶಯ ದಾರಿದ್ರ್ಯರೋಗದಿಂದ ಪೀಡಿತಳಾಗಿದ್ದಾಳೆ ಈಕೆಯ ಈ ಬಡತನವನ್ನು ಪರಿಹರಿಸು" ಎಂದು ಕೇಳಿಕೊಂಡನು ಆಗಲಾ ಲೋಕಮಾತೆಯು "ಮಗೂ ಈಕೆಯ ಜನ್ಮಾಂತರೀಯದುಷ್ಕರ್ಮವು ಅಗಾಧವಾಗಿರುವುದರಿಂದ ಈಕೆಗೆ ಐಶ್ವರ್ಯಪ್ರಾಪ್ತಿಯು ಲಭ್ಯವಿಲ್ಲ" ಎಂದು ನುಡಿದಳು ಆದರೆ ಶಂಕರನು ಆ ಪ್ರತ್ಯುತ್ತರದಿಂದ ಹತಾಶನಾಗಲಿಲ್ಲ "ತಾಯೇ, ಇಂತಹ ಅಸಹನೀಯ ದಾರಿದ್ರ್ಯದೆಸೆಯಲ್ಲಿದ್ದರೂ ನನಗೆ ಈ ನೆಲ್ಲೀ

ತಾಯಿಯನ್ನು ಮನಃಪೂರ್ವಕವಾಗಿ ದಾನಮಾಡಿರುವಳಾದುದರಿಂದ ಈಕೆಗೆ ಹೇಗಾದರೂ ಅನುಗ್ರಹಮಾಡಿ ಸಂಪತ್ತನ್ನು ಕೊಡಬೇಕು'' ಎಂದು ಪುನಃ ನಮ್ರತೆಯಿಂದ ಪ್ರಾರ್ಥಿಸಿದನು. ಲಕ್ಷ್ಮೀದೇವಿಯು ಆ ಬಾಲಕನ ಚಾತುರ್ಯಕ್ಕೆ ಮೆಚ್ಚಿ 'ತಥಾಸ್ತು' ವೆಂದಳು. ಒಡನೆ ಆಕೆಯ ಮನೆಯೆಲ್ಲವೂ ಸುವರ್ಣಮಯ ನೆಲ್ಲೀಕಾಯಿಗಳಿಂದ ತುಂಬಹೋಯಿತು ಮುಂದ ಆಕೆಯು ದಾನಧರ್ಮಾದಿಗಳಿಗೆ ಬಹು ಸಂಪತ್ತನ್ನು ವಿನಿಯೋಗಿಸುತ್ತಾ ಸುಖವಾಗಿ ಜೀವಿಸುತ್ತಿದ್ದಳು. ಶಂಕರನು ನಡೆಯಿಸಿದ ಈ ಅದ್ಭುತಕಾರ್ಯದ ವಿಚಾರವು ಎಲ್ಲೆಲ್ಲೂ ಹರಡಿ, ಎಲ್ಲರಿಗೂ ಆತನಲ್ಲಿ ಅತ್ಯಂತ ಗೌರವ ವುಂಟಾಯಿತು.

ಶಂಕರಬಾಲಕನಿಗೆ ಎಂಟುವರ್ಷ ವಯಸ್ಸಾಯಿತು. ಅದ್ಭುತಚರ್ಯೆಯುಳ್ಳ ಮತ್ತು ಶ್ರವಣಮಾತ್ರದಲ್ಲೇ ಸಕಲ ವಿದ್ಯೆಗಳ ಸಾರವನ್ನೂ ಗ್ರಹಿಸಬಲ್ಲ ಅಸಾಮಾನ್ಯ ಪ್ರಜ್ಞಾನಿಧಿಯಾದ ಆ ಬಾಲಕನು ಅತಿ ಶೀಘ್ರಕಾಲದಲ್ಲೇ ಕಾವ್ಯನಾಟಕಾಲಂಕಾರಾದಿಗಳು, ತರ್ಕನ್ಯಾಯಮೀಮಾಂಸಧರ್ಮಶಾಸ್ತ್ರಾದಿಗಳು, ಸಕಲೋಪನಿಷತ್ತುಗಳು, ವೇದವೇದಾಂಗಗಳು ಮುಂತಾದವುವುಗಳಲ್ಲೆಲ್ಲಾ ಅತಿಶಯ ಪ್ರಾವೀಣ್ಯತೆಯನ್ನು ಪಡೆದು, ಗುರುಕುಲವಾಸವನ್ನು ಮುಗಿಸಿ ಮನೆಯನ್ನು ಸೇರಿ ತಾಯಿಯ ಶುಶ್ರೂಷೆಯಲ್ಲೂ ವೇದಾಂತ ವಿಚಾರದಲ್ಲೂ ಕಾಲಕಳೆಯುತ್ತಿದ್ದನು ಒಂದಾನೊಂದುದಿನ ಆರ್ಯಾಂಬೆಯು ತನ್ನ ಮನೆಗೆ ಸುಮಾರು ಅರ್ಧ ಮೈಲು ದೂರದಲ್ಲಿದ್ದ ಪೂರ್ಣಾನದಿಗೆ ಸ್ನಾನಕ್ಕೆ ಹೋಗಿ ಅಲ್ಲಿಂದ ನೀರು ತರಲಾರದೆ ಬಿಸಿಲಿನಲ್ಲಿ ಬಸವಳಿದು ಬಿದ್ದಳು. ಅದನ್ನು ಕಂಡು ಮಾತೃಭಕ್ತನಾದ ಶಂಕರನು ಓಡಿಬಂದು ಬೇರೆ ಒಬ್ಬಿಬ್ಬರು ಬ್ರಾಹ್ಮಣಸ್ತ್ರೀಯರ ಸಹಾಯದಿಂದ ತಾನೇ ನೀರು ತಂದನು ಆಗ ಆತನ ಮನಸ್ಸಿನಲ್ಲಿ ನದಿಯು ಅಷ್ಟುದೂರ ಇರುವುದರಿಂದ ತನ್ನ ತಾಯಿಯೇ ಮೊದಲಾದ ಹೆಂಗಸರು ನೀರು ತಂದುಕೊಳ್ಳಲು ಕಷ್ಟವಾಗಿದೆ ಯೆಂಬ ಯೋಚನೆಯು ಹುಟ್ಟಿತು ಆ ಕಷ್ಟವನ್ನು ನೀಗಿಸಬೇಕೆಂದು, ಆತನು ಆ ರಾತ್ರಿ ಪೂರ್ಣಾನದಿಯ ಅಭಿಮಾನದೇವತೆಯನ್ನು ಕುರಿತು ಭಕ್ತಿಪೂರ್ವಕವಾಗಿ ಬೇಡಿಕೊಂಡನು. ಆಶ್ಚರ್ಯವಾಶ್ಚರ್ಯವು! ಮಾರನೆಯ ಪ್ರಾತಃಕಾಲವಾಗುವ ವೇಳೆಗೆ ನದಿಯು ಅವರ ಮನೆಗೆ ಸಮೀಪವಾಗಿಯೇ ಹರಿಯುತ್ತಿದ್ದಿತು.

ಇದನ್ನು ಕಂಡಮೇಲಂತೂ ಅಗ್ರಹಾರದವರಿಗೆ ಆತನ ವಿಷಯದಲ್ಲಿ ಅಧಿಕಾಧಿಕವಾದ ಗೌರವ ಮರ್ಯಾದೆಗಳುಂಟಾದುವು

ಶಂಕರಬಾಲಕನು ವಿದ್ಯಾಭ್ಯಾಸವನ್ನು ಮುಗಿಸಿ ಮನೆಯನ್ನು ಕುರಿತು ಬಂದೊಡನೆಯೇ, ಆತನಿಗೆ ವಿವಾಹಮಾಡುವ ಯೋಚನ ಪ್ರಯತ್ನಗಳು ನಡೆಯಲಾರಂಭವಾದುವು ಆದರೆ, ಆತನು ಮಾತ್ರ ಲೋಕೋದ್ಧಾರಕ್ಕಾಗಿ ಸಂಸಾರವನ್ನು ತ್ಯಜಿಸಿ ಸನ್ಯಾಸಾಶ್ರಮವನ್ನು ತೆಗೆದುಕೊಳ್ಳಬೇಕೆಂದು ಗಾಢವಾದ ಯೋಚನೆಯಲ್ಲಿ ಮಗ್ನನಾಗಿದ್ದನು ಆರ್ಯಾಂಬೆಯು ಸಂಬಂಧಿಗಳಲ್ಲೇ ಉತ್ತಮಕನ್ಯೆಯನ್ನು ಹುಡುಕಿ ನೋಡುವುದರಲ್ಲೂ, ಕನ್ಯಾವರರಿಬ್ಬರ ಜಾತಕಗಳ ರಾಶಿಕೂಟಗಳನ್ನು ಕುರಿತು ಅತಿಶಯ ಆಸ್ಥೆಯಿಂದ ಜ್ಯೋತಿಷ್ಯರನ್ನು ವಿಚಾರಿಸುವುದರಲ್ಲೂ ನಿರತಳಾಗಿದ್ದಳು ಈ ಮಧ್ಯೆ ಒಂದು ದಿನ ಅವರ ಮನೆಗೆ ಅಗಸ್ತ್ಯ, ದಧೀಚಿ, ತ್ರಿಕಳ, ಉಪಮನ್ಯು, ಗೌತಮ ಮೊದಲಾದ ಮಹರ್ಷಿಗಳು ಬಂದು, ಶಂಕರಬಾಲಕನಿಂದ ಪೂಜಿತರಾಗಿ ಸುಖಾಸನಾಸೀನರಾದರು ಅವರವರಿಗೆ ವೇದಾಂತವಿಚಾರದಲ್ಲಿ ಬಹುದೀರ್ಘ ಸಂಭಾಷಣೆಗಳಾದುವು ಮಹಾತ್ಮರಾದ ಆ ಮಹರ್ಷಿಗಳೊಂದಿಗೆ ಶಾಸ್ತ್ರವಿಚಾರದಲ್ಲಿ ಚರ್ಚೆಮಾಡುತ್ತಾ ಇದ್ದ ತನ್ನ ಮಗನನ್ನು ಕಂಡು ಆರ್ಯಾಂಬೆಗೆ ಪರಮಾಶ್ಚರ್ಯವಾಯಿತು ಆಗಲಾಕೆಯು ಆ ಮಹರ್ಷಿಗಳಿಗೆ ದೀರ್ಘದಂಡವಾಗಿ ನಮಸ್ಕರಿಸಿ ಕೈಮುಗಿದುಕೊಂಡು "ಮಹಾಮಹಿಮರೇ ಪ್ರಪಂಚಸಾಮಾನ್ಯರಾದ ಇತರ ಬಾಲಕರಂತಲ್ಲದೆ, ಅಲೌಕಿಕ-ಅಮಾನುಷ ಪ್ರಜ್ಞೆಯನ್ನು ಪ್ರದರ್ಶಿಸುತ್ತಿರುವ ಈ ಬಾಲಕನು ಯಾರು! ಇವನ ಆಯುಃಪ್ರಮಾಣವೇನು? ಈ ಸಂಗತಿಯನ್ನು ನನಗೆ ತಿಳಿಸಿ ನನ್ನ ಮನಸ್ಸಂತೋಷಪಡಿಸಬೇಕು" ಎಂದು ಪ್ರಾರ್ಥಿಸಿಕೊಂಡಳು ಆ ಮಾತನ್ನು ಕೇಳಿ ಎಲ್ಲಾ ಋಷಿಗಳೆಲ್ಲರೂ ಸುಮ್ಮನಿರಲು, ಅಗಸ್ತ್ಯಮಹರ್ಷಿಗಳು ಆಕೆಯನ್ನು ಕುರಿತು "ತಾಯೇ, ನಿನ್ನೀಮಗನು ಸಾಮಾನ್ಯನಲ್ಲ ಶಿವತೇಜವೇ ಈ ರೂಪದಲ್ಲಿ ಲೋಕೋದ್ಧಾರಕ್ಕಾಗಿ ನಿನ್ನಲ್ಲಿ ಜನಿಸಿರುವುದೆಂದು ತಿಳಿ ಇದನ್ನು ತಿಳಿಸಿ ಈ ಪುಣ್ಯಜೀವಿಯನ್ನು ಕಂಡು ಹೋಗಬೇಕೆಂದು ನಾವು ಇಲ್ಲಿಗೆ ಬಂದೆವು. ನಿನ್ನ ಎರಡನೆಯ ಪ್ರಶ್ನೆಯ ವಿಷಯವನ್ನು ಕುರಿತು, ನೀವೇ ಜ್ಞಾಪಿಸಿಕೊಳ್ಳಿ! ನೀವು ದಂಪತಿಗಳು ಪುತ್ರಾಕಾಂಕ್ಷಿಗಳಾಗಿ ತಪಸ್ಸು ಮಾಡಿದಾಗ ಶಂಕರಮೂರ್ತಿ

ಯು ವೃದ್ಧಬ್ರಾಹ್ಮಣರೂಪದಿಂದ ಪ್ರತ್ಯಕ್ಷನಾಗಿ, "ಸಕಲ ವಿದ್ಯಾಪಾರಂಗತನೂ ಅಲ್ಪಾಯುಷ್ಯನೂ ಆದ ಒಬ್ಬನೇ ಮಗನು ಬೇಕೇ ಅಥವಾ ಮೂರ್ಖರೂ ದೀರ್ಘಾಯುಗಳೂ ಆದ ಅನೇಕಮಂದಿ ಪುತ್ರರ ಅಪೇಕ್ಷೆಯುಂಟೇ ಎಂದು ಪ್ರಶ್ನಿಸಿದಾಗ, ನೀನು ಅಲ್ಪಾಯುವಾದರೂ ಸಕಲ ವಿದ್ಯಾವಂತನೂ ಗುಣಾಢ್ಯನೂ ಆದ ಪುತ್ರನನ್ನೇ ಕರುಣಿಸಬೇಕೆಂದು ಅಪೇಕ್ಷಿಸಿದ್ದೆಯಲ್ಲವೇ? ಆದಕ್ಕನುಸಾರವಾಗಿಯೇ ಈ ಬಾಲಕನಿಗೆ ಮೊದಲೇ ಗೊತ್ತಾದಂತೆ ಎಂಟುವರ್ಷಗಳು ಆಯುಃಪ್ರಮಾಣಮಾತ್ರವುಂಟು! ಆದರೂ ಈತನು ಬಾಲ್ಯದಿಂದಲೂ ಸದ್ವ್ಯಾಸಂಗಮಾಡಿ, ತತ್ವಚಿಂತಾಪರನಾಗಿ, ವಿನಯವಿಧೇಯತೆಗಳಿಂದ ಕೂಡಿ ಮಹರ್ಷಿಗಳ ಮನಸ್ಸಿಗೆ ಅತ್ಯಂತ ತೃಪ್ತಿಯನ್ನುಂಟುಮಾಡಿದುದರಿಂದ ಅವರು ಸುಪ್ರೀತರಾಗಿ ಈತನ ಆಯುಃಕಾಲವನ್ನು ಮತ್ತೆಂಟು ವರ್ಷಕಾಲ ಹೆಚ್ಚಿಸಿರುತ್ತಾರೆ" ಎಂದು ನುಡಿದು ಒಡನೆ ಎಲ್ಲಿಯೂ ಅದೃಶ್ಯರಾದರು.

ಯಾರದರ್ಶನ ಸಂಭಾಷಣಾದಿಗಳು ಮಾನವರಿಗೆ ಪರಮದುರ್ಲಭವೋ ಅಂತಹ ಅಗಸ್ತ್ಯಾದಿ ಮಹರ್ಷಿಗಳು ತಾವಾಗಿಯೇ ಬಂದು, ಸಂಭಾಷಿಸಿ ಆಶೀರ್ವದಿಸುವಂತಹ ಗುಣಾಢ್ಯತೆಯನ್ನು ಹೊಂದಿದ ತನ್ನ ಮಗನ ಪ್ರತಿಭೆಗಾಗಿ ಆರ್ಯಾಂಬೆಯು ಹೆಚ್ಚಳಪಡುವುದೇನತಿಶಯ! ಆಕೆಯು ತನ್ನಾ ಏಕಪುತ್ರನಿಗೆ ವಿವಾಹಮಾಡಿ ಮನೆಯ ಆಸ್ತಿಗೆ ಉತ್ತರಾಧಿಕಾರಿಗಳಾದ ತನ್ನಾ ಚಿಕ್ಕವಯಸ್ಸಿನ ಮಗಸೊಸೆಯರು ಸಂಸಾರಮಾಡುವುದನ್ನು ನೋಡಿ ನೇತ್ರಾನಂದವನ್ನು ಹೊಂದಬೇಕೆಂದು ಅಗಾಧ ಆಸೆಯನ್ನಿಟ್ಟುಕೊಂಡು ಸುಖದ ಕನಸು ಕಾಣುತ್ತಿದ್ದುದೂ ಲೌಕಿಕಸಾಮಾನ್ಯವಾದುದೇ! ಆದರೇನು? ಶಂಕರನು ಜನ್ಮಸನ್ಯಾಸಿಯು! ಆತನನ್ನು ಭೂಮಿಕಾಣಿಗಳು, ವಸ್ತ್ರಒಡವೆಗಳು, ಊಟಉಪಚಾರಗಳು, ಗಂಧ ಪುಷ್ಪ ತಾಂಬೂಲ ಕಾಮಿನೀಕಾಂಚನಾದಿ ಭೋಗಸಾಮಗ್ರಿಗಳು ಮುಂತಾದುವು ಪ್ರಪಂಚಕ್ಕೆ ಬಂಧಿಸಲು ಶಕ್ತವಾಗಲಿಲ್ಲ. ಸದಾತತ್ವಚಿಂತಾಪರನಾಗಿದ್ದು ಬಿಡುವನು. ಶಂಕರನ ಈ ಮನಸ್ಥಿತಿಯು ಆರ್ಯಾಂಬೆಯ ಆಸೆಗಳನ್ನೆಲ್ಲಾ ಹಾಳಿಸಿಬಿಟ್ಟಿತು. ತನ್ನ ಮಗನು ದಿವ್ಯವಸ್ತ್ರಾಭರಣಗಳಿಂದ ಅಲಂಕೃತನಾಗಿ ಪತ್ನಿಯೊಂದಿಗೆ ಬಾಸಿಂಗವನ್ನು ಕಟ್ಟಿಕೊಂಡು ಹಸೆಮಣೆಯನ್ನೇರಿದುದನ್ನು ನೋಡಿ ಕಣ್ಣಿಗೆ ಹಬ್ಬವನ್ನುಂಟುಮಾಡಿಕೊಳ್ಳಬೇಕೆಂದಿದ್ದ ಆ ಸಾಧ್ವಿಗೆ, ಆ ತನ್ನ ಮಗನು ಶಿರೋಮುಂಡನಮಾಡಿಸಿಕೊಂಡು ಕಾ

ವಿಯ ವಸ್ತ್ರವನ್ನು ಧರಿಸಿ ಕೈಯಲ್ಲಿ ಭಿಕ್ಷಾಪಾತ್ರೆಯನ್ನು ಹಿಡಿದು, ಗ್ರಾಮೈಕರಾತ್ರಿಯಾಗಿ ತಿರುಗಲು ಸಿದ್ಧನಾಗಿದ್ದಾನೆಂಬ ಯೋಚನೆಯೇ ಸಿಡಿಲು ಬಡಿದಂತಾಯಿತು. ಆದರೆ ಮಾಡುವುದೇನು? ಎಷ್ಟೋ ಮರುಗಿದಳು, ಅತ್ತಳು, ಕಣ್ಣೀರುಕಾಲುವೆಗಳನ್ನೇ ಹರಿಸಿದಳು ತನ್ನ ವೃದ್ಧಾಪ್ಯದಲ್ಲಿ ಹತ್ತಿರ ಕುಳಿತು ಆದರಿಸಿ, ಮೃತಳಾಗಲು ವಂಶಾಚಾರದಂತೆ ದಹನಕ್ರಿಯೆಗಳನ್ನು ನಡೆಯಿಸಿ, ಸದ್ಗತಿಯನ್ನು ಕಾಣಿಸುವುದಕ್ಕೂ ಯಾರೂ ಇಲ್ಲದೆ, ತನ್ನ ಬಾಳು ಬೀದಿಯ ಹೆಣವಾಗಿ ಹೋಗುವಂತಾಯಿತಲ್ಲಾ, ಎಂದು ಎಷ್ಟೋ ಹಲುಬಿಕೊಂಡಳು. ಆಗಲಾ ಬಾಲಕನು,—"ತಾಯೇ ಯೋಚಿಸಬೇಡ ನಿನಗೆ ಯಾವ ಸಮಯದಲ್ಲಿ ನನ್ನ ಅತಿಶಯ ಆವಶ್ಯಕತೆ ಬೀಳುವುದೋ ಆಗ ನನ್ನನ್ನು ನೆನೆದು ಧ್ಯಾನಮಾಡು ಒಡನೆ ಬಂದು ನಿನ್ನ ಸೇವೆಯಲ್ಲಿ ತೊಡಗುವೆನು ನಿನ್ನೀದೇಹದ ದಹನಸಂಸ್ಕಾರಾದಿಗಳನ್ನು ಕುರಿತು ಯೋಚಿಸುವೆಯಲ್ಲವೆ? ಆ ವಿಷಯದಲ್ಲೂ ನಿಶ್ಚಿಂತಳಾಗಿರು ನಾನು ಸನ್ಯಾಸಿಯಾದರೂ ಬಾಧಕವಿಲ್ಲ. ನಿನ್ನ ದಹನಸಂಸ್ಕಾರವನ್ನು ನಾನೇ ಮಾಡಿ ನಿನ್ನ ಆತ್ಮಕ್ಕೆ ತೃಪ್ತಿಯನ್ನುಂಟುಮಾಡುವೆನು" ಎಂದು ಒಪ್ಪಿಸಿದನು. ಆದರೂ ಹೆತ್ತ ಹೊಟ್ಟೆಯಲ್ಲವೆ? ಅಷ್ಟು ಚಿಕ್ಕವಯಸ್ಸಿನಲ್ಲಿ ತನ್ನ ಮಗನು ಸನ್ಯಾಸಿಯಾಗಿ ಹೋಗಲು ಸಮ್ಮತಿಸಿ ಅಪ್ಪಣೆ ಕೊಡಲು ಆಕೆಗೆ ಇಷ್ಟವಿಲ್ಲದಾಯಿತು ಕೆಲದಿನಗಳು ಕಳೆದುವು

ಶಂಕರನು ತನ್ನ ಮನಸ್ಸಿನಲ್ಲಿ ಈ ರೀತಿ ಕಾಲವು ವ್ಯರ್ಥವಾಗಿ ಹೋಗುತ್ತಿದ್ದುದನ್ನು ಕಂಡು ಸ್ವಲ್ಪ ಬೇಸರಗೊಂಡನು ಆದರೇನು ಮಾಡಲಾದೀತು. ತನ್ನಾ ತಾಯಿಯ ಅಪ್ಪಣೆಯಿಲ್ಲದೆ ಸನ್ಯಾಸ ಧರ್ಮವನ್ನು ಸ್ವೀಕಾರಮಾಡಲು ಸಾಧ್ಯವಿರಲಿಲ್ಲ ಇಷ್ಟರಲ್ಲಿ ಒಂದು ಸಂದರ್ಭ ಪ್ರೊದಗಿತು ಒಂದಾನೊಂದು ದಿನ ತಾಯಿಮಕ್ಕಳಿಬ್ಬರೂ ಪಕ್ಕದಲ್ಲಿದ್ದ ಪೂರ್ಣಾನದಿಗೆ ಸ್ನಾನಕ್ಕಾಗಿ ಹೋಗಿದ್ದರು ಶಂಕರನು ಆಳವಾದ ನೀರಿನಲ್ಲಿಳಿದು ಸ್ನಾನಮಾಡುತ್ತಿದ್ದನು ಆಗ ಅಕಸ್ಮಾತ್ತಾಗಿ ಒಂದು ಮೊಸಳೆಯು ಅವನ ಕಾಲನ್ನು ಹಿಡಿದು ಒಳಕ್ಕೆ ಎಳೆಯಲು ಆರಂಭಿಸಿತು ನೀರಿನಲ್ಲಿದ್ದು ಸ್ಥಾನಬಲದಿಂದ ಅತ್ಯಂತ ಪ್ರಬಲವಾಗಿದ್ದ ಆ ಮೊಸಳೆಯ ಹಿಡಿತದಿಂದ ತಪ್ಪಿಸಿಕೊಂಡು ಜೀವಿಸುವುದು ಅಸಾಧ್ಯವೆಂದು ತೋರಿತು ಆಗ ಶಂಕರನು "ಅಮ್ಮಾ, ಹೋದೆ, ಹೋದೆ! ಮೊಸಳೆಯು ನನ್ನ ಕಾಲು ಹಿಡಿದು ಒಳಕ್ಕೆಳೆಯುತ್ತಿದೆ ಈಗಲಾದರೂ ನನ್ನ ಸ

ನ್ಯಾಸಕ್ಕೆ ಸಮ್ಮತಿಸು ಮಾನಸಸನ್ಯಾಸವನ್ನು ವಹಿಸಿ ಸ್ವಸ್ಥಚಿತ್ತದಿಂದ ಪ್ರಾಣಬಿಡುತ್ತೇನ ಇಲ್ಲದಿದ್ದರೆ ನನ್ನ ಜನ್ಮವು ವ್ಯರ್ಥವಾಗುವುದಲ್ಲಾ" ಎಂದು ಕೇಳಿಕೊಂಡನು ಅಂತಹ ಆಪತ್ಕಾಲದಲ್ಲಿ ಮುಂದೇನು ಮಾಡಲೂ ತೋರದಂತಾಯಿತು ಆಗ ಆರ್ಯಾಂಬೆಯು, "ಅಕಟಾ ಮಗನೇ, ದೈವ ಚಿತ್ತಕ್ಕೆ ಬಂದಂತಾಗಲಿ' ಸನ್ಯಾಸಿಯಾಗಿ, ಮನಶಾಂತಿಯನ್ನು ಹೊಂದು" ಎಂದು ನುಡಿದಳು ಒಡನೆಯೇ ಶಂಕರನು, ಮಾನಸಸನ್ಯಾಸಕ್ಕೆ ಸಂಕಲ್ಪಮಾಡಿದನು. ಆಶ್ಚರ್ಯಾಶ್ಚರ್ಯವು' ಜಲದೊಳಗಿನ ಮೊಸಳೆಯು ಕಾಲು ಬಿಟ್ಟುಹೋಯಿತು ಶಂಕರನು ಮೇಲಕ್ಕೆ ಬಂದು, ತಾಯಿಗೆ ಪೂರ್ವದಂತೆಯೇ ಭರವಸೆಕೊಟ್ಟು, ಆಕೆಯನ್ನೂ ತನ್ನ ಸಂಬಂಧವಾದ ಸಮಸ್ತ ಆಸ್ತಿಐಶ್ವರ್ಯಗಳನ್ನೂ ಸಂಬಂಧಿಗಳ ವಶಪಡಿಸಿ, ತೀವ್ರವೈರಾಗ್ಯವನ್ನು ಸ್ವೀಕರಿಸಿ ಕ್ರಮಸನ್ಯಾಸಕ್ಕೆ ಯೆಕ್ಕೆ ಕೂಡುವ ಗುರುವರ್ಯನನ್ನು ಹುಡುಕುತ್ತಾ ಮನೆಯನ್ನು ಬಿಟ್ಟು ಹೊರಟನು



## ಅಧ್ಯಾಯ ೩ "ಕಾಶೀಕ್ಷೇತ್ರವಾಸ-ಗ್ರಂಥರಚನೆ"

ಮಾನವನಾಗಿಜನ್ಮವೆತ್ತಿದವನು. ಲೋಕಸಂಗ್ರಹಣದ ಯಾವುದಾದರೂಂದು ಮಹೋದ್ದೇಶವನ್ನು ಮನಸ್ಸಿನಲ್ಲಿಟ್ಟು, ಅದರ ಸಾಧನೆಗಾಗಿ ಸ್ವಾರ್ಥವನ್ನು ತ್ಯಜಿಸತಕ್ಕುದೇ, ಜೀವಿತಕ್ಕೆ ಭೂಷಣವನ್ನುಂಟುಮಾಡುವ ಮಹತ್ಕಾರ್ಯವು. ಹೀಗೆ ಯಾರು ಲೋಕಸೇವೆಗಾಗಿ ತಮ್ಮ ಕ್ಷುದ್ರಸ್ವಾರ್ಥತೆಯನ್ನು ನೀಗಿ, ಕಷ್ಟನಷ್ಟಗಳಿಗೆ ತಲೆಕೊಟ್ಟು ಹೊರಡುವರೋ ಅವರಿಂದಲೇ ಪ್ರಪಂಚದಲ್ಲಿ ಮಹತ್ಕಾರ್ಯಗಳು ನಡೆದು ದೇಶೋದ್ಧಾರ-ಲೋಕೋದ್ಧಾರ ಕಾರ್ಯಗಳಾಗುವುವು ಹಿಂದೆ ಭಗವಾನ್ ಬುದ್ಧದೇವನೂ ಇಂತಹ ಮಹೋದ್ದೇಶವೊಂದನ್ನು ಮನಸ್ಸಿನಲ್ಲಿಟ್ಟೇ, ಸಮಸ್ತ ರಾಜವೈಭವಗಳಿಗೂ ತಿಲಾಂಜಲಿಯನ್ನಿತ್ತು ಮಧ್ಯರಾತ್ರಿಯಲ್ಲಿ ಏಕಾಂಗಿಯಾಗಿ ಹೊರಟಿದ್ದನು. ಸಾವಿರ ವರ್ಷಗಳ ತರುವಾಯ ಮತ್ತೊಬ್ಬ ಬ್ರಾಹ್ಮಣವಟುವು ಸಮಸ್ತವನ್ನೂ ತ್ಯಜಿ

ಸಿ ಧರ್ಮೋದ್ಧಾರಕ್ಕಾಗಿ ಗುರುವನ್ನು ಹುಡುಕಿಕೊಂಡು ಏಕಾಂಗಿಯಾಗಿ ಹಾಗೆಯೇ ಹೊರಟನು.

ಬಾಲಶಂಕರರು ತಾಯಿಯಿಂದ ಕಳುಹಿಸಿಕೊಂಡು ಅನೇಕ ಗಿರಿವನಗಳು, ಕೆರೆತೊರೆಗಳು, ಹಳ್ಳಿಹೊಳಲುಗಳನ್ನು ದಾಟಿ, ಪ್ರಯಾಣಮಾಡುತ್ತಾ ಏಕಾಂಗಿಯಾಗಿ ನಡೆದು ನರ್ಮದಾ ತೀರಪ್ರಾಂತವನ್ನು ಸೇರಿದರು ಅಲ್ಲಿ ಅವರಿಗೆ ಶ್ರೀ ಗೌಡಪಾದರ ಪಟ್ಟಶಿಷ್ಯರೂ ಮಹಾವಿದ್ವಾಂಸರೂ ಸುಪ್ರಸಿದ್ಧ ಯೋಗಿವರ್ಯರೂ ಆದ ಶ್ರೀ ಗೋವಿಂದ ಭಗವತ್ಪಾದಸ್ವಾಮಿಗಳವರ ದರ್ಶನವಾಯಿತು ಆಚಾರ್ಯರ ಜೀವಿತಗಳನ್ನು ಸಂಸ್ಕೃತದಲ್ಲಿ ಬರೆದಿರುವ ಮಾಧವಾಚಾರ್ಯರೂ (ವಿದ್ಯಾರಣ್ಯರು) ಚಿದ್ವಿಲಾಸಯೋಗೀಂದ್ರರೂ, ಶಂಕರ-ಗೋವಿಂದ ಭಗವತ್ಪಾದರ ಪ್ರಥಮಪರಿಚಯವನ್ನು ಬೇರೆ ಬೇರೆ ರೀತಿಗಳಲ್ಲಿ ಹೇಳಿದ್ದಾರೆ ಮಾಧವಾಚಾರ್ಯರು ತಾವು ರಚಿಸಿದ ಶಂಕರವಿಜಯದಲ್ಲಿ ''ಶಂಕರರು ಗೋವಿಂದ ಭಗವತ್ಪಾದರನ್ನು ಕಂಡು ನಮಸ್ಕರಿಸಲು ಅವರು ''ನೀನು ಯಾರು?'' ಎಂದು ಪ್ರಶ್ನಿಸಿದರು ಆ ಪ್ರಶ್ನೆಗೆ ಉತ್ತರವಾಗಿ ಶಂಕರರು ''ಗುರುವರ್ಯರೇ ನಾನು ಅಗ್ನಿಯಲ್ಲ ವಾಯುವಲ್ಲ, ಭೂಮಿಯಲ್ಲ, ನೀರೂ ಅಲ್ಲ, ಇದಾವುದೂ ಅಲ್ಲ, ಇವುಗಳೆಲ್ಲಕ್ಕೂ ಮೂಲಭೂತನಾಗಿ ಪ್ರಕಾಶಿಸುತ್ತಿರುವ ಆತ್ಮತತ್ತ್ವವೇ ನಾನು'' ಎಂದು ತಾವು ಮುಂದ ಸ್ಥಾಪಿಸಿ ಪ್ರಚಾರಗೊಳಿಸಿದ ಅದ್ವೈತ ಸಿದ್ಧಾಂತದ ಮೂಲಸೂತ್ರವನ್ನೇ ನುಡಿದುಬಿಟ್ಟರು'' ಎಂದೂ ಶಂಕರವಿಜಯವಿಲಾಸವೆಂಬ ಗ್ರಂಥದಲ್ಲಿ ಚಿದ್ವಿಲಾಸಯೋಗೀಂದ್ರರು, ''ಗೋವಿಂದ ಭಗವತ್ಪಾದರು 'ನೀನು ಯಾರು'' ಎಂದು ಪ್ರಶ್ನಿಸಲು ಶಂಕರರು ''ನಾನು ಕೇರಳದೇಶನಿವಾಸಿಯಾದ ಶಿವಗುರುವಿನ ಪುತ್ರನು ಚಿಕ್ಕಂದಿನಲ್ಲೇ ನನ್ನ ತಂದೆಯು ಸ್ವರ್ಗಸ್ಥನಾದುದರಿಂದ ನನ್ನ ತಾಯಿಯಿಂದಲೇ ಸಂರಕ್ಷಿತನಾದನು ನನಗೆ ಶಾಸ್ತ್ರಾದಿಗಳಲ್ಲಿ ತಕ್ಕಮಟ್ಟಿಗೆ ಶಿಕ್ಷಣದೊರೆತಿದೆ ಈಗ ಸನ್ಯಾಸಿಯಾಗಲು ಅಪೇಕ್ಷಿಸುತ್ತೇನೆ' ಎಂದು ಹೇಳಿದರು'' ಎಂಬದಾಗಿಯೂ ಬರೆದಿರುತ್ತಾರೆ

ಗೋವಿಂದ ಭಗವತ್ಪಾದರು, ಆ ಬಾಲವಟುವಿನ (ವಿದ್ಯಾರಣ್ಯಪರ) ಭಾಷಣಕ್ಕಾಗಿಯೂ ತೇಜಸ್ವಿತೆಗಾಗಿಯೂ ಪರಮಸಂತೋಷಪಟ್ಟರು. ಕ್ರಮಸನ್ಯಾಸಕ್ಕೆ ಅಂಗಭೂತಗಳಾದ ಕ್ರಿಯಾಕಲಾಪಗಳೆಲ್ಲಾ ನೆರವೇರಿಸಲ್ಪ

ಟ್ಟು, ಭಗವತ್ಪಾದರು, ತತ್ವಮಸ್ಯಾದಿ ಮಹಾವಾಕ್ಯಗಳನ್ನೂ ಸನ್ಯಾಸಿಗಳು ತಿಳಿಯಬೇಕಾದ ಗೂಢವಿಷಯಗಳನ್ನೂ ಉಪದೇಶಿಸಿ ಶಂಕರರನ್ನು ಚತುರ್ಥಾಶ್ರಮ ಸ್ವೀಕಾರಗೊಳಿಸಿದರು ತರುವಾಯ, ತಾವು ಗೌಡಪಾದರಿಂದ ಅಭ್ಯಾಸಮಾಡಿದ್ದ ತಾತ್ವಿಕ ಸಿದ್ಧಾಂತಗಳನ್ನೂ ಯೋಗರಹಸ್ಯವನ್ನೂ ಸಾದ್ಯಂತವಾಗಿ ಬೋಧಿಸಿದರು ಶಂಕರರು ಎಷ್ಟು ವರ್ಷಕಾಲ ಅಲ್ಲಿ ಯೋಗವಿದ್ಯಾಭ್ಯಾಸ ಮಾಡಿಕೊಂಡಿದ್ದರು, ಅಲ್ಲಿಂದ ಹೊರಟುದು ಯಾವಾಗ ಎಂಬುದಕ್ಕೆ ಎಲ್ಲೂ ಉಲ್ಲೇಖವಿದ್ದಂತೆ ತೋರುವುದಿಲ್ಲ ಆದರೂ ಶಂಕರರು ತಮ್ಮ ಗುರುಸನ್ನಿಧಿಯಲ್ಲಿ ತಕ್ಕಷ್ಟು ದೀರ್ಘಕಾಲ ವಾಸಿಸಿದರೆಂದು ಊಹಿಸಬಹುದು ಏಕೆಂದರೆ ಅಲ್ಲಿಂದ ಹೊರಟಾಗ್ಗ ಅವರು ಶಾಸ್ತ್ರದರ್ಶನಾದಿಗಳಲ್ಲಿ ಅತ್ಯಂತ ಪ್ರೌಢಪಾರಿಯೂ, ಪ್ರೌಢತತ್ವದರ್ಶಿಯೂ, ಪ್ರೌಢಯೋಗಿಯೂ, ಮತ್ತು ಪ್ರೌಢಮತಬೋಧಕರೂ ಆಗಿದ್ದರು

ಯೋಗವಿದ್ಯಾಭ್ಯಾಸವು ಮುಗಿಯಿತು ಶಂಕರರು ಗುರುಗಳಿಂದ ಅಪ್ಪಣೆಪಡೆದು ಏಕಾಂಗಿಯಾಗಿ ಕಾಶೀಪಟ್ಟಣವನ್ನು ಕುರಿತು ಹೊರಟರು ಧನಸಹಾಯವಿಲ್ಲ, ಜನಸಹಾಯವಿಲ್ಲ, ಕೇವಲ ಏಕಾಂಗಿ! ಕೈಯ್ಯಲ್ಲೊಂದು ಕಮಂಡಲು ದಂಡಕಾಷ್ಟಗಳನ್ನು ಹಿಡಿದು ಕೇವಲ ತತ್ವಚಿಂತಾಪರರಾಗಿ, ನಿರ್ಭೀತರಾಗಿ, ಆ ದೇಶಿಕಸಾರ್ವಭೌಮರು, ವಿಶ್ವೇಶ್ವರಸಾನ್ನಿಧ್ಯದಿಂದ ಪರಮಪಾವನವಾದ ಮತ್ತು ಸಂಸ್ಕೃತ ಪ್ರೌಢವಿದ್ಯಾಪೀಠವೆನಿಸಿದ ಶ್ರೀಕಾಶೀಪಟ್ಟಣವನ್ನು ಕುರಿತು ಪ್ರಯಾಣ ಮಾಡತೊಡಗಿದರು ಅವರ ಎಳೆಯ ಪ್ರಾಯವೂ ತೇಜಃಪುಂಜವಾದ ಮುಖವೂ, ಧರಿಸಿದ್ದ ಕಾವಿಯ ವಸ್ತ್ರ ದಂಡಕಮಂಡಲುಗಳೂ ನೋಡಿದವರಿಗೆಲ್ಲಾ ಪರಮಾಶ್ಚರ್ಯವನ್ನುಂಟುಮಾಡುತ್ತಿದ್ದುವು ಯಾರೊಂದಿಗೂ ಮಾತನಾಡದೆ, ಕೇವಲ ಅಂತರ್ಮುಖಿಗಳಾಗಿ ಅನೇಕ ಗಿರಿವನಗಳು, ಕೆರೆಕೊರೆಗಳು ಹಳ್ಳಿಪಳ್ಳಿಗಳು ನಗರಗಳು ಮುಂತಾದುವುಗಳನ್ನು ಕಳೆದು ಶ್ರೀಕಾಶೀಕ್ಷೇತ್ರವನ್ನು ಸೇರಿದರು

ಮಹಾತೇಜಸ್ವಿಗಳೂ ಅದ್ವಿತೀಯ ಪ್ರೌಢಪಾಂಡಿತರೂ ಆದ ಶಂಕರರು ಶೀಘ್ರದಲ್ಲೇ ಕಾಶೀಪಟ್ಟಣದಲ್ಲಿ ಸುಪ್ರಸಿದ್ಧರಾಗಿ ಎಲ್ಲರ ಲಕ್ಷ್ಯವನ್ನೂ ತಮ್ಮ ಕಡೆಗೆ ಆಕರ್ಷಿಸತೊಡಗಿದರು. ಪ್ರಥಮದಲ್ಲಿ ದಕ್ಷಿಣದೇಶದಿಂದ ವಿದ್ಯಾಭ್ಯಾಸಕ್ಕಾಗಿ ಅಲ್ಲಿಗೆ ಹೋಗಿದ್ದ ವಿಷ್ಣುಶರ್ಮನೆಂಬಾತನು ಅವರಲ್ಲಿ ಶಿಷ್ಯ

ವೃತ್ತಿಯನ್ನು ಸ್ವೀಕರಿಸಿದನು. ಶಂಕರರು ಆತನಿಗೆ ಕ್ರಮಸನ್ಯಾಸವನ್ನು ಕೊಡಿಸಿ ಸನಂದನನೆಂಬ ನಾಮಧೇಯದಿಂದ ಕರೆದರು. ಈತನು ಆಚಾರ್ಯರಲ್ಲಿ ಅನನ್ಯಭಕ್ತಿಯನ್ನಿಟ್ಟು ಅವರು ಭೂಮಿಯಲ್ಲಿದ್ದಷ್ಟು ದಿನವೂ ಅವರನ್ನು ಎಡೆಬಿಡದೆ ಸೇವಿಸುತ್ತಿದ್ದನು. ಆಚಾರ್ಯರಿಗೂ ಆತನಲ್ಲಿ ಪರಮಪ್ರೇಮವಿದ್ದಿತು. ಇದನ್ನು ಕಂಡು, ತರುಣನಾಗಿ ಬಂದ ಕೆಲವುಮಂದಿ ಶಿಷ್ಯರು ಅಸಹನೆಪಟ್ಟಂತೆ ತೋರಲು, ಶಂಕರರು ತಮ್ಮ ಶಿಷ್ಯೋತ್ತಮನ ಗುರುಭಕ್ತಿಯ ಮಹಿಮೆಯನ್ನು ಅವರಿಗೆ ತೋರಿಸಬೇಕೆಂದು ಯೋಚಿಸಿ ಒಂದಾನೊಂದುದಿನ ಗಂಗಾನದಿಯ ಒಂದು ದಡದಲ್ಲಿ ಶಿಷ್ಯರಿಗೆ ಪಾಠಪ್ರವಚನ ಮಾಡಿಸುತ್ತಾ ಕುಳಿತಿದ್ದು ಮತ್ತೊಂದು ದಡದಲ್ಲಿದ್ದ ಸನಂದನನನ್ನು ಬಾರೆಂದು ಕರೆದರು. ಸನಂದನನು ಒಡನೆ ನದಿಯನ್ನು ದಾಟಿ ಬರಲು ಅಲ್ಲಿ ದೋಣಿಯಾಗಲೀ ಅಥವಾ ಮತ್ತಾವ ಸಾಧನವಾಗಲೀ ಇರಲಿಲ್ಲ. ಆಗಲಾ ಶಿಷ್ಯಾಗ್ರಣಿಯು, ತನ್ನ ಗುರುವರ್ಯರು ಅಪಾರವಾದ ಭವಸಾಗರವನ್ನೇ ದಾಟಿಸಲು ಶಕ್ತರಾಗಿರುತ್ತಿರುವಲ್ಲಿ ಈ ಚಿಕ್ಕ ನದಿಯನ್ನು ದಾಟುವುದು ಯಾವ ದೊಡ್ಡಕಾರ್ಯವೆಂದು ಅತಿಶಯಭಕ್ತಿಯಿಂದ ನದಿಯ ನೀರಿನಮೇಲೆಯೋ ಗಟ್ಟಿನೆಲದಮೇಲೆಯೋ ಎಂಬಂತೆ ನಡೆದು ಅವರ ಕಡೆಗೆ ಬರತೊಡಗಿದನು. ಗಂಗಾಮಾತೆಯೂ ಆತನ ಅನನ್ಯಗುರುಭಕ್ತಿಗೆ ಮೆಚ್ಚಿದಳೋ ಎಂಬಂತೆ, ಆತನ ಪಾದಗಳಿಗೆ ಸರಿಯಾಗಿ ನದಿಯಲ್ಲಿ ಉದ್ದಕ್ಕೂ ಕಮಲಪುಷ್ಪಗಳು ಏರ್ಪಟ್ಟು ಆತನನ್ನು ಸುರಕ್ಷಿತನಾಗಿ ಗುರುಸಾನ್ನಿಧ್ಯಕ್ಕೆ ತಂದುಬಿಟ್ಟುವು. ಆತನ ಗುರುಭಕ್ತಿಗಾಗಿ ಇತರ ಶಿಷ್ಯರು ಅದ್ಭುತಪಟ್ಟರು. ಶಂಕರರೂ ಅನುಪಮಮಟ್ಟಿನ ಅವಿರಳ ಭಕ್ತಿಭಾಗ್ಯವನ್ನು ಗಳಿಸಿದ್ದ ಆ ಶಿಷ್ಯನ ವಿಷಯದಲ್ಲಿ ಪರಮಸಂತೋಷಪಟ್ಟು ಆತನನ್ನು ಅಂದಿನಿಂದ ಪದ್ಮಪಾದನೆಂಬ ನಾಮಧೇಯದಿಂದ ಕರೆದರು.

ಕೆಲವು ದಿನಗಳಾದುವು. ಶ್ರೀ ಶಂಕರರು ಅದ್ವೈತ ತತ್ತ್ವಬೋಧಕರೆಂಬ ಕೀರ್ತಿಯು ಎಲ್ಲೆಲ್ಲೂ ಹಬ್ಬಿತು. ಒಂದು ದಿನ ದಿವಾಕರನೆಂಬ ಬ್ರಾಹ್ಮಣನೊಬ್ಬನು ಹುಟ್ಟುಮೂಗನಾದ ತನ್ನ ಮಗನನ್ನು ಕರೆದುಕೊಂಡು ಆಚಾರ್ಯರಲ್ಲಿಗೆ ಬಂದು ಆ ಬಾಲಕನನ್ನು ಅನುಗ್ರಹಿಸಿ ಕಾಪಾಡಬೇಕೆಂದು ಬೇಡಿಕೊಂಡನು. ಶಂಕರರು ಅವನು ಮೂಗನೆಂಬುದನ್ನು ತಿಳಿದಿದ್ದರೂ ಆ ಬಾಲಕನನ್ನು ಕುರಿತು—"ಎಲೈ ನೀನು ಯಾರು? ಯಾರ ಮಗನು? ಎಲ್ಲಿಂದ

ಬಂದೆ? ಎಲ್ಲಿಗೆ ಹೋಗುವೆ? ನಿನ್ನ ಹೆಸರೇನು? ಏಕೆ ಇಲ್ಲಿಗೆಬಂದೆ?'' ಎಂಬ ತಾತ್ವಿಕ ದೃಷ್ಟಿಯಿಂದ ಅಮೋಘಗಳೆಂದು ಗಣಿಸಲ್ಪಟ್ಟ ಪ್ರಶ್ನೆಗಳನ್ನು ಕೇಳಿದರು. ಅವರ ಪ್ರಭಾವವೆಂಥಾದ್ದೋ! ಹುಟ್ಟುಮೂಗನಾಗಿದ್ದ ಆ ಬಾಲಕನು, ಆ ಪ್ರಶ್ನೆಗಳಿಗೆ ತಡಬಡಿಸದೆ, ''ನಾನು ಮನುಷ್ಯನಲ್ಲ, ದೇವಯಕ್ಷನಾಗಲೀ ಬ್ರಾಹ್ಮಣಕ್ಷತ್ರಿಯ ವೈಶ್ಯಶೂದ್ರರಲ್ಲೊಬ್ಬನಾಗಲೀ ನಾನಲ್ಲ, ಅಲ್ಲದೆ ನಾನು ಬ್ರಹ್ಮಚಾರಿಯಾಗಲೀ ಗೃಹಸ್ಥನಾಗಲೀ ವಾನಪ್ರಸ್ಥ-ಸನ್ಯಾಸಿಯಾಗಲೀ ಅಲ್ಲ. ಆತ್ಮಸ್ವರೂಪವಾದ ತತ್ವವೇ ನಾನು!'' ಎಂಬ ಈ ಬಗೆಯ ನಿರ್ಧಾರದ ಪ್ರತ್ಯುತ್ತರವನ್ನು ಕೊಟ್ಟನು ಅದನ್ನು ಕೇಳಿ ತೃಪ್ತರಾದ ಶಂಕರರು, ದಿವಾಕರನನ್ನು ಕುರಿತು ಈ ಬಾಲಕನು ಸನ್ಯಾಸಕ್ಕೆ ಅರ್ಹನು ಎಂದು ಹೇಳಿ ಅವನಿಗೆ ಕ್ರಮಸನ್ಯಾಸವನ್ನಿತ್ತು ಅದ್ವೈತ ಸಿದ್ಧಾಂತವನ್ನು ಉಪದೇಶಿಸಿದರು. ಆ ಬಾಲಕನು ಆತ್ಮಸ್ವರೂಪವನ್ನು ಅಂಗೈಯುಲ್ಲಿನ ಆಮಲಕವೆಂದರ ನಲ್ಲಿಯು ಕಾಯಿಯುಂತೆ ಸಾದ್ಯಂತವಾಗಿ ತಿಳಿದುಹೇಳಿದನಾದುದರಿಂದ ಆತನಿಗೆ ಹಸ್ತಾಮಲಕನೆಂಬ ಸಾರ್ಥಕನಾಮವುಂಟಾಯಿತು

ಶ್ರೀ ಶಂಕರರು ಕಾಶಿಯಲ್ಲಿ ಶಿಷ್ಯರಿಗೆ ಪಾಠಪ್ರವಚನಾದಿಗಳನ್ನು ಹೇಳಿಕೊಂಡು ವಾಸಿಸುತ್ತಾ, ಗಂಗಾಸ್ನಾನ ವಿಶ್ವೇಶ್ವರದರ್ಶನ ಮುಂತಾದುವುಗಳಿಂದ ತೃಪ್ತರಾಗಿ, ತಮ್ಮ ಗುರುಗಳಾದ ಶ್ರೀ ಗೋವಿಂದ ಭಗವತ್ಪಾದರು ತಮಗೆ ಉಪದೇಶಿಸಿದ್ದ ಅದ್ವೈತ ಸಿದ್ಧಾಂತ ರೀತ್ಯಾ ಮಹದ್ಗ್ರಂಥಗಳಿಗೆ ಭಾಷ್ಯಗಳನ್ನು ಬರೆಯತೊಡಗಿದರು ಪ್ರಾರಂಭದಲ್ಲಿ ಶ್ರೀವಿಷ್ಣು ಸಹಸ್ರನಾಮಕ್ಕೆ ಭಾಷ್ಯವನ್ನು ಬರೆದು ತರುವಾಯ ಉಪನಿಷತ್ತುಗಳು, ಬ್ರಹ್ಮಸೂತ್ರಗಳು ಭಗವದ್ಗೀತೆ ಈ ಗ್ರಂಥಗಳಿಗೆ ಭಾಷ್ಯವನ್ನು ರಚಿಸಿದರೆಂದು ಹೇಳುತ್ತಾರೆ ಋಗ್ವೇದಕ್ಕೆ ಸಂಬಂಧಿಸಿದ ಐತರೀಯ ಮುಂತಾದುವು, ಸಾಮವೇದಕ್ಕೆ ಸಂಬಂಧಿಸಿದ ಕೇನಛಾಂದೋಗ್ಯಗಳು, ಕೃಷ್ಣ ಯಜುರ್ವೇದಕ್ಕೆ ಸಂಬಂಧಪಟ್ಟ ತೈತ್ತರೀಯ, ಕಠ, ಶ್ವೇತಾಶ್ವತರಗಳು, ಶುಕ್ಲ ಯಜುರ್ವೇದಕ್ಕೆ ಸೇರಿದ ಬೃಹದಾರಣ್ಯಕ ಮತ್ತು ಈಶ ಇವುಗಳೂ ಮತ್ತು ಅಥರ್ವವೇದದ ಪ್ರಶ್ನಮುಂಡೂಕ ಮಾಂಡೂಕ್ಯ ಎಂಬ ಈ ದ್ವಾದಶೋಪನಿಷತ್ತುಗಳಿಗೂ, ಶ್ರೀಕೃಷ್ಣಪರಮಾತ್ಮನಿಂದ ಅರ್ಜುನನಿಗೆ ಉಪದೇಶಿಸಲ್ಪಟ್ಟ ಸಕಲ ಯೋಗ್ಯರಹಸ್ಯಗಳನ್ನು ಒಳಕೊಂಡ ಶ್ರೀಮದ್ಭಗವದ್ಗೀತೆಗೂ, ಶ್ರೀವೇದವ್ಯಾಸಮಹರ್ಷಿಗಳಿಂದ ವಿರಚಿತ

ಗಾದ ವೇದಾಂತ ಸೂತ್ರಗಳಿಗೂ, ಸುಲಲಿತ ಸುಮನೋಹರ ಸಂಸ್ಕೃತ ವಾಣಿಯಲ್ಲಿ ಭಾಷ್ಯವನ್ನು ಬರೆದು ಶ್ರೀಶಂಕರರು ಲೋಕಕ್ಕೆ ಶಾಶ್ವತವಾದ ಮಹೋಪಕಾರ ಮಾಡಿದರು. ಅಲ್ಲದೆ ಶ್ರೀಮದಾಚಾರ್ಯರು, ಸ್ತೋತ್ರ ರಾಜ, ಅನುಸ್ಮೃತಿ, ಗಜೇಂದ್ರಮೋಕ್ಷ ಮೊದಲಾದುವುಗಳಿಗೂ ಭಾಷ್ಯವನ್ನು ಬರೆದರೆಂದು ತಿಳಿಯುಬರುತ್ತದೆ ಈ ಭಾಷ್ಯಗಳಲ್ಲದ ಆಚಾರ್ಯರು ಸಮಯಾನುಸಾರವಾಗಿ ಆಗಾಗ್ಗೆ ರಚಿಸಿ ಹೇಳಿದ ಸ್ತೋತ್ರಗಳಿಗೆ ಮಿತಿಯೇ ಇಲ್ಲ ಶೃತಿಸ್ಮೃತಿಗಳ ಪರಿಚಯುವಿಲ್ಲದವರಿಗೆ ಅದ್ವೈತಸಿದ್ಧಾಂತವು ಸುಲಭವಾಗಿ ಬೋಧವಾಗುವಂತೆ ವಿವೇಕಚೂಡಾಮಣಿ, ಆತ್ಮಬೋಧ, ಆತ್ಮಾನಾತ್ಮವಿವೇಕ, ಅಪರೋಕ್ಷಾನುಭೂತಿ, ಉಪದೇಶಸಾಹಸ್ರಿ ಮೊದಲಾದ ಅದ್ವೈತಪ್ರಕರಣ ಗ್ರಂಥಗಳೂ, ಅಲ್ಲದೆ ಭಕ್ತಿರಸಪ್ರಧಾನಗಳಾದ ದಕ್ಷಿಣಾಮೂರ್ತಿಸ್ತೋತ್ರ, ಶಿವಾನಂದಲಹರಿ, ಸೌಂದರ್ಯಲಹರಿ, ಗೋವಿಂದಾಷ್ಟಕ, ವೇದಸಾರ ಶಿವಸ್ತವ ಮುಂತಾದ ಸ್ತೋತ್ರಗಳೂ ಅವರಿಂದ ರಚಿಸಲಟ್ಟುವು ಸಂದರ್ಭ ದೊರೆತಂತೆಲ್ಲಾ ಆಚಾರ್ಯರು ಹೇಳಿದ ದ್ವಾದಶಮಂಜರಿಕಾಸ್ತೋತ್ರ, ಭಜಗೋವಿಂದಸ್ತೋತ್ರ ಮುಂತಾದ ಉಪದೇಶಪರಸ್ತೋತ್ರಗಳೂ ಜಗತ್ಪ್ರಸಿದ್ಧವಾಗಿವೆ ಹೀಗೆ ಶ್ರೀಮದಾಚಾರ್ಯರು ಶಿಷ್ಯರೊಂದಿಗೆ ಕಾಶೀಕ್ಷೇತ್ರದಲ್ಲಿ ವಾಸಿಸಿ ಅವಿನಾಶಿಗಳಾದ ಗ್ರಂಥಗಳನ್ನು ರಚಿಸಿ ಆಚಂದ್ರಾರ್ಕಸ್ಥಾಯಿಯಾದ ಉಜ್ವಲಕೀರ್ತಿಯನ್ನು ಸಂಪಾದಿಸಿದರು



## ಅಧ್ಯಾಯ ೪ "ಸುರೇಶ್ವರಾಚಾರ್ಯರು"

ಧರ್ಮೋದ್ಧಾರಕ್ಕಾಗಿ ಪ್ರಯತ್ನಿಸತಕ್ಕವರ ಕಾರ್ಯವು ಸುಲಭವಲ್ಲ ಪ್ರಪಂಚದಲ್ಲಿ, ಅಭಿವೃದ್ಧಿಕಾರ್ಯವೇ ಕಡಿದಾದುದು ಕೇವಲ ಧನಧಾನ್ಯವೃತ್ತಿ ಕ್ಷೇತ್ರಾದಿಗಳನ್ನು ಸಂಪಾದಿಸುವ ಕಾರ್ಯವು ಕೂಡ ಎಷ್ಟುಕಷ್ಟವಾದುದೆಂಬುದು ಎಲ್ಲರಿಗೂ ತಿಳಿದಿರುವುದು ಹೀಗಿರುವಲ್ಲಿ ಅವ್ಯಕ್ತವಾದ ಧಾರ್ಮಿಕ ಲಕ್ಷ್ಯವನ್ನು ಜನಗಳ ದೃಷ್ಟಿಗೆ ತಂದು ಆ ಮೂಲಕ ಪಾರಲೌಕಿಕವನ್ನು ಸಾಧಿಸಲು ಯತ್ನಿಸುವುದು, ಬಹುಕಷ್ಟಸಾಧ್ಯವೆಂಬಂತೆಯೇ

ತೋರುವುದೆಂದು ಹೇಳಬೇಕಾದುದೇನು? ಈ ಕೆಲಸಕ್ಕೆ ಕ್ಷುದ್ರಮನಸ್ಸಿನ-ಎದೆನಡುಕರು ಯೋಗ್ಯರಲ್ಲ! ಧೈರ್ಯಮೇರುಗಳೂ ಆತ್ಮವಿಶ್ವಾಸಿಗಳೂ ಮಾತ್ರವೇ ಕಷ್ಟ ಸಂಕಟಗಳಿಗೆ ಬೆದರದ, ಸುಖಸೌಲಭ್ಯಗಳಿಗೆ ಮರುಳಾಗದೆ ತಮ್ಮ ಲಕ್ಷ್ಯಸಾಧನೆಯಲ್ಲೇ ದೃಷ್ಟಿಯಿಟ್ಟು ನೇರವಾಗಿ ನಡೆದು ಇಂತಹ ಕಾರ್ಯಸಾಧನೆಮಾಡಲು ಯೋಗ್ಯರು. ಆದುದರಿಂದಲೇ ಆತ್ಮತತ್ವವು ಬಲಹೀನರಿಗೆ ಅಲಭ್ಯವಾದುದೆಂದು ಶ್ರುತಿಯು ಹೇಳುತ್ತಿದೆ.

ಶ್ರೀಶಂಕರ ಭಗವತ್ಪಾದರು, ಮೇಲ್ಕಂಡಂತೆ ವೇದಾಂತ ಸೂತ್ರಗಳಿಗೂ ಭಗವದ್ಗೀತೆ ವಿಷ್ಣುಸಹಸ್ರನಾಮ ಮತ್ತು ಉಪನಿಷತ್ತುಗಳಿಗೂ ಭಾಷ್ಯಗಳನ್ನು ಬರೆದುದು ಎಲ್ಲರಿಂದಲೂ ಸುಲಭವಾಗಿ ಅಂಗೀಕೃತವಾಗಲಿಲ್ಲ. ಅದಕ್ಕಾಗಿ ಅವರು ಅನೇಕಮಂದಿ ವಿದ್ವಾಂಸರನ್ನು ವಾದವಿವಾದಗಳಿಂದಲೂ, ವಿವರಣೆ ವಿಮರ್ಶೆಗಳಿಂದಲೂ ತೃಪ್ತಿಪಡಿಸಬೇಕಾಗಿದ್ದಿತು. ಒಂದಾನೊಂದು ಸಾರಿ ವೇದಾಂತ ಸೂತ್ರಕರ್ತೃಗಳಾದ ವ್ಯಾಸರೇ, ವೃದ್ಧಬ್ರಾಹ್ಮಣವೇಷದಿಂದ ಅವರಿಗೆ ದರ್ಶನವಿತ್ತರೆಂದೂ, ವ್ಯಾಸ-ಆಚಾರ್ಯರಿಬ್ಬರಿಗೂ ವೇದಾಂತ ಸೂತ್ರಗಳ ಭಾಷ್ಯವನ್ನು ಕುರಿತು ಅತಿಶಯ ಕಠೋರವಾದ ವಾದವಿವಾದಗಳು ನಡೆದುವೆಂದೂ ಉಪಾಖ್ಯಾತವಾಗಿದೆ. ಕೊನೆಗೆ ವ್ಯಾಸರು ಆಚಾರ್ಯರ ಸಮಂಜಸ ಪ್ರತ್ಯುತ್ತರಗಳಿಗೂ ಸೂತ್ರಾರ್ಥ ವಿವರಣೆಗಳಿಗೂ ಮೆಚ್ಚಿ ಸುಮುಖರಾಗಲು, ಶ್ರೀಶಂಕರರು ತಮ್ಮ ಜೀವಿತಕಾಲಾವಧಿಯು ತೀರಿತಾದುದರಿಂದ ತಮ್ಮ ಪರಲೋಕ ಪ್ರಯಾಣಕ್ಕೆ ಅನುಮತಿಸಬೇಕೆಂದು ವ್ಯಾಸರನ್ನು ಪ್ರಾರ್ಥಿಸಿದರಂತೆ! ಆಗಲವರು ಅಷ್ಟು ಶೀಘ್ರವಾಗಿಯೇ ಆಚಾರ್ಯರು ಹೊರಟುಹೋಗುವುದಾದರೆ ಅವರಿಂದ ರಚಿತಗಳಾದ ಭಾಷ್ಯಾದಿಗಳು ತಾಯಿಯನ್ನು ಕಳೆದುಕೊಂಡ ಮಕ್ಕಳಂತೆ ನಿರ್ಗತಿಕವಾಗಿ ಹೋಗುವುವೆಂದು ಯೋಚಿಸಿ, ಅವುಗಳ ಶಾಶ್ವತಪ್ರಯೋಜನವು ಪ್ರಪಂಚಕ್ಕೆ ಉಂಟಾಗಲು ಆಚಾರ್ಯರೇ ಸ್ವತಃ ಅವುಗಳನ್ನು ವಿವರಿಸಿ, ಉಪನ್ಯಸಿಸಿ, ಉಪದೇಶಿಸಿ, ಅಭಿವೃದ್ಧಿಗೊಳಿಸಬೇಕಾದುದು ಆವಶ್ಯಕವೆಂದು ಹೇಳಿ ಅವರ ಆಯುಸ್ಸನ್ನು ಪುನಃ ಹದಿನಾರು ವರ್ಷಗಳು ಹೆಚ್ಚಾಗುವಂತೆ ಅನುಗ್ರಹಿಸಿ ಅಂತರ್ಧಾನರಾದರಂತೆ!

ತರುವಾಯ ಆಚಾರ್ಯರು ಎಂದಿನಂತೆ ತಮ್ಮ ಶ್ರೇಷ್ಠಕಾರ್ಯಕಲಾಪಗಳಲ್ಲಿ ನಿರತರಾಗಿರುತ್ತಿರಲು ಒಂದುದಿನ ಕಾಶೀಪುರನಿವಾಸಿಯೂ ವಿಶ್ವನಾ

ಥಾಧ್ವರಿ ಎಂಬಾತನ ಪುತ್ರನೂ ಆದ ಕಳಾನಾಥನೆಂಬ ವಿಪ್ರೋತ್ತಮನು ಶ್ರೀ
ಆಚಾರ್ಯರ ಪ್ರಭಾವಕ್ಕೆ ಬೆರಗಾಗಿ ಅವರಲ್ಲಿ ಶಿಷ್ಯವೃತ್ತಿಯನ್ನು ವಹಿಸಿ ಧ
ನ್ಯನಾಗಬೇಕೆಂದು ಅವರ ಸಮೀಪಕ್ಕೆ ಬಂದನು ಆತನು ಸುಂದರಪದ
ಬಂಧುರಗಳಾಗಿ ರಮಣೀಯವಾದ ತೋಟಕವೃತ್ತಗಳಿಂದ ಆಚಾರ್ಯರನ್ನು
ಸ್ತುತಿಸಿ ಪಾದಾವನತನಾಗಲು ಅವರು ಪರಮಸಂತುಷ್ಟಾಂತರಂಗದಿಂದ ಆತ
ನನ್ನು ಆದರಿಸಿ, ತೋಟಕಾಚಾರ್ಯರೆಂಬನಾಮಧೇಯವನ್ನು ಅನುಗ್ರಹಿಸಿ ಆ
ತನನ್ನೂ ಆಪ್ತಶಿಷ್ಯವರ್ಗಕ್ಕೆ ಸೇರಿಸಿಕೊಂಡರು

ಕೆಲವು ದಿನಗಳು ಕಳೆದುವು ಬಹುಶಃ ಈ ಸುಮಾರಿನಲ್ಲೇ ಇರಬಹುದು!
ಅತ್ತ ಕಾಲಟಿಯಲ್ಲಿ ಆಚಾರ್ಯರ ತಾಯಿ ಆರ್ಯಾಂಬೆಗೆ ಮೃತ್ಯುಸನ್ನಿಹಿತವಾ
ಯಿತು. ಆಗಲಾಕೆಯು "ಪುತ್ರಾ ಶಂಕರಾ, ನನಗೆ ಮೃತ್ಯುವೇಳೆಯು ಬಂದೊ
ದಗಿರುವುದಲ್ಲಾ! ಬಂದು ನಿನ್ನ ಮುಖಕಮಲವನ್ನು ತೋರಿ ಆನಂದಗೊಳಿಸ
ಲಾರೆಯಾ!" ಎಂದು ಸಜಲನಯನಳಾಗಿ ಧ್ಯಾನಿಸಿದಳು ಯೋಗಬಲದಿಂದ
ಅಣಿಮಾದಿಅಷ್ಟಸಿದ್ಧಿಗಳನ್ನೂ ಪಡೆದಿದ್ದ ಆಚಾರ್ಯರಿಗೆ ಅದನ್ನು ಒಡನೆ ತಿಳಿಯು
ವುದು ಕಷ್ಟವಾಗಲಿಲ್ಲ ತಾವು ಮಾನಸಸನ್ಯಾಸಸ್ವೀಕಾರಮಾಡಿ ಮನೆಯಿಂದ
ಹೊರಡುವಾಗ ತಾಯಿಗೆ ಕೊಟ್ಟುಬಂದಿದ್ದ ವಾಗ್ದಾನದ ಜ್ಞಾಪಕವಾಯಿತು
ಒಡನೆ ಅಲ್ಲಿಂದ ಯೋಗಾರೂಢರಾಗಿ ಹೊರಟು ಕ್ಷಣಮಾತ್ರದಲ್ಲಿ ಕಾಲಟಿಯಲ್ಲಿ
ಬಂದಿಳಿದರು ಆಚಾರ್ಯರ ದಿವ್ಯಪ್ರಭಾವವನ್ನು ಏನೆಂದು ವರ್ಣಿಸಬಹುದು!

ಆರ್ಯಾಂಬೆಯು ಅವರನ್ನು ಕಂಡು ಪರಮಸಂತುಷ್ಟಳಾದಳು ಆ
ಚಾರ್ಯರು ಅತ್ಯಂತ ಕಾಹಿಲೆಯಿಂದ ಮೃತ್ಯುಮುಖಳಾಗಿದ್ದ ಆಕೆಗೆ ಆ ಕಾ
ಲಕ್ಕೆ ಆವಶ್ಯಕವಿದ್ದ ಯೋಗ್ಯ ಉಪಚಾರಮಾಡಿ ಮೃತ್ಯುವೇಳೆಯನ್ನು ಎದಿ
ರುನೋಡುತ್ತಾ ಇದ್ದರು ಮೃತ್ಯುವೂ ಒದಗಿತು ಆಕೆಯ ಅಪೇಕ್ಷೆಯಂ
ತೆ ಆಚಾರ್ಯರು ಮಾಡಿದ ಶ್ರೀಮಹಾವಿಷ್ಣು ಪ್ರಾರ್ಥನೆಗೆ ಮೆಚ್ಚಿ ಪ್ರಾ
ಪ್ತರಾದ ವಿಷ್ಣುದೂತರು ಆಕೆಯ ಆತ್ಮವನ್ನು ವಿಷ್ಣುಲೋಕಕ್ಕೆ ಕೊಂಡೊ
ಯ್ದರು ತರುವಾಯ ಆಚಾರ್ಯರು ಆ ವೃದ್ಧಳ ದೇಹವನ್ನು ಸಂಸ್ಕರಿಸಬೇ
ಕೆಂದು ನೆರೆಹೊರೆಯಲ್ಲಿದ್ದ ತಮ್ಮ ಪೂರ್ವಾಶ್ರಮದ ಬಂಧುಗಳನ್ನು ಕುರಿತು
ಹೇಳಿದರು ಅದಕ್ಕೆ ಅವರು ಯಾವ ಸಹಾಯವನ್ನೂ ಮಾಡದೆ ಸನ್ಯಾಸಿಯಾ
ದಮೇಲೆ ತಂದೆತಾಯಿಗಳ ವಿಚಾರವಾಗಲೀ ಅಂತ್ಯಸಂಸ್ಕಾರಾದಿಕರ್ಮಗಳ

ಸಂಬಂಧವಾಗಲೀ ಏಕೆಂದು ನಿರಾಕರಿಸಿ ಅವರಿಗೆ ಯಾವಬಗೆಯ ಸಹಾಯವ ನ್ನೂ ಕೊನೆಗೆ ದಹನಕ್ಕಾಗಿ ಬೆಂಕಿಯನ್ನೂ ಸಹ ಕೊಡದೆ ಇರಲು, ಆಚಾ ರ್ಯರು ಅದಕ್ಕಾಗಿ ಹತಾಶರಾಗದೆ, ತಮ್ಮ ತಾಯಿಯ ಶವವನ್ನು ತಾವೊ ಬ್ಬರೇ ಹಿತ್ತಿಲಅಂಗಳಕ್ಕೆ ಸಾಗಿಸಿಕೊಂಡು ಹೋಗಿ ಅಲ್ಲಿ ಕಟ್ಟಿಗೆ ತರಗೆಲೆ ಮುಂ ತಾದುವುಗಳಿಂದ ಚಿತಿಯನ್ನು ಏರ್ಪಡಿಸಿ, ತಮ್ಮ ಯೋಗಸಾಮರ್ಥ್ಯದಿಂದ ಅಗ್ನಿಯನ್ನು ಉತ್ಪತ್ತಿ ಮಾಡಿ, ದಹನಕ್ರಿಯೆಯನ್ನು ಯಥಾವಿಧಿಯಿಂದ ನೆರ ವೇರಿಸಿದರು ಶ್ರೀಮದಾಚಾರ್ಯರು ತಮ್ಮ ಆಶ್ರಮಧರ್ಮವನ್ನು ಅನುಸರಿಸಿ ಅವುಗಳನ್ನು ಮಾಡುವುದು ವಿರೋಧವಾಗಿದ್ದರೂ, ತಾವು ಮಾಡಿದ ವಾಗ್ದಾ ನಕ್ಕೂ, ತಮ್ಮ ತಾಯಿಯ ವಿಷಯದಲ್ಲಿದ್ದ ಅತಿಶಯ ಭಕ್ತಿಗೂ ಗುರುತಾಗಿ ಅಷ್ಟು ಕೆಲಸಗಳನ್ನೂ, ಲೋಕನಿಂದೆಗೆ ಬೆದರದೆ ಮಾಡಿ ವೃದ್ಧಮಾತೃವಿನ ಆಶಯವನ್ನು ಪೂರ್ಣಗೊಳಿಸಿದರು. ಮತ್ತು ತಮ್ಮನ್ನು ಅಂತಹ ಆಪತ್ಕಾ ಲದಲ್ಲಿ ಅಷ್ಟು ನಿರ್ಘೃಣರಾಗಿ ನಿರಾಕರಿಸಿದ ತಮ್ಮ ಸ್ವಜಾತೀಯರ ದುರ್ನಯದ ವಿಷಯದಲ್ಲಿ ಅವರಿಗೆ ಅಸಮಾಧಾನವುಂಟಾಗಿ, ಮುಂದೆ ಅವರಲ್ಲಿ ವೇದಾಭ್ಯಾ ಸವು ನಡೆಯದಿರಲೆಂದೂ, ಅವರು ಸನ್ಯಾಸಿಗಳಿಗೆ ಭಿಕ್ಷೆ ಕೊಡಲು ಯೋಗ್ಯರಾ ಗದಿರಲೆಂದೂ, ಮತ್ತು ಮುಂದೆ ಅವರವರ ಮನೆಯ ಹಿತ್ತಿಲಲ್ಲಿಯೇ ಶವಗ ಳನ್ನು ದಹಿಸುವಂತಾಗಲೆಂದೂ ಶಪಿಸಿದರಂತೆ! ಆಗ ಆ ದೇಶವನ್ನಾಳುತ್ತಿದ್ದ ರಾಜನೂ ಶಂಕರಾಚಾರ್ಯರ ಈ ಶಾಸನವನ್ನು ರಾಜಾಜ್ಞೆಯಿಂದ ಸ್ಥಿರಗೊಳಿಸಿ ಆ ಜನರ ಮೇಲೆ ವಿಧಿಸಿದನಂತೆ!

ಆಚಾರ್ಯರು ತರುವಾಯ ಅಲ್ಲಿಂದ ಹೊರಟು ಪುನಃ ಕಾಶೀನಗರವ ನ್ನು ಸೇರಿ ಕೆಲವುದಿನಗಳು ಎಂದಿನಂತೆ ಶಿಷ್ಯರಿಗೆ ಪಾಠಪ್ರವಚನಗಳು ವಿದ್ವಾಂ ಸರೊಂದಿಗೆ ವಾದವಿವಾದಗಳು ಮುಂತಾದುವುಗಳನ್ನು ನಡಿಸುತ್ತಾ ಇದ್ದು, ನಂತರ ಹಿಮಾಲಯ ಪರ್ವತದಪ್ರಾಂತ ಸಂಚಾರಹೊರಟು ಕೈಲಾಸಪರ್ವತ ವನ್ನು ಸೇರಿ, ಕೇದಾರದಲ್ಲಿ ಒಂದು ಲಿಂಗಪ್ರತಿಷ್ಠೆಯನ್ನು ಮಾಡಿದರು ಆ ಲಿಂಗವನ್ನು ಈಗಲೂ ಒಬ್ಬ ನಂಬೂದರೀ ಬ್ರಾಹ್ಮಣನೇ ಅಲ್ಲಿ ಪೂಜಿಸುತ್ತಾ ಇರುವುದು ಪದ್ಧತಿಯಲ್ಲಿದೆ ತರುವಾಯ ಅಲ್ಲಿಂದ ಹೊರಟು ಉತ್ತರ ಹಿಂ ದೂದೇಶದ ಅಯೋಧ್ಯ, ಗಯ, ಜಗನ್ನಾಥ ಮುಂತಾದ ಅನೇಕ ಪ್ರಾಂತಗ ಳಲ್ಲಿ ಸಂಚರಿಸಿದರು ಅಷ್ಟರಲ್ಲಿ ಅವರಿಗೆ, ರುದ್ರಪುರದಲ್ಲಿ ವಾಸವಾಗಿದ್ದ

ಸುಪ್ರಸಿದ್ಧ ಕರ್ಮಮಾರ್ಗ ಪ್ರವರ್ತಕನೂ ಪೂರ್ವಮೀಮಾಂಸೆಯ ವ್ಯಾಖ್ಯಾನಕರ್ತನೂ ಆದ ಕುಮಾರಿಲಭಟ್ಟನು, ತುಷಾಗ್ನಿ ಪ್ರವೇಶದಿಂದ ಪ್ರಾಣತ್ಯಾಗಮಾಡಿಕೊಳ್ಳಲು ಸಿದ್ಧನಾಗಿದ್ದಾನೆಂಬ ವರ್ತಮಾನ ಬಂದಿತು ಒಡನೆ ಆತನನ್ನು ನೋಡಬೇಕೆಂದು ಅಲ್ಲಿಗೆ ಹೋದರು.

ಕುಮಾರಿಲಭಟ್ಟನು ಸಾಮಾನ್ಯನಲ್ಲ! ಮಹಾಪಂಡಿತನು ಆ ಕಾಲದಲ್ಲಿ ಆತನ ಪ್ರಭಾವವು ಅದ್ವಿತೀಯವಾಗಿತ್ತು ಆತನು ಕರ್ಮಮಾರ್ಗ ಪ್ರವರ್ತಕನು. ಪೂರ್ವಮೀಮಾಂಸೆಯ ಸಿದ್ಧಾಂತದಂತೆ, ಕರ್ಮದಿಂದಲೇ ಮೋಕ್ಷವೆಂಬುದು ಆತನ ಮತವಾಗಿತ್ತು ಆತನ ಕಾಲದಲ್ಲೇ ಬೌದ್ಧರ ಪ್ರಾಬಲ್ಯವು ಎಲ್ಲೆಲ್ಲೂ ಅತಿಶಯವಾಗಿತ್ತು. ಭಟ್ಟನು, ಕೇವಲ ಕರ್ಮಠನಾಗಿದ್ದು ನಾಸ್ತಿಕವಾದಿಗಳಾದ ಬೌದ್ಧರನ್ನು ಹೃದಯಪೂರ್ವಕವಾಗಿ ದ್ವೇಷಿಸುತ್ತಿದ್ದನು ಆತನು ತನ್ನ ವೈದಿಕವಿದ್ಯಾಭ್ಯಾಸವನ್ನು ಮುಗಿಸಿದ ಮೇಲೆ ಬೌದ್ಧಧರ್ಮದ ಮೂಲಸಿದ್ಧಾಂತವನ್ನು ತಿಳಿದು ತನ್ಮೂಲಕ ಅವರನ್ನು ಮೂಲೋತ್ಪಾಟನಗೊಳಿಸಬೇಕೆಂದು ಪ್ರಚ್ಛನ್ನವೇಷದಿಂದ ಮಹಾ ಪ್ರಸಿದ್ಧನಾದ ಒಬ್ಬ ಬೌದ್ಧಗುರುವನ್ನು ಆಶ್ರಯಿಸಿ, ಆತನಿಂದ ಬೌದ್ಧಮತದ ಸಿದ್ಧಾಂತಗಳನ್ನೆಲ್ಲಾ ಸಂಪೂರ್ಣವಾಗಿ ಗ್ರಹಿಸಿದನು ಆತನ ಒಡನಾಡಿಗಳೆಲ್ಲರೂ ಆತನೂ ಬೌದ್ಧನೆಂದೇ ತಿಳಿದಿದ್ದರು ಒಂದಾನೊಂದುದಿನ ಕುಮಾರಿಲಭಟ್ಟನು ಗುರುಗಳಿಗೆ ಎಣ್ಣೆಯನ್ನೊತ್ತುತ್ತಿರಲಾಗಿ, ಆ ಗುರುವು ವೇದಗಳ ಸತ್ಯತೆಯನ್ನು ಅತಿಶಯ ಕಠೋರವಚನಗಳಿಂದ ನಿಂದಿಸಿ ಬೌದ್ಧಧರ್ಮದ ಶ್ರೇಷ್ಠತೆಯನ್ನು ವಿಶೇಷವಾಗಿ ಹೊಗಳುತ್ತಿದ್ದನು ಅದನ್ನು ಕೇಳಿ ವೇದಧರ್ಮಾಭಿಮಾನಿಯಾದ ಭಟ್ಟನಿಗೆ ಸಹಿಸಿಕೊಳ್ಳುವುದು ಅಸಾಧ್ಯವಾಯಿತು ಕಣ್ಣುಗಳಲ್ಲಿ ಎರಡುಹನಿನೀರು ಉದುರಿ, ಗುರುವಿನ ತೊಡೆಯಮೇಲೆ ಬಿದ್ದಿತು ಗುರುವು ಕಣ್ಣೆತ್ತಿನೋಡಿ ತನ್ನಾ ಶಿಷ್ಯನು ಬೌದ್ಧನಲ್ಲವೆಂದೂ, ವೇದಧರ್ಮಾಭಿಮಾನಿಯಾದ ಅವನು ತಮ್ಮ ಮೂಲೋತ್ಪಾಟನಕ್ಕಾಗಿ ವೇಷಾಂತರದಿಂದ ಬಂದಿರುವನೆಂದೂ ತೋರಿತು ಇತರ ಶಿಷ್ಯರು ಒಡನೆ ಅವನನ್ನು ವಧಿಸಿಬಿಡಬೇಕೆಂದು ಒಳಸಂಚು ಮಾಡತೊಡಗಿದರು ಆ ಸುಳಿವನ್ನು ತಿಳಿದು ಭಟ್ಟನು, ಒಡನೆ "ವೇದಗಳೇ ಸತ್ಯವಾಗಿದ್ದರೆ ನನಗೆ ಯಾವ ಅಪಾಯವೂ ಆಗದಿರಲಿ" ಎಂದು ಹೇಳಿಕೊಂಡು ಬಹಳ ಎತ್ತರದ ಆ ಮಹಡಿಯಿಂದ ಕೆಳಕ್ಕೆ ಹಾರಿಬಿಟ್ಟನು. ಅದರಿಂದ

ಆತನಿಗೆ ಪ್ರಾಣಾಪಾಯ ವುಂಟಾಗದಿದ್ದರೂ, ಆತನು ವೇದಗಳ ಸತ್ಯತೆಯ ವಿಷಯದಲ್ಲಿ "ಸತ್ಯವಾಗಿದ್ದರೆ?" ಎಂದು ಸಂದೇಹಿಸಿದನಾದುದರಿಂದ ಒಂದು ಕಣ್ಣಿಗೆ ಅಪಾಯವಾಯಿತಂತೆ!

ತರುವಾಯ ಅಲ್ಲಿಂದ ಹೊರಟು, ಕುಮಾರಿಲಭಟ್ಟನು ಕಂಡ ಕಂಡೆಡೆಯಲ್ಲಿ ಬೌದ್ಧರಧರ್ಮವನ್ನು ಖಂಡಿಸತೊಡಗಿದನು. ಬೌದ್ಧರಿಗೆ ಉಳಿಗಾಲವಿಲ್ಲದಂತಾಯಿತು. ಕಾಲಾನುಕಾಲದಲ್ಲಿ ಭಟ್ಟನು ರಾಜಾ ಸುಧನ್ವನ ಆಸ್ಥಾನದಲ್ಲೇ ಬೌದ್ಧರ ಸಿದ್ಧಾಂತವನ್ನು ಖಂಡಿಸಬೇಕಾಗ ಅವಕಾಶ ವೊದಗಿತು. ಭಟ್ಟನು ಅದಕ್ಕೆ ಹಿಂಜರಿಯಲಿಲ್ಲ. ರಾಜನು ವೇದಸಮ್ಮತನಾದ ಭಟ್ಟರ ಪೂರ್ವಪಕ್ಷಗಳನ್ನು ಒಪ್ಪಿದನು. ಬೌದ್ಧರ ಸುಪ್ರಸಿದ್ಧ ಪಂಡಿತರೂ ಶಾಸ್ತ್ರವಾದದಿಂದ ಭಟ್ಟನನ್ನು ಎದುರಿಸಲು ಶಕ್ತರಾಗಲಿಲ್ಲ. ಅವರ ಬಾಯಿ ಕಟ್ಟಿತು. ಆದರೂ ಅಷ್ಟರಿಂದಲೇ ಭಟ್ಟನಿಗೆ ಜಯವಾದಂತಾಗಲಿಲ್ಲ. ರಾಜನು ಉಭಯಧರ್ಮವಾದಿಗಳೂ ಬೆಟ್ಟದಮೇಲಿಂದ ಕೆಳಕ್ಕೆ ಧುಮುಕಿ ತಮ್ಮ ತಮ್ಮ ಧರ್ಮದಶ್ರೇಷ್ಠತೆಯನ್ನು ಪ್ರಕಟಿಸಬೇಕೆಂದು ವಿಧಿಸಿದನು. ಅದಕ್ಕೆ ಬೌದ್ಧರು ಬೆದರಲು, ಭಟ್ಟನು ಅದಕ್ಕೂ ಸಿದ್ಧನಾಗಿ, "ವೇದಧರ್ಮವೇ ಸತ್ಯವಾದುದು" ಎಂದು ನುಡಿದು, ಕಡಿದಾದ ಬೆಟ್ಟದಿಂದ ಧುಮುಕಿದನು. ಆದರೂ ಆತನಿಗೆ ಏನಪಾಯವೂ ಉಂಟಾಗಲಿಲ್ಲ. ಅದನ್ನು ಕಂಡು ಬೌದ್ಧರು ಹತಾಶರಾಗಿ ಮತ್ತೊಂದು ಪರೀಕ್ಷೆಯನ್ನು ಇಡಬೇಕೆಂದರು. ರಾಜನು ಒಂದು ಘಟಸರ್ಪವನ್ನು ಕೊಡದಲ್ಲಿ ಹಾಕಿ ಬಾಯಿಕಟ್ಟಿಸಿ ಇರಿಸಿ, ಅದರಲ್ಲಿ ಇರುವುದೇನೆಂಬುದನ್ನು ಹೇಳಿ ನಿಮ್ಮ ಧರ್ಮಗಳ ಸತ್ಯತೆಯನ್ನು ಪ್ರಕಟಿಸಿರಿ ಎಂದನು. ಬೌದ್ಧರು ಜ್ಯೋತಿಷರೀತ್ಯಾಗುಣಿಸಿ ಸರ್ಪವೆಂದು ಹೇಳಿದರು. ಭಟ್ಟನು, ಆಸ್ತಿಕತೆಯ ನಿರ್ಭರದ ಮನೋಭಾವದಿಂದ ಅದರಲ್ಲಿ ಶೇಷಶಾಯಿಯಾದ ಶ್ರೀಮಹಾವಿಷ್ಣುವು ಇದ್ದಾನೆ ಎಂದು ನುಡಿದನು. ತೆಗೆಯಿಸಿನೋಡಲು ಭಟ್ಟನಮಾತೇ ನಿಶ್ಚಯವಾಯಿತು. ಒಡನೆ ಆ ರಾಜನು ಬೌದ್ಧರ ಮತ್ತು ಅವರ ನಾಸ್ತಿಕವಾದದ ವಿಚಾರದಲ್ಲಿ ಅತ್ಯಂತ ಅಸಮಾಧಾನಪಟ್ಟು ಒಂದು ಬೌದ್ಧರ ಪಿಳ್ಳೆಯನ್ನೂ ಬಿಡದಂತೆ ಎಲ್ಲರನ್ನೂ ಕಲ್ಲುಗಾಣಗಳಿಗೆ ಹಾಕಿಸಿ ಅರೆಯಿಸಿ ಬಿಟ್ಟನಂತೆ! ಹಿಮಾಲಯದಿಂದ ಕನ್ಯಾಕುಮಾರಿಯವರೆಗೂ ಬೌದ್ಧರನ್ನು ಎಲ್ಲಿಕಂಡರಲ್ಲಿ ಸಂಹರಿಸದಿದ್ದವರು ರಾಜದ್ರೋಹಿಗಳೆಂದು ಗಣಿಸಲ್ಪ

ಟ್ಟು ದಂಡನೆಗೆ ಪಾತ್ರರಾಗುವರೆಂದು ರಾಜಾಜ್ಞೆಯನ್ನು ಹೊರಡಿಸಿದನು. ಬೌದ್ಧರು ಬದುಕಲು ಎಡೆಯಿಲ್ಲವಾಯಿತು ಅನೇಕರು ದೇಶಾಂತರಗತರಾದರು ಬಹು ಮಂದಿ ಬೆದರಿ ಹಿಂದೂಗಳಂತೆ ವೇಷಧಾರಿಗಳಾಗಿ ಜೀವನೊಂದಿಗೆ ಉಳಿದರು. ಎಂತೂ ಬೌದ್ಧಮತವು ಹಿಂದೂದೇಶದಿಂದ ತೊಲಗಿ ಹೋಯಿತು

ಹೀಗೆ ಕುಮಾರಿಲಭಟ್ಟನ ಅವಿಶ್ರಾಂತಪರಿಶ್ರಮದಿಂದ ನಾಸ್ತಿಕವಾದದ ಬೌದ್ಧಧರ್ಮವು ತೊಲಗಿ ಹೋದುದು ಸರಿ ಅದರ ಸ್ಥಾನದಲ್ಲಿ ಅನೇಕ ಇತರ ಮತಗಳು ತಲೆಯೆತ್ತಿದುವು. ಎಲ್ಲೆಲ್ಲೂ ಅರ್ಥವಿಲ್ಲದ ಪೂಜೆ ಪುರಸ್ಕಾರಗಳೂ, ವ್ರತನಿಯಮಗಳೂ ಉಂಟಾಗಿ ವೇದಧರ್ಮದ ನಿಶ್ಚಯತತ್ತ್ವವೇ ಜನಗಳಿಗೆ ತಿಳಿಯದಂತಾಯಿತು. ಜನಗಳು ತಿರುಳನ್ನು ಒಗೆದು ಸಿಪ್ಪೆಯನ್ನೇ ತಿನ್ನುವಂತೆ ಮತಧರ್ಮದ ನಿಜ್ಯಯಸ್ವರೂಪವನ್ನು ಅರಿಯಗೆ ಭ್ರಾಂತರಂತಾದರು ಅದನ್ನು ಕಂಡು ಶಂಕರಾಚಾರ್ಯರು, ಅದ್ವಿತೀಯ ಕರ್ಮಮಾರ್ಗ ಸಿದ್ಧಾಂತಾನುಯಾಯಿಯಾದ ಕುಮಾರಿಲಭಟ್ಟನನ್ನು ಜಯಿಸಿ, ಮಹಾಪಂಡಿತನಾದ ಆತನಿಂದ ತಮ್ಮ ಭಾಷ್ಯಾದಿಗಳಿಗೆ ವಾರ್ತಿಕವನ್ನು ಬರೆಯಿಸಿದರೆ ಉತ್ತಮವಾಗಿರುವುದೆಂದು ಯೋಚಿಸಿ ಆತನನ್ನು ನೋಡಲು ರುದ್ರಪುರಕ್ಕೆ ಹೋದರು

ಆದರೆ ಕುಮಾರಿಲಭಟ್ಟನು ತನ್ನಿಂದ ನಡೆದುಹೋದ ಕಾರ್ಯಕ್ಕಾಗಿ ಅತ್ಯಂತ ಪಶ್ಚಾತ್ತಾಪಯುಕ್ತನಾದನು. ತಾನೇ ಸ್ವತಃ ಬೌದ್ಧರನ್ನು ವಧಿಸದಿದ್ದರೂ ತನ್ನ ಶಾಸ್ತ್ರವಾದದಿಂದಲೇ ಸಹಸ್ರಾರುಮಂದಿ ಬೌದ್ಧರ ವಧೆಯಾಯಿತೆಂಬುದು ಆತನ ಅಂತಃಕರಣವನ್ನು ಅತಿಶಯವಾಗಿ ನೋಯಿಸಿತು ಅಲ್ಲದೆ ತನಗೆ ಹೇಗಾದರೂ ಗುರುವಾಗಿದ್ದು ಬೋಧಿಸಿದ್ದ ಬೌದ್ಧಾಚಾರ್ಯನು ಇತರ ಅನೇಕರೊಂದಿಗೆ ಕಲ್ಲುಗಾಣಕ್ಕೆ ಹಾಕಿ ಅರೆಯಿಸಲ್ಪಟ್ಟುದಕ್ಕೆ ಅವರಿಗೆ ವಿರೋಧವಾದ ತನ್ನ ಶಾಸ್ತ್ರವಾದವೇ ಕಾರಣವೆಂದೂ ಆ ಪಾಪಕ್ಕೆ ನಿಷ್ಕೃತಿಯು ದಂಡನಾಪೂರ್ವಕದೇಹತ್ಯಾಗವೇ ಎಂದೂ ನಿಶ್ಚಯಿಸಿ, ಅಗ್ನಿಕುಂಡವನ್ನು ಮಾಡಿಸಿ ಮಧ್ಯೆ ಕುಳಿತು ತನ್ನನ್ನು ತಾನೇ ದಹಿಸಿಕೊಳ್ಳಲು ಉದ್ಯುಕ್ತನಾಗಿದ್ದನು. ಅಷ್ಟರಲ್ಲಿ ಆಚಾರ್ಯರೂ ಅಲ್ಲಿಗೆ ಬಂದು ಸೇರಿ, ಭಟ್ಟನ ಸ್ಥಿತಿಯನ್ನು ಕಂಡು ನಿವಾರಿಸಲು ಯತ್ನಿಸಿದರು. ಆಗಲಾತನು, ತಾನು ಹಾಗೆ

ಮಾಡುವುದಕ್ಕೆ ಉಂಟಾದ ಕಾರಣವನ್ನು ತಿಳಿಸಿ ಹಾಗೆ ದೇಹವನ್ನು ದಂಡಿಸತಕ್ಕದ್ದೇ ಯುಕ್ತವೆಂದನು ಆಚಾರ್ಯರು, ತಾವು ಶಾಸ್ತ್ರವಾದವನ್ನು ಅಪೇಕ್ಷಿಸಿ ಬಂದೆವೆಂದು ತಿಳಿಸಲು, ಆತನು ''ನಾನು ಈಗ ಈ ಸ್ಥಿತಿಯಲ್ಲಿದ್ದೇನೆ ಈಗ ತಮ್ಮ ಆಶಯವನ್ನು ನೆರವೇರಿಸಲು ಅವಕಾಶವಿಲ್ಲ. ಮಾಹೀಷ್ಮತೀ ಪುರದಲ್ಲಿ ಮಂಡನಮಿಶ್ರನೆಂಬ ನನ್ನ ಶಿಷ್ಯನಿದ್ದಾನೆ ಆತನೂ ನನ್ನಂತೆಯೇ ಕರ್ಮಮಾರ್ಗ ಸಿದ್ಧಾಂತಿಯು ಆತನನ್ನು ವಾದದಲ್ಲಿ ಜಯಿಸಿ, ಆತನಿಂದ ತಮ್ಮ ವ್ಯಾಖ್ಯಾನಗಳಿಗೆ ವಾರ್ತಿಕವನ್ನು ಬರೆಯಿಸಿಕೊಳ್ಳಿರಿ'' ಎಂದು ನುಡಿದು ತಾನು ಆ ಅಗ್ನಿಯಲ್ಲಿ ಬೆಂದು ಭಸ್ಮೀಭೂತನಾಗಿ ಹೋದನು.

ಆಚಾರ್ಯರು ಆ ಪಂಡಿತ ಶ್ರೇಷ್ಠನ ಮರಣಕ್ಕಾಗಿ ಪಶ್ಚಾತ್ತಾಪಪಟ್ಟು, ಅಲ್ಲಿಂದ ಹೊರಟು ಮಾಹೀಷ್ಮತೀಪುರವನ್ನು ಸೇರಿ, ಮಂಡನಮಿಶ್ರನ ಮನೆಗೆ ಬಂದರು. ಆ ದಿನ ಆತನ ಮನೆಯಲ್ಲಿ ಶ್ರಾದ್ಧವಿರಲು ಕರ್ಮಠನಾದ ಆತನು ತತ್ಕಾರ್ಯನಿರತನಾಗಿದ್ದನು ಆಚಾರ್ಯರನ್ನು ಕಂಡೊಡನೆಯೇ ವಂದಿಸಿ, ಆ ದಿನ ಭಿಕ್ಷೆಗೆ ದಯೆಮಾಡಿಸಬೇಕೆಂದನು ಆಚಾರ್ಯರು ತಾವು ಆತನಲ್ಲಿ ವಾದಭಿಕ್ಷೆಯನ್ನು ಕೋರಿಬಂದಿರುವೆವೆಂದು ತಿಳಿಸಿದರು. ಮಂಡನಮಿಶ್ರನು ಅದಕ್ಕೆ ಸಮ್ಮತಿಸಿ ಆ ದಿನದ ಕಾರ್ಯವು ಮುಗಿದ ತರುವಾಯ ತಾನು ವಾದಕ್ಕೆ ಸಿದ್ಧನಿರುವೆನೆಂದು ಹೇಳಿದನು ಶ್ರಾದ್ಧಕಾರ್ಯವೂ ನೆರವೇರಿ ಬ್ರಾಹ್ಮಣ ಭೋಜನಾದಿಗಳಾದುವು ಆಚಾರ್ಯರು ಭೋಜನೋತ್ತರದಲ್ಲಿ ಅಲ್ಲಿಂದ ಹೊರಟು ನರ್ಮದಾತೀರದ ಕದಂಬವೃಕ್ಷಗಳಿಂದ ನಿಬಿಡವಾದ ವನದಲ್ಲಿನ ಒಂದು ದೇವಾಲಯದಲ್ಲಿ ವಿಶ್ರಮಿಸಿಕೊಂಡರು. ಮಾರನೆಯದಿನ ಶ್ರೀ ಆಚಾರ್ಯರು ನರ್ಮದಾನದಿಯಲ್ಲಿ ಸ್ನಾನಾಹ್ನಿಕಗಳನ್ನು ತೀರಿಸಿಕೊಂಡು, ಹಿಂದೆಯೇ ಗೊತ್ತಾಗಿದ್ದಂತೆ ಶಾಸ್ತ್ರಾರ್ಥವಾದಕ್ಕಾಗಿ ಮಂಡನಮಿಶ್ರನ ಮನೆಗೆ ಬಂದರು ಪಂಡಿತನು ಆಚಾರ್ಯರನ್ನು ಗೃಹದ್ವಾರದಲ್ಲಿ ಎದುರುಗೊಂಡು ಕರೆತಂದು ಉಚಿತಾಸನದಲ್ಲಿ ಕೂರಿಸಿದನು ತಮ್ಮಿಬ್ಬರ ವಾದದ ಸತ್ಯಾಸತ್ಯತೆಗಳನ್ನು ನಿರ್ಣಯಿಸಲು ಯಾರಾದರೂ ಇರಬೇಕೆಂಬ ಪ್ರಶ್ನೆಯುಂಟಾಗಲು, ಕುಮಾರಿಲಭಟ್ಟಾಚಾರ್ಯನ ತಂಗಿಯೂ, ಸರ್ವಶಾಸ್ತ್ರ ಪ್ರವೀಣಳೂ, ಮಂಡನಮಿಶ್ರನ ಧರ್ಮಪತ್ನಿಯೂ ಆದ ಶ್ರೀ ಉಭಯಭಾರತೀದೇವಿಯೇ ಅಧ್ಯಕ್ಷಸ್ಥಾನವನ್ನು ವಹಿಸಿ ಆ ಕಾರ್ಯವನ್ನು ನಿರ್ವಹಿಸಬಹುದೆಂದು ಉಭಯರು

ರೂ ಒಪ್ಪಿದರು. ಆಕೆಯೂ ಆ ಸ್ಥಾನವನ್ನು ಒಪ್ಪಿಕೊಂಡಳಾದರೂ ತಾನು ಮನೆಯ ಕೆಲಸಕಾರ್ಯಗಳನ್ನು ಗಮನಿಸಬೇಕಾಗಿದ್ದುದರಿಂದ ಅಲ್ಲೇ ಕುಳಿತಿರಲು ಸಾಧ್ಯವಿಲ್ಲದೆ ಅವರಿಬ್ಬರ ಕೊರಳಲ್ಲಿಯೂ ಒಂದೊಂದು ಹೂವಿನ ಹಾರಗಳನ್ನು ಹಾಕಿ, ಅವುಗಳಲ್ಲಿ ಯಾವುದು ಮೊದಲು ಬಾಡಿ ಮಲಿನವಾಗುವುದೋ ಅವರು ಶಾಸ್ತ್ರವಾದದಲ್ಲಿ ಪರಾಜಿತರಾದಂತೆ ಭಾವಿಸಬೇಕೆಂದು ನುಡಿದು ತನ್ನ ಕೆಲಸಕಾರ್ಯಗಳಿಗಾಗಿ ಹೊರಟು ನಡೆದಳು.

ಮಂಡನಪಂಡಿತನೂ ಆಚಾರ್ಯರೂ ಪ್ರತಿಜ್ಞಾಪೂರ್ವಕ ವಾದಕ್ಕೆ ಕುಳಿತರು ಆಚಾರ್ಯರು ವಾದದ ಪ್ರಾರಂಭದಲ್ಲಿ ತಮ್ಮ ಸಿದ್ಧಾಂತವನ್ನು ಈ ಶ್ಲೋಕದಿಂದ ನಿರೂಪಿಸಿದರು

**ಶ್ಲೋಕ: —**

ಬ್ರಹ್ಮೈಕಂಪರಮಾರ್ಥ ಸಚ್ಚಿದಮಲಂ ವಿಶ್ವಪ್ರಪಂಚಾತ್ಮನಾ ।
ಶುಕ್ತೀರೂಪ್ಯಪರಾತ್ಮನೇವ ಬಹುಲಾಜ್ಞಾನಾವೃತಂ ಭಾಸತೇ ॥
ತತ್‌ಜ್ಞಾನಾನ್ನಿಖಿಲ ಪ್ರಪಂಚನಿಲಯಾ ಸ್ವಾತ್ಮವ್ಯವಸ್ಥಾಪರಂ ।
ನಿರ್ವಾಣಂಜನಿಮುಕ್ತ ಮಭ್ಯುಪಗತಂಮಾನಂ ಶ್ರುತೇರ್ಮಸ್ತಕಂ ॥

(ಶಂ ವಿ)

(ಅರ್ಥ —ದೋಷರಹಿತನಾದಂಥ ಸಚ್ಚಿದಾನಂದಮಯ ಬ್ರಹ್ಮನು ಒಬ್ಬನೇ ಸತ್ಯವಾದ ವಸ್ತುವಾಗಿದ್ದಾನ ಮುತ್ತಿನ ಚಿಪ್ಪು ಬೆಳ್ಳಿಯಂತೆ ಕಾಣಿಸುವ ಹಾಗೆ, ಆ ಬ್ರಹ್ಮನು ಅಜ್ಞಾನದಿಂದ ಜಗದಾಕಾರವಾಗಿ ಭಾಸಿಸುತ್ತಾನೆ ಈ ಬ್ರಹ್ಮಜ್ಞಾನವನ್ನು ಹೊಂದಿದ ಮಹಾತ್ಮನಿಗೆ ಸಮಸ್ತ ಪ್ರಪಂಚವೂ ಲಯವಾಗುತ್ತದೆ, ಮತ್ತು ಆತನು ಜನನ ಮರಣಗಳಿಂದ ಮುಕ್ತನಾಗುತ್ತಾನೆ. ಇದಕ್ಕೆ ಉಪನಿಷತ್ತುಗಳೇ ಪ್ರಮಾಣವಾಗಿವೆ) ಹೀಗೆಂದು ಆಚಾರ್ಯರು ತಮ್ಮ ಸಿದ್ಧಾಂತವನ್ನು ಪ್ರತಿಪಾದಿಸಿ, "ಈ ವಾದದಲ್ಲಿ ನನಗೊಂದು ವೇಳೆ ಅಪಜಯವಾದರೆ, ಕಾಷಾಯ ವಸ್ತ್ರಗಳನ್ನು ತ್ಯಜಿಸಿ ಗೃಹಸ್ಥಾಶ್ರಮಕ್ಕೆ ಉಚಿತವಾದ ಶುಭ್ರವಸ್ತ್ರಗಳನ್ನು ಧರಿಸುವೆನು ಎಂದರೆ ಸನ್ಯಾಸಾಶ್ರಮವನ್ನು ತ್ಯಜಿಸಿ ಗೃಹಸ್ಥಾಶ್ರಮವನ್ನು ಸ್ವೀಕರಿಸುವೆನು" ಎಂದು ಪ್ರತಿಜ್ಞೆಮಾಡಿದರು. ಅದನ್ನು ಕೇಳಿ ಮಂಡನಪಂಡಿತನೂ ತನ್ನ ಮತವನ್ನು ಸೂಚಿಸುತ್ತಾ,

**ಶ್ಲೋಕ:—**

ವೇದಾಂತಾನಪ್ರಮಾಣಂ ಚಿತಿವಪುಷಿಪದೇತಸ್ಯ ಸಂಗತ್ಯಯೋಗಾತ್ ||
ಪೂರ್ವೋಭಾಗಃಪ್ರಮಾಣಂ ಪದಚಯಗಮಿತೇ ಕಾರ್ಯವಸ್ತುನ್ಯಶೇಷೇ ||
ಶಬ್ದಾನಾಂಕಾರ್ಯಮಾತ್ರಂ ಪ್ರತಿಸಮಧಿಗತಾ ಶಕ್ತಿರಭ್ಯುನ್ನತಾನಾಂ ||
ಕರ್ಮಭ್ಯೋಮುಕ್ತಿರಿಷ್ಟಾತದಿಹ ತನಭೃತಾಮಾಯುಷಃ ಸಾತ್ಸಮಾಪ್ತೇಃ ||
(ಶಂ ವಿ)

(ಅರ್ಥ—ಚಿತ್ಸ್ವರೂಪನಾದ ಪರಮಾತ್ಮನ ವಿಷಯದಲ್ಲಿ ಉಪನಿಷತ್ತುಗಳು ಪ್ರಮಾಣಗಳಾಗಲಾರವು ವೇದದ ಪೂರ್ವಭಾಗವಾದ ಕರ್ಮಕಾಂಡವೇ ಪ್ರಮಾಣವು ಉಪನಿಷತ್ತಿನೊಳಗಿನ ಶಬ್ದಗಳ ಅರ್ಥವು 'ಘಟಮಾನಯ' ಮೊದಲಾದ ಪ್ರಯೋಗಗಳಂತೆ ಕ್ರಿಯಾಪರವಾಗಿರುತ್ತವೆ. ಆದುದರಿಂದ ಆಮರಣವಾಗಿ ಕರ್ಮಾಚರಣೆಯನ್ನು ಇಟ್ಟುಕೊಂಡಿರಲಿಕ್ಕೇ ಬೇಕು. ಮುಕ್ತಿಯು ಕೇವಲ ಕರ್ಮದಿಂದಲೇ ಪ್ರಾಪ್ತವಾಗುತ್ತದ) ಎಂದು ನುಡಿದು, ತನ್ನ ಆ ವಾದದಲ್ಲಿ ತನಗೆ ಅಪಜಯವಾದರೆ, ತಾನೂ ಗೃಹಸ್ಥಾಶ್ರಮವನ್ನು ತ್ಯಜಿಸಿ ಸನ್ಯಾಸಾಶ್ರಮವನ್ನು ಸ್ವೀಕರಿಸುತ್ತೇನೆಂದು ಪ್ರತಿಜ್ಞೆಮಾಡಿದನು. ಹೀಗೆ ವಾದವು ಪ್ರಾರಂಭವಾಯಿತು ಪ್ರತಿದಿನವೂ ಪ್ರಾತಃಕಾಲದ ಆಹ್ನಿಕಗಳನ್ನು ತೀರಿಸಿಕೊಂಡು ಇಬ್ಬರೂ ಆಸನಗಳಲ್ಲಿ ಎದುರೆದುರಿಗೆ ಕೂಡುತ್ತಿದ್ದರು ವಾದವು ಮಧ್ಯಾಹ್ನದವರೆಗೂ ನಡಯುತ್ತಿದ್ದಿತು ಆ ಕಾಲಕ್ಕೆ ಉಭಯಭಾರತೀದೇವಿಯು ಸಭೆಗೆ ಬಂದು, ಪತಿಯನ್ನು ಭೋಜನಕ್ಕೆ ಬರಬೇಕೆಂದೂ, ಶಂಕರಾಚಾರ್ಯರನ್ನು ಭಿಕ್ಷೆಗೆ ದಯೆಮಾಡಿಸಬೇಕೆಂದೂ ಕರೆಯುತ್ತಿದ್ದಳು ಭೋಜನೋತ್ತರದಲ್ಲಿ ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡು, ಸೂರ್ಯಾಸ್ತಮಾನಕ್ಕೆ ಹತ್ತುಗಳಿಗೆಗಳಿರುವಾಗ ಪುನಃ ವಾದಕ್ಕೆ ಕುಳಿತುಕೊಳ್ಳುತ್ತಿದ್ದರು ಅದು ಸಾಯಂಕಾಲದವರೆಗೂ ಸಾಗುತ್ತಿತ್ತು. ಇಬ್ಬರಿಗೂ ಶ್ರುತಿವಚನಗಳೇ ಪ್ರಮಾಣಗಳಾಗಿರುತ್ತಿದ್ದುವು ಇಬ್ಬರೂ ಮಹಾಪ್ರತಿಭಾಸ್ವಿತರಾಗಿ ನಾನಾವಿಧ ಪೂರ್ವಪಕ್ಷ ಉತ್ತರಪಕ್ಷಗಳಿಂದ ತಮ್ಮ ತಮ್ಮ ಸಿದ್ಧಾಂತಗಳನ್ನು ಸಮರ್ಥನಗೊಳಿಸುತ್ತಿದ್ದರು ಇಬ್ಬರ ಮುಖಗಳೂ ಮಂದಹಾಸಯುಕ್ತವಾಗಿ ಪ್ರಪ್ರಲ್ಲಿತಗಳಾಗಿರುತ್ತಿದ್ದುವಲ್ಲದೆ, ಯಾರಮುಖದಲ್ಲೂ ಕೋಪಕಳಂಕ ಅಸೂಯಾದಿ ಭಾವಗಳು ತೋರ್ಪಡಲಿಲ್ಲ ವಾದವು ನಡೆದಿ

ರಲಾಗಿ ಯಾರ ಮೈಯಿಂದಲೂ ಬೆವರು ಬರಲಿಲ್ಲ ಯಾರ ದೇಹದಲ್ಲೂ ಕಂಪನವು ಉತ್ಪನ್ನವಾಗಲಿಲ್ಲ ಕೇಳಿದ ಪ್ರಶ್ನೆಗೆ ಉತ್ತರ ದೊರೆಯದೆ ಯಾರೂ ನಿರಾಶರಾಗಿ ಆಕಾಶದ ಕಡೆಗೆ ನೋಡುತ್ತಾ ಕುಳಿತುಕೊಳ್ಳಲಿಲ್ಲ. ಅಲ್ಲದೆ "ಶೇಷಂಕೋಪೇನ ಪೂರಯೇತ್" ಎಂಬಂತೆ ಯೋಗ್ಯ ಉತ್ತರಕೊಡಲಾರದೆ ಯಾರೂ ಕ್ರೋಧವನ್ನು ತೋರಿಸಲಿಲ್ಲ. ಯಾರೂ ವಿತಂಡವಾದವನ್ನಾಗಲೀ ಛಲವಾದವನ್ನಾಗಲೀ ಮಾಡದೆ ಶಾಸ್ತ್ರಾರ್ಥಸಂಗತಿಗಳನ್ನೇ ಪ್ರಮಾಣವಾಗಿಟ್ಟುಕೊಂಡು ಸಾಧುವಾದದಿಂದ ತಮ್ಮ ತಮ್ಮ ಸಿದ್ಧಾಂತಗಳನ್ನು ಪ್ರತಿಪಾದಿಸುತ್ತಿದ್ದರು

ಹೀಗೆ ವಾದವು ಕೆಲವುದಿನಗಳು, ಅನೇಕ ಶಂಕಾಸಮಾಧಾನಗಳೊಡನೆ ನಡೆದು ಕೊನೆಗೆ ಯತಿಗಳ ಸಿದ್ಧಾಂತವು ಯುಕ್ತವಾದುದೆಂದು ಉಭಯಭಾರತೀದೇವಿಯು ಒಪ್ಪಿಕೊಂಡಳು ಆ ದಿನಕ್ಕೆ ಸರಿಯಾಗಿ ಪತಿಯು ಕೊರಳಲ್ಲಿನ ಹಾರವೂ ಬಾಡುತ್ತಿರಲು, ತನ್ನ ಪತಿಯು ಪರಾಜಿತನಾದನೆಂದು ತಿಳಿದು, ಆ ದಿನ ಒಬ್ಬರನ್ನು ಭೋಜನಕೆ ಮತ್ತೊಬ್ಬರನ್ನು ಭಿಕ್ಷೆಗೆ ಬನ್ನಿರೆಂದು ಕರೆಯದೆ ಆಕೆಯು ಇಬ್ಬರನ್ನೂ ಭಿಕ್ಷೆಗೆಬರಬೇಕೆಂದು ವಿಜ್ಞಾಪಿಸಿಕೊಂಡಳು ಎಂದರೆ ಮಂಡನಮಿಶ್ರರು ಗೃಹಸ್ಥಾಶ್ರಮವನ್ನು ತ್ಯಜಿಸಿ ಸನ್ಯಾಸವನ್ನು ಸ್ವೀಕರಿಸಿದಂತಾಯಿತು ಎಂದು ಭಾವಿಸಿದಳು ಈ ಮಂಡನಮಿಶ್ರರೇ ತರುವಾಯ ಸುರೇಶ್ವರಾಚಾರ್ಯರೆಂಬ ನಾಮಧೇಯದಿಂದ ಪ್ರಸಿದ್ಧರಾಗಿ ಶ್ರೀ ಶೃಂಗೇರಿಯ ಮಠಕ್ಕೆ ಆದಿಗುರುಗಳಾಗಿ ಶ್ರೀಶಂಕರಾಚಾರ್ಯರಿಂದ ನಿಯಮಿಸಲ್ಪಟ್ಟವರು!



## ಅಧ್ಯಾಯ ೫ "ಮಾತಾಶಾರದಾ— ಅದ್ವೈತಮತಸ್ಥಾಪನೆ"

ಮಂಡನಮಿಶ್ರರ ಪರಾಜಯವಾದನಂತರ, ಶ್ರೀಉಭಯಭಾರತೀದೇವಿಯು ಆಚಾರ್ಯರನ್ನು ಕುರಿತು, "ಯತಿವರ್ಯರೇ, ಪೂಜ್ಯರಾದ ಮಂಡನಾರ್ಯರು ತಮ್ಮಿಂದ ಪರಾಜಿತರಾದುದು ವಾಸ್ತವ, ಆದರೆ ಪತ್ನಿಯು ಪತಿಯ ಅರ್ಧಾಂಗಿಯಾದುದರಿಂದ ನನ್ನನ್ನೂ ಶಾಸ್ತ್ರವಾದದಲ್ಲಿ ಜಯಿಸಿದಲ್ಲದೆ ನೀವು ಅವರನ್ನು ಸಂಪೂರ್ಣವಾಗಿ ಜಯಿಸಿದಂತಾಗಲಿಲ್ಲ" ವೆಂದಳು ಆ

ಗೆ ಆಚಾರ್ಯರು ಸ್ವಲ್ಪಕಾಲ ಯೋಚಿಸಿ "ಯಶೋವಂತರಾದ ಪುರುಷರು ಅ ಬಲೆಯರ ಸಂಗಡ ವಿವಾದ ಮಾಡುವುದಿಲ್ಲ" ವೆನ್ನಲು, ಭಾರತೀದೇವಿಯು "ತಮ್ಮ ಮತವನ್ನು ಸ್ಥಾಪಿಸುವುದಕ್ಕೆ ಪ್ರವೃತ್ತರಾದವರು, ಪ್ರತಿಪಕ್ಷದವರು ಸ್ತ್ರೀಯರೇ ಆಗಲಿ, ಪುರುಷರೇ ಆಗಲಿ ಗಣಿಸದೆ ಸ್ವಮತಸಂರಕ್ಷಣಾರ್ಥವಾಗಿ ಅವರೊಂದಿಗೆ ವಾದಿಸಿ ಜಯಿಸಬೇಕು" ಎಂದು ನುಡಿದು, ಪೂರ್ವದಲ್ಲಿ ಗಾರ್ಗಿಎಂಬ ಸ್ತ್ರೀಯೊಡನೆ ಯಾಜ್ಞ್ಯವಲ್ಕ್ಯ ಮಹರ್ಷಿಗಳೂ, ಸುಲಭೆ ಎಂಬ ಅಬಲೆಯೊಡನೆ ಜನಕಮಹಾರಾಜನೂ ವಿವಾದಮಾಡಿದ್ದಾರೆಂಬ ಉದಾಹರಣೆಯನ್ನು ಕೊಟ್ಟಳು ಆ ಮಾತಿಗೆ ಶಂಕರರು ನಿಶ್ಚಯವೆಂದು ಒಪ್ಪಿ, ಆಕೆಯೊಂದಿಗೆ ವಾದಕ್ಕೆ ಆರಂಭಿಸಿದರು

ಉಭಯಭಾರತೀದೇವಿಗೂ ಶಂಕರಾಚಾರ್ಯರಿಗೂ ವಾದವು ಹದಿನೇಳು ದಿವಸಗಳವರೆಗೆ ನಡೆಯಿತು ದೇವಿಯು ಆಚಾರ್ಯರನ್ನು ಹೇಗಾದರೂ ಪರಾಜಯಗೊಳಿಸಬೇಕೆಂದು, ಒಂದಾದಮೇಲೊಂದರಂತೆ ಅನೇಕ ಶಾಸ್ತ್ರಗಳಲ್ಲಿ ಪ್ರಶ್ನೆಗಳನ್ನು ಕೇಳತೊಡಗಿದಳು ಆದರೆ ಶಂಕರರು ಸಕಲ ಶಾಸ್ತ್ರಗಳಲ್ಲೂ ಅದ್ವಿತೀಯ ಪಾಂಡಿತ್ಯವುಳ್ಳವರಾದುದರಿಂದ ಆಕೆಯ ಪ್ರಶ್ನೆಗಳಿಗೆಲ್ಲಾ ಸಮಂಜಸ ಪ್ರತ್ಯುತ್ತರಗಳನ್ನು ಕೊಟ್ಟು ತಮ್ಮ ಸ್ಥಾನವನ್ನು ಕಾಯ್ದುಕೊಳ್ಳತೊಡಗಿದರು ಕೊನೆಗೆ ಭಾರತೀದೇವಿಯು, ಆಚಾರ್ಯರು ಚಿಕ್ಕಂದಿನಲ್ಲೇ ಸನ್ಯಾಸಾಶ್ರಮವನ್ನು ಸ್ವೀಕರಿಸಿದವರಾದುದರಿಂದ ಕಾಮಶಾಸ್ತ್ರಪರಿಚಯವಿಲ್ಲದ ಅವರನ್ನು ಆ ಶಾಸ್ತ್ರಮುಖದಿಂದ ಸೋಲಿಸಬಹುದೆಂದು ಯೋಚಿಸಿ, ' ಮನ್ಮಥನಿಗೆ ಕಲೆಗಳೆಷ್ಟು? ಅವುಗಳ ಲಕ್ಷಣಗಳೇನು? ಶುಕ್ಲಪಕ್ಷದಲ್ಲಿ ಅವು ಯಾವ ಯಾವ ಸ್ಥಾನಗಳಲ್ಲಿ ಇರುತ್ತವೆ? ಕೃಷ್ಣಪಕ್ಷದಲ್ಲಿ ಯಾವ ಯಾವ ಸ್ಥಾನಗಳಲ್ಲಿರುತ್ತವೆ?'' ಎಂಬ ಮುಂತಾದ ಪ್ರಶ್ನೆಗಳನ್ನು ಕೇಳಲಾರಂಭಿಸಿದಳು. ಆಚಾರ್ಯರು ಕಾಮಶಾಸ್ತ್ರದ ಈ ಪ್ರಶ್ನೆಗಳನ್ನು ಕೇಳಿ ಭ್ರಾಂತರಂತಾದರು ಆಗ ಅವರು ಆಕೆಯನ್ನು ಕುರಿತು "ತಾಯೇ ನಾನು ಆಜನ್ಮಸನ್ಯಾಸಿಯು, ಆದುದರಿಂದ ಆ ಶಾಸ್ತ್ರದಲ್ಲಿ ಪರಿಶ್ರಮವನ್ನು ಹೊಂದಲಿಲ್ಲ. ಒಂದು ತಿಂಗಳಕಾಲ ಅವಕಾಶವಿತ್ತರೆ, ಅದರಲ್ಲೂ ಶಿಕ್ಷಣವನ್ನು ಹೊಂದಿ ನಿಮ್ಮ ಪ್ರಶ್ನೆಗಳಿಗೆ ಉತ್ತರಗಳನ್ನು ಕೊಡಬಲ್ಲೆನು" ಎಂದು ನುಡಿದರು ಉಭಯಭಾರತೀದೇವಿಯು ಒಪ್ಪಿದಳು ಆಚಾರ್ಯರೂ ತಮ್ಮ ಶಿಷ

ರೊಂದಿಗೆ ಅಲ್ಲಿಂದ ಹೊರಟು ಅಮರಕಪುರವೆಂಬ ಪಟ್ಟಣದ ಸಮೀಪಕ್ಕೆ ಬರುತ್ತಿರಲಾಗಿ ಅಲ್ಲಿಯ ರಾಜನು ಮೃತನಾಗಿದ್ದು, ಆತನ ದೇಹವನ್ನು ದಹನಕ್ಕೆ ಸಿದ್ಧಗೊಳಿಸುತ್ತಿದ್ದಾರೆಂದು ವರ್ತಮಾನ ತಿಳಿಯಿತು. ಒಡನೆ ಆಚಾರ್ಯರು, ತಮ್ಮ ದೇಹವನ್ನು ಒಂದು ಸ್ಥಳದಲ್ಲಿಟ್ಟು ಪರಕಾಯಪ್ರವೇಶ ವಿದ್ಯಾ ಸಾಮರ್ಥ್ಯದಿಂದ ರಾಜನದೇಹವನ್ನು ಹೊಕ್ಕು ಆ ವಿದ್ಯೆಯಲ್ಲೂ ಪರಿಶ್ರಮವನ್ನು ಹೊಂದಿ ಬರುತ್ತೇವೆಂದು ನುಡಿದರು. ಆ ಮಾತನ್ನು ಕೇಳಿ, ಪದ್ಮಪಾದರು ವಿನಯದಿಂದ, "ಯೋಗಶಕ್ತಿಯಿಂದ ಆ ರಾಜನ ದೇಹವನ್ನು ಪ್ರವೇಶಿಸಿ ಅಲ್ಲಿಯ ಇಂದ್ರಿಯ ವಿಷಯಗಳನ್ನು ಅನುಭವಿಸಲು ಪ್ರಾರಂಭಿಸಿದ ಬಳಿಕ ಅವುಗಳನ್ನು ಬಿಟ್ಟು ಪುನಃ ಹಿಂದಿರುಗಲು ಮನಸ್ಸು ಒಡಂಬಡದಿರಬಹುದು. ಅಥವಾ ಹಾಗೆ ಬರಬಹುದಾದರೂ, ಸರ್ವಸಂಗಪರಿತ್ಯಾಗಮಾಡಿದ ತಮ್ಮ ಸನ್ಯಾಸಧರ್ಮಕ್ಕೆ ಈ ವರ್ತನವು ಯೋಗ್ಯವಾದುದೆನಿಸಲಾರದು" ಎಂದು ವಿಜ್ಞಾಪಿಸಿದರು. ಆಗ ಶಂಕರರು—"ನಿಜ, ಆದರೆ ಶ್ರೀಕೃಷ್ಣನಂಥ ಸ್ಥಿತಪ್ರಜ್ಞನಿಗೆ ಇವುಗಳಿಂದ ಯಾವ ತರಡ ಭಯವೂ ಇಲ್ಲ. ಜಗತ್ತಿನಲ್ಲಿ ಸಕಲ ಬಂಧನಗಳಿಗೂ ಮನಸ್ಸೇ ಕಾರಣವು. ಸಂಕಲ್ಪರಹಿತನಾದ ನನ್ನನ್ನು ಯಾವ ಸಂಬಂಧವೂ ಬಂಧಿಸಲಾರದು. ಸ್ಥಿತಪ್ರಜ್ಞನು ಸತ್ಕರ್ಮಗಳ ಅಥವ ದುಷ್ಕರ್ಮಗಳ ಫಲಾಫಲಗಳನ್ನು ಹೊಂದಲಾರನು" ಎಂದು ನುಡಿದು ಸಮಾಧಾನಗೊಳಿಸಿ, ಒಂದು ಮರದ ಪೊಟ್ಟರೆಯಲ್ಲಿ ತಮ್ಮ ಪೂಜ್ಯದೇಹವನ್ನು ಬಿಟ್ಟು, ಅದನ್ನು ಜಾಗ್ರತೆಯಿಂದ ಸಂರಕ್ಷಿಸಬೇಕೆಂದು ಶಿಷ್ಯರಿಗೆ ಹೇಳಿ, ಯೋಗಸಾಮರ್ಥ್ಯದಿಂದ ಅಲ್ಲಿಂದ ಹೊರಟು ಅಮರಕರಾಜನ ದೇಹವನ್ನು ಪ್ರವೇಶಿಸಿದರು. ಇತ್ತ ಯತಿದೇಹವು ನಿಶ್ಚೇತನವಾಗಿ ಬಿದ್ದು, ರಾಜನ ದೇಹವು ಸಚೇತನವಾಗಿ ಚಲಿಸಲಾರಂಭವಾಯಿತು. ಒಡನೆ ರಾಜಪತ್ನಿಯರೂ, ಮಂತ್ರಿಗಳೂ ಪರಿವಾರವೆಲ್ಲವೂ ಆನಂದ ಕೋಲಾಹಲಗಳಿಂದ, ರಾಜನನ್ನು ಓಲೈಸತೊಡಗಿದರು.

ಆಚಾರ್ಯರು ರಾಜನ ದೇಹದಲ್ಲಿ ನಿಂತು ಅಂತಃಪುರದ ಸ್ತ್ರೀಜನರಿಂದ ಕಾಮಶಾಸ್ತ್ರರಹಸ್ಯಗಳನ್ನು ಗ್ರಹಿಸತೊಡಗಿದರು. ಅವರ ರಾಜ್ಯಪಾಲನಾ ಸಾಮರ್ಥ್ಯ, ಧರ್ಮನಿರ್ಣಯಚಾತುರ್ಯ, ಉದಾತ್ತಗುಣಸ್ವಭಾವಗಳು, ಆ ರಾಜನಲ್ಲಿ ಮೊದಲು ಕಂಡುಬರುತ್ತಿದ್ದ ಗುಣಗಳಿಗಿಂತ ಅತ್ಯಂತ ಭಿನ್ನವಾಗಿಯೂ

ಉತ್ತಮವಾಗಿಯೂ ಇವೆಯೆಂದು ತಿಳಿದು, ಮಹಾರಾಣಿಯು, ಮಂತ್ರಿಯನ್ನು ಕರೆಸಿ "ಈ ದೇಹವು ಮಹಾರಾಜರದೇ ಆಗಿದ್ದರೂ ಇದರೊಳಗೆ ಸೇರಿರುವ ಜೀವಾತ್ಮನು ನಮ್ಮ ಪ್ರಭುವಿನದಲ್ಲ ಯಾವನೋ ಮಹಾತ್ಮನಾದ ಯೋಗಿವರ್ಯನೊಬ್ಬನು, ಕಾರಣಾಂತರದಿಂದ ಈ ರಾಜಕಳೇಬರದಲ್ಲಿ ಸೇರಿರಬಹುದು ಆದುದರಿಂದ ಸುತ್ತಲೂ ಹುಡುಕಿ, ಮೃತಕಳೇಬರವು ಎಲ್ಲಿ ಸಿಕ್ಕಿದರೂ ದಹಿಸಿಬಿಡುವಂತೆ ಆಜ್ಞಾಪಿಸು" ಎಂದು ಹೇಳಿದಳು. ಆ ಮಾತನ್ನು ಕೇಳಿ ಮಂತ್ರಿಯು ಅಲ್ಲಲ್ಲಿ ಹುಡುಕಿಸತೊಡಗಿದನು

ಆ ವೇಳೆಗೆ ಇತ್ತ ಆಚಾರ್ಯರ ಶಿಷ್ಯರು, ಬಹು ದಿನಗಳಾದರೂ ತಮ್ಮ ಗುರುಗಳು ಬಾರದಿದ್ದುದರಿಂದ ಭಯಗ್ರಸ್ತರಾಗಿ, ಗಾಯಕರ ವೇಷದಿಂದ ರಾಜಸಭೆಗೆ ಬಂದು,

**ಶ್ಲೋಕ:—**

"ನಿಸ್ತಮಸಿನೀರಜಸಿ ನಿರ್ಗಳಿತಸತ್ವೇ । ತೇಜಸಿವಿವೇಕಜುಷಿ ಭೇದಮತಿಶೂನ್ಯೇ ॥
ನಿರ್ವಚನಮಾನಸ ಪದಾತಿಗಮಚಿಂತ್ಯಂ । ತತ್ವಮಸಿ ತತ್ವಮಸಿ ತತ್ವಮಸಿ ರಾಜನ್॥"

ಎಂಬ ಈ ಬಗೆಯ ಐದು ಶ್ಲೋಕಗಳಿಂದ ಆಚಾರ್ಯರ ಪೂರ್ವವೃತ್ತವು ಅವರ ಜ್ಞಾಪಕಕ್ಕೆ ಬರುವಂತೆ ಹೇಳಿದರು ಆ ಮಾತುಗಳನ್ನು ಕೇಳಿದೊಡನೆಯೇ ಶಂಕರರು ಆ ರಾಜಕಳೇಬರವನ್ನು ಅಲ್ಲಿ ಬಿಟ್ಟು, ಒಂದು ಪಾರಿವಾಳದ ದೇಹವನ್ನು ಆಶ್ರಯಿಸಿ, ಹಿಂದೆ ತಮ್ಮ ದೇಹವನ್ನು ಇಟ್ಟಿದ್ದ ಮಠದ ಪೊಟರೆಯ ಬಳಿಗೆ ಬಂದರು ಆ ವೇಳೆಗೆ ರಾಜದೂತರು ಹುಡುಕುತ್ತಾ ಬಂದು ಅಲ್ಲಿದ್ದ ಆ ಶವವನ್ನು ಬೆಂಕಿಯ ಮೇಲಿಟ್ಟು ದಹಿಸುತ್ತಿರಲು ಕಂಡು ಹತಾಶರಾಗದೆ ಅದನ್ನು ಹೊಕ್ಕು ಆಚಾರ್ಯರು ತಮ್ಮಾ ದೇಹವನ್ನು ರಕ್ಷಿಸಿಕೊಡುವಂತೆ,

**ಶ್ಲೋಕ:—**

"ಶ್ರೀಮತ್ಪಯೋನಿಧಿ ನಿಕೇತನಚಕ್ರಪಾಣೇ । ಭೋಗೀಂದ್ರ ಭೋಗಮಣಿರಾಜಿತ ಪುಣ್ಯಮೂರ್ತೇ ॥
ಯೋಗೀಶಶಾಶ್ವತಶರಣ್ಯ ಭವಾಬ್ಧಿಪೋತ । ಲಕ್ಷ್ಮೀನೃಸಿಂಹ ಮಮದೇಹಿಕರಾವಲಂಬನಮ್॥"

ಎಂಬ ಎಂಟು ಶ್ಲೋಕಗಳ ಸ್ತೋತ್ರದಿಂದ ಶ್ರೀಲಕ್ಷ್ಮೀನೃಸಿಂಹ ಸ್ವಾ

ಯನ್ನು ಪ್ರಾರ್ಥಿಸಲು, ಆ ದೇವರದೇವನು ಪ್ರತ್ಯಕ್ಷವಾಗಿ, ಆಚಾರ್ಯರ ದೇಹವನ್ನು ತನ್ನ ಮಂಗಳಕರಹಸ್ತಗಳಿಂದ ತಡವಿ ಅದನ್ನು ಅಗ್ನಿಬಾಧೆಯಿಂದ ಕಾಪಾಡಿ ಅನುಗ್ರಹಿಸಿದನು.

ತರುವಾಯ ಆಚಾರ್ಯರು ಶಿಷ್ಯರೊಂದಿಗೆ ಅಲ್ಲಿಂದ ಹೊರಟು ಪುನಃ ಮಾಹಿಷ್ಮತೀ ನಗರಕ್ಕೆ ಬಂದರು. ಉಭಯಭಾರತೀದೇವಿಯು ಈ ಸಾರಿ ವಾದಮಾಡದೆಯೇ ಅವರ ಸರ್ವಜ್ಞತೆಯನ್ನು ಒಪ್ಪಿಕೊಂಡಳು. ಆಚಾರ್ಯರು ಆಗ ಆಕೆಯನ್ನು ಕುರಿತು "ತಾಯೇ ಋಷ್ಯಶೃಂಗ ಮೊದಲಾದ ಕ್ಷೇತ್ರಗಳಲ್ಲಿ ಧರ್ಮೋದ್ಧಾರಕ್ಕಾಗಿ ನಾನು ಸ್ಥಾಪಿಸಬೇಕೆಂದಿರುವ ಮಠಗಳಲ್ಲಿ ನೀನು ವಾಸಿಸಿ ಪೂಜೆಯನ್ನು ಸ್ವೀಕರಿಸುತ್ತಾ ಸಕಲರ ಪುರುಷಾರ್ಥಗಳನ್ನೂ ದಯೆಪಾಲಿಸುತ್ತಾ ಇರಬೇಕು" ಎಂದು ಪ್ರಾರ್ಥಿಸಿದರು. ಶಾರದಾ ದೇವಿಯೂ "ತಥಾಸ್ತು" (ಹಾಗೆಯೇ ಆಗಲಿ) ಎಂದು ಒಪ್ಪಿಕೊಂಡಳು.

ಪಶ್ಚಿಮ ಘಟ್ಟದ ಪರ್ವತಶ್ರೇಣಿಗಳಿಗೆ ಸೇರಿದ ಸಹ್ಯಾದ್ರಿಯ ಶಿಖರದಲ್ಲಿ ಜನಿಸುವ ತುಂಗಭದ್ರಾ ನದಿಗಳ ತೀರದಲ್ಲಿ ಋಷ್ಯಶೃಂಗ ಮಹರ್ಷಿಯ ತಂದೆಯಾದ ವಿಭಾಂಡಕ ಮಹರ್ಷಿಯ ಆಶ್ರಮವಿರುವುದು. ಅದರ ಸಮೀಪದಲ್ಲೇ ವರಾಹರೂಪಿ ಶ್ರೀ ವಿಷ್ಣುವು ತನ್ನ ವರಾಹಾವತಾರ ಕೃತ್ಯವು ಮುಗಿದನಂತರ ವರಾಹ ದೇಹವನ್ನು ಅಲ್ಲಿ ಸ್ಥಾಪಿಸಿರುವನೆಂಬ ಪ್ರತೀತಿಯಿದೆ. ಆ ಪ್ರದೇಶವು ನದೀತೀರ, ನಿರ್ಜನತೆ, ಪ್ರಕೃತಿಸೌಂದರ್ಯ, ಪವಿತ್ರವಾತಾವರಣ ಮುಂತಾದುವುಗಳಿಂದ ತಪೋವನವಾಗಲು ಯೋಗ್ಯವಾಗಿರುವುದರಿಂದ ಶ್ರೀ ಆಚಾರ್ಯರು ಆ ಸ್ಥಳಕ್ಕೆ ಬಂದು, ಅಲ್ಲಿ ಶ್ರೀ ಶಾರದಾ ದೇವಿಗೆ ಒಂದು ಆಲಯವನ್ನು ಕಟ್ಟಿಸಿ, ಮಂತ್ರಶಾಸ್ತ್ರೋಕ್ತರೀತಿಯಲ್ಲಿ ಬೀಜಾಕ್ಷರಗಳಿಂದ ಶ್ರೀ ಚಕ್ರವನ್ನು ಬರೆದು, ವಿಧ್ಯುಕ್ತರೀತಿಯಿಂದ ಆ ದೇವತೆಯನ್ನು ಅಲ್ಲಿ ಸ್ಥಾಪಿಸಿ ಪೂಜಿಸಿದರು. ಮತ್ತು ಅಲ್ಲೊಂದು ಮಠವನ್ನೂ ಕಟ್ಟಿಸಿ, ಅದಕ್ಕೆ ತಮ್ಮ ಶಿಷ್ಯರಾದ ಸುರೇಶ್ವರಾಚಾರ್ಯರನ್ನೇ (ಮಂಡನಮಿಶ್ರ) ಪ್ರಧಾನ ಗುರುಗಳನ್ನಾಗಿ ಏರ್ಪಡಿಸಿದರು. ಅಂದಿನಿಂದಲೂ ಶೃಂಗೇರಿಯ ಪೀಠವು ಶ್ರೀ ಶಾರದಾಂಬೆಯ ಪರಮಾನುಗ್ರಹಕ್ಕೆ ಪಾತ್ರವಾಗಿದೆ. ಅಲ್ಲಿನ ಮಠಾಧಿಪತ್ಯಕ್ಕೆ ಬರುವ ಯತಿಗಳಿಗೆ ಜಗದ್ಗುರುಗಳೆಂಬ ಗೌರವವು ಪ್ರಾಪ್ತವಾಗಿದೆ.

ತರುವಾಯ ಶಂಕರಾಚಾರ್ಯರು, ತಮ್ಮ ಭಾಷ್ಯಗಳಿಗೆ ವಾರ್ತಿಕಗಳ

ನ್ನು ಬರೆಯುವಂತೆ ಸುರೇಶ್ವರಾಚಾರ್ಯರಿಗೆ ಅಜ್ಞಾಪಿಸಿದರು. ಸುರೇಶ್ವರಾಚಾರ್ಯರು ಮೊದಲು ಕರ್ಮವಾದಿಗಳಾಗಿದ್ದುದರಿಂದ ಅವರು ಬರೆದ ವಾರ್ತಿಕವು ಆ ಮಾರ್ಗವನ್ನೇ ಹಿಡಿದು ಆಚಾರ್ಯರ ಅದ್ವೈತ ಸಿದ್ಧಾಂತದ ಮುಖ್ಯಾರ್ಥಗಳನ್ನು ಹೊರಪಡಿಸಲಾರದೆಂದು ಪದ್ಮಪಾದರೇ ಮುಂತಾದ ಶಿಷ್ಯರು ಸಂದೇಹಿಸಲು, ಆಚಾರ್ಯರು ಸುರೇಶ್ವರಾಚಾರ್ಯರನ್ನು ಕುರಿತು ಹಾಗಾದರೆ ಮೊದಲು ಅದ್ವೈತಪರ ಒಂದು ಸ್ವತಂತ್ರ ಗ್ರಂಥವನ್ನು ಬರೆಯಿರೆಂದು ಹೇಳಿದರು ಅದನ್ನು ಕೇಳಿ ಸುರೇಶ್ವರರು, ಮೊದಲು ನೈಷ್ಕರ್ಮ್ಯಸಿದ್ಧಿ ಎಂಬೊಂದು ಗ್ರಂಥವನ್ನು ಬರದುಕೊಡಲು ಶ್ರೀಮದಾಚಾರ್ಯರು ಅದನ್ನು ನೋಡಿ ಪರಮ ಸಂತೋಷಪಟ್ಟು ತಮ್ಮ ಭಾಷ್ಯಗಳಿಗೆ ವಾರ್ತಿಕವನ್ನು ಬರೆಯಲು ಅನುಮತಿಸಿದರು ಅದರಂತೆಯೇ ಸುರೇಶ್ವರಾಚಾರ್ಯರೂ ಶಂಕರಾಚಾರ್ಯರಿಂದ ರಚಿತವಾದ ಬೃಹದಾರಣ್ಯಕೋಪನಿಷದ್ಭಾಷ್ಯ, ತೈತ್ತಿರೀಯೋಪನಿಷದ್ಭಾಷ್ಯ, ದಕ್ಷಿಣಾಮೂರ್ತಿಸ್ತೋತ್ರ, ಪಂಚೀಕರಣ, ಬ್ರಹ್ಮಸೂತ್ರಭಾಷ್ಯ ಮುಂತಾದುವುಗಳಿಗೆ ವಾರ್ತಿಕಗಳನ್ನು ಬರೆದು, ತಮ್ಮ ಯೋಗಸಾಮರ್ಥ್ಯದಿಂದ ೭೦೦ ಸಂವತ್ಸರಗಳ ಕಾಲ ಶ್ರೀ ಶೃಂಗೇರಿಯ ವ್ಯಾಖ್ಯಾನ ಸಿಂಹಾಸನವನ್ನು ಅಧಿರೋಹಿಸಿದ್ದು ತರುವಾಯ ಸಮಾಧಿಸ್ಥರಾದರು —ಹೀಗೆ ಶ್ರೀ ಶಂಕರಾಚಾರ್ಯರು ಧರ್ಮೋದ್ಧಾರಕ್ಕಾಗಿ ಅನೇಕ ಬಗೆಯ ಕಾಯಕಷ್ಟ ಮನಃಕ್ಲೇಶಗಳಿಗೆ ಒಳಪಟ್ಟರೂ ಕೊನೆಗೂ ಮಹಾತಾ ಶಾರದಾದೇವಿಯನ್ನೂ, ಅದ್ವೈತ ಪ್ರಥಮ ಮಠವನ್ನೂ ಸ್ಥಾಪಿಸಿ ತಮ್ಮಿಂದ ಪ್ರಕಟಗೊಳಿಸಲ್ಪಟ್ಟ ಒಂದು ಸಿದ್ಧಾಂತವು ಮುಂದೆ ಸ್ಥಿರರೂಪದಿಂದ ಲೋಕದಲ್ಲಿ ನಲಸಿ ಕೆಲಸಮಾಡಲು ಅವಕಾಶವುಂಟಾಗುವಂತೆ ಏರ್ಪಡಿಸಿ ಧನ್ಯರಾದರು



## ಅಧ್ಯಾಯ ೬ "ಧಾರ್ಮಿಕ ದಿಗ್ವಿಜಯ—ಅಂತ್ಯದೆಸೆ"

ಶ್ರೀ ಶಂಕರಾಚಾರ್ಯರು, ತಮ್ಮಿಂದ ಸ್ಥಾಪಿತವಾದ ಅದ್ವೈತ ಸಿದ್ಧಾಂತವು ನಿರ್ಬಾಧಿತವಾಗಿ ಅಭಿವೃದ್ಧಿಯಾಗಲು, ಒಂದು ಮಠವು ಏರ್ಪಟ್ಟು ಅದಕ್ಕೆ ಮಹಾ ಪ್ರತಿಭಾಶಾಲಿಗಳಾದ ಸುರೇಶ್ವರಾಚಾರ್ಯರಂತಹ ಅಧಿಪತಿ

ಯು ದೊರೆತುದಕ್ಕಾಗಿ ಪರಮಸಂತುಷ್ಟರಾದರು. ಶ್ರೀ ಆಚಾರ್ಯರ ಜೀವಿತವನ್ನು ಬರೆದಿರುವವರಲ್ಲಿ ಕೆಲವರು, ಶ್ರೀಮತಿ ಆರ್ಯಾಂಬೆಯು ದಿವಂಗತಳಾದುದು ಆಚಾರ್ಯರು ಶೃಂಗೇರಿಯ ಮಠವನ್ನು ಸ್ಥಾಪಿಸಿದ ತರುವಾಯವೆಂದು ಅಭಿಪ್ರಾಯಪಡುತ್ತಾರಾದುದರಿಂದ, ಆ ಸಂಗತಿಯನ್ನು ಈ ಸಂದರ್ಭದಲ್ಲಿ ನಡೆದಂತೆ ಅನ್ವಯಿಸಿಕೊಳ್ಳುವುದರಿಂದಲೂ ಬಾಧಕವಿಲ್ಲ! ಮುಂದೆ ಆಚಾರ್ಯರು ಮಠದಲ್ಲಿದ್ದೇ ಮಾಡಬೇಕಾದ ಕಾರ್ಯವೇನೂ ಉಳಿಯಲಿಲ್ಲವಾಗಿ ಅವರು ತಮ್ಮ ಇತರ ಶಿಷ್ಯರೊಂದಿಗೆ ಭರತವರ್ಷದ ಪೂರ್ವ ದಕ್ಷಿಣ ಪಶ್ಚಿಮೋತ್ತರ ಪ್ರಾಂತಗಳಲ್ಲಿ ಮತಪ್ರಚಾರಕ್ಕಾಗಿ ಸುತ್ತತೊಡಗಿದರು. ಕಾಂಚೀನಗರಕ್ಕೆ ನಡೆದು ಅಲ್ಲಿದ್ದ ಅರಸಿನ ಸಹಾಯದಿಂದ ಅಲ್ಲಿಯ ಶ್ರೀ ವರದರಾಜಸ್ವಾಮಿಗೂ ಶ್ರೀಮದೇಕಾಮ್ರನಾಥನಿಗೂ, ಕಾಮಾಕ್ಷೀದೇವಿಗೂ ಮನೋಹರವಾದ ಆಲಯಗಳನ್ನು ಕಟ್ಟಿಸಿ ಅಲ್ಲಿದ್ದ ಪಂಡಿತರಿಗೆ ಅದ್ವೈತಸಿದ್ಧಾಂತಗಳನ್ನು ಬೋಧಿಸಿದರು. ಕಾಮಾಕ್ಷೀದೇವಾಲಯದಲ್ಲಿ ಬೀಜಾಕ್ಷರಗಳಿಂದ ಯುಕ್ತವಾದ ಶ್ರೀಚಕ್ರವನ್ನು ಬರೆದು ಸ್ಥಾಪಿಸಿದರು. ಅಲ್ಲಿಂದ ತಿರುಪತಿಗೆ ನಡೆದು ಶ್ರೀವೇಂಕಟೇಶ್ವರ ಸ್ವಾಮಿಯನ್ನು ಆರಾಧಿಸಿ, ಕಾಳಹಸ್ತಿಗೆ ಬಂದು ಶ್ರೀಕಾಳಹಸ್ತೀಶ್ವರನನ್ನು ಸೇವಿಸಿ, ಚಿದಂಬರಕ್ಕೆ ಹೋಗಿ ಅಲ್ಲಿ ಪ್ರಬಲವಾಗಿದ್ದ ಪರಮತವನ್ನು ಖಂಡಿಸಿ, ರಾಮೇಶ್ವರಕ್ಕೆ ಪ್ರಯಾಣಮಾಡಿ ಶ್ರೀರಾಮೇಶ್ವರಸ್ವಾಮಿಯ ದರ್ಶನ ಮಾಡಿದರು. ತರುವಾಯ ಮಧುರೆ ಅನಂತಶಯನ ಮುಂತಾದ ಪ್ರಾಂತಗಳಲ್ಲಿ ಸಂಚಾರಮಾಡಿ ಪರವಾದಿಗಳನ್ನು ಜಯಿಸಿ ಅವರಿಗೆ ತಮ್ಮ ಸಿದ್ಧಾಂತಗಳನ್ನು ಬೋಧಿಸಿ ಹಿತವಾದ ಅವರನ್ನು ಉದ್ಧರಿಸುತ್ತಾ ಕೈಕೊಳ್ಳುತ್ತಿತ್ತು, ವಾಸುಕೀಕ್ಷೇತ್ರಕ್ಕೆ ನಡೆದು ಅಲ್ಲಿ ಶ್ರೀಕುಮಾರಸ್ವಾಮಿಯನ್ನು ಸೇವಿಸಿ, ಗೋಕರ್ಣ ಸುಬ್ರಹ್ಮಣ್ಯ ಮುಂತಾದ ಕ್ಷೇತ್ರಗಳನ್ನು ಹೊಕ್ಕು ಶ್ರೀಮಹಾಬಲೇಶ್ವರನನ್ನು ಸಂದರ್ಶಿಸಿದರು. ತರುವಾಯ ಪೂರ್ವತೀರದಲ್ಲಿ ಹೊರಟು ಜಗನ್ನಾಥದಲ್ಲಿ ಸ್ವಾಮಿಯನ್ನು ಆರಾಧಿಸಿ ಅಲ್ಲಿ ಭೋಗವರ್ಧನವೆಂಬ ಹೆಸರಿನಿಂದ ಒಂದು ಮಠವನ್ನು ಸ್ಥಾಪಿಸಿ ಅದಕ್ಕೆ ಶ್ರೀಪದ್ಮಪಾದಾಚಾರ್ಯರನ್ನು ಅಧಿಪತಿಯನ್ನಾಗಿ ಮಾಡಿದರು. ಅಲ್ಲಿಂದ ಉಜ್ಜಯಿನಿಗೆ ನಡೆದು ಮಹಾಕಾಳೇಶ್ವರನನ್ನು ಭಜಿಸಿ, ಮುಂದೆ ದ್ವಾರಕೆಗೆ ಪ್ರಯಾಣಮಾಡಿ ಶ್ರೀಕೃಷ್ಣಮೂರ್ತಿಯನ್ನು ಸೇವಿಸಿ ಅಲ್ಲಿ ಒಂದು ಮಠವನ್ನು ಸ್ಥಾಪಿಸಿ ಅದಕ್ಕೆ ಶ್ರೀಹಸ್ತಾಮಲಕಾಚಾರ್ಯರನ್ನು ಅಧಿಪತಿಯನ್ನಾಗಿ ನಿಯಮಿಸಿದರು. ತರುವಾಯ ಮತ್ತೊಂದು ಸಾರಿ ಬದರಿಕಾಶ್ರಮಕ್ಕೆ ನಡೆದು ಅಲ್ಲಿ ಒಂದು ಮಠವನ್ನು ಏರ್ಪಡಿಸಿ ಅದಕ್ಕೆ ಶ್ರೀತೋಟಕಾಚಾರ್ಯರನ್ನು ಅಧಿಪತಿಗಳನ್ನಾಗಿ ಮಾಡಿ, ತಾವು ಪುನಃ ಮತಪ್ರಚಾರಕ್ಕಾಗಿ ವಿವಿಧ ಪ್ರಾಂತಗಳಲ್ಲಿ ಸಂಚರಿಸಿದರು. ಆಚಾರ್ಯರ ಈ ಭಾರತದೇಶದ ಭ್ರಮಣಕಾಲದಲ್ಲಿ ಅಲ್ಲಲ್ಲಿದ್ದ ಅನೇಕಮಂದಿ ಬೌದ್ಧಪಂಡಿತರೂ, ಕಾಪಾಲಿಕ, ಶಾಕ್ತೇಯ, ಮುಂತಾದ ಮತಗಳ ಪ್ರತಿಪಾದಕರೂ ಎದುರಾಗಿ ಅನೇಕ ಬಗೆಯ ವಿತಂಡವಾದಗಳಿಂದ ಅವರನ್ನು ಜ

# ಉಪಸಂಹಾರ



ಶ್ರೀ ಶಂಕರಾಚಾರ್ಯರು, ಮುಕ್ತಿಗೆ ಜ್ಞಾನವೇ ಮುಖ್ಯಸಾಧನವೆಂ
ಹೇಳಿದರೂ ಕರ್ಮವು ಅನಾವಶ್ಯಕವೆಂದು ಹೇಳಲಿಲ್ಲ. ಅಲ್ಲದೆ ಅಪರೋ
ಪರಿಪಾಕ ಪರ್ಯಂತರವೂ ಸಾಧಕನು ಕರ್ಮಾನುಷ್ಠಾನಪರನಾಗಿರಬೇಕೆಂ
ದೂ. ಭಕ್ತಿಯೇ ಮುಕ್ತಿಗೆ ಸಾಧನವೆಂದೂ ಹೇಳಿದರು. 'ಸೋಹಂ' 'ತ
ಮಸಿ' 'ಅಹಂಬ್ರಹ್ಮಾಸ್ಮಿ' ಮುಂತಾದ ಮಹಾವಾಕ್ಯಗಳು ಅಹಂಕಾರ
ಮಕಾರಗಳಿಂದ ಜಗವ ಸುಂದರ ಪಾಲಿನ ತತ್ತ್ವಗಳಲ್ಲಿ! ನಿತ್ಯಾನಿತ್ಯ
ವಸ್ತುವಿವೇಕ ವೈರಾಗ್ಯಾದಿ ಸಾಧನ ಚತುಷ್ಟಯ ಸಂಪತ್ತಿ, ಶಮದಮಾದಿ
ಷಟ್ಸಾಧನ ಇವುಗಳಿಂದ ಕೂಡಿದ ಸಾಧಕನು ಮಾತ್ರವೇ ಬ್ರಹ್ಮವಿಚಾರಕ್ಕೆ
ರ್ಹನು ಎಂದು ಬೋಧಿಸಿದರು. ಅಜ್ಞಾನವೇ ಅವಿದ್ಯೆಯೇ ಮನುಷ್ಯನನ
ಬಂಧಿಸುವ ಪರಮಶತ್ರುವೆಂದೂ, ಜ್ಞಾನಚಕ್ಷುವನ್ನು ತೆರೆದು ಮನುಷ್ಯ
ತಾನಾರೆಂಬುದನ್ನು ತಿಳಿದು ಮಾಯೆಯನ್ನು ಜಯಿಸಿ ಮುಕ್ತನಾಗಬಹುದೆಂ
ದೂ ಬೋಧಿಸಿದರು. ನಾನು ನನ್ನದೆಂಬ ಕೇವಲ ಅಸಂಗತಿಯನ್ನೇ ಗ
ಲಾಯಾದ ಮಾನವನು ಹರಿಹರರ ಐಕ್ಯಭಾವ ಭಿನ್ನ ಭಾವಗಳಲ್ಲಿ ಹೊಡೆದಾ
ವುದರ ನಿಷ್ಫಲತೆಯನ್ನು ತಿಳಿದು, ಭೇದಭಾವವನ್ನು ಮರೆತು ಒಂದೇ ಮನೋ
ಭಾವದಿಂದ ಹರಿಹರರನ್ನು ಒಂದೇ ಎಂದು ತಿಳಿದು ಭಜಿಸಿರೆಂದು ಹೇಳಿದರ
ಮೃದುಮಧುರವಾದ 'ಭಜಗೋವಿಂದ' ಗೀತೆಯಿಂದ ಲೌಕಿಕ ಜೀವಿತದ
ಸ್ಸಾರತೆಯನ್ನು ಸ್ಪಷ್ಟವಾಗಿ ಬೋಧಿಸಿದರು. ಶ್ರೀ ಶಂಕರಾಚಾರ್ಯರಿಂ
ಜಗತ್ತಿಗಾದ ಪ್ರಯೋಜನಗಳು ಇಷ್ಟೇ ಎಂದು ಎಣಿಸಲು ಯಾರಿಗೆ ಶ
ವುಂಟು!—ಅನಂತ ಉಪಕಾರಗಳಾದುವು! ಅಗಾಧ ಪ್ರಯೋಜನವಾಯಿತ
ಅದ್ವಿತೀಯ ಸಹಾಯವಾಯಿತು!

ಯಾವ ಆ ಪುರುಷ ಪುಂಗವರು ವಿಪ್ಲವ, ನಾಸ್ತಿಕತೆ ವಾದಸಾಮರ್ಥ
ಮುಂತಾದುವುಗಳಲ್ಲಿ ಅದ್ವಿತೀಯರೆನ್ನಿಸಿ ತಮ್ಮ ಪ್ರತಿಭೆಯಿಂದ—ದುರ್ಮ
ತಗಳ ಹಾವಳಿಗೆ ಸಿಕ್ಕಿ ಅಳಿಯಲನುವಾಗಿದ್ದ ಸನಾತನ ವೇದಧರ್ಮವನ
ಪುನರುಜ್ಜೀವನಗೊಳಿಸಿದರೋ, ಆ ಮಹಾಪುರುಷರ ಧಾರ್ಮಿಕ ಜೀವನವ
ಅವರ ಆ ಭಕ್ತಿ, ಜ್ಞಾನ ವೈರಾಗ್ಯಗಳೂ, ಸ್ವಾರ್ಥತ್ಯಾಗದ ಅವರ ಆ ಸ
ರಿತ್ರ್ಯವೂ, ಸಕಲ ಭಾರತೀಯರಿಗೂ ಆದರ್ಶವಾಗಿದ್ದು ಅವರಲ್ಲೂ ಆಯ
ಗುಣಗಳನ್ನುಂಟುಮಾಡಿ ಭಾರತದೇಶದ ನವಜೀವನಕ್ಕೆ ಸಹಕರಿಸಲಿ! ನಾ
ಸ್ತಿಕತೆಯು ನಶಿಸಿ ಆಸ್ತಿಕತೆಯು ಪುನರ್ಜೀವಿಸಲಿ! ಹಿಂದಿನ ಆ ಧಾರ್ಮಿ
ಜೀವನವು ಪುನಃ ಪ್ರಾಪ್ತಿಸಲಿ.

**ತಥಾಸ್ತು**

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

### ಮುನ್ನುಡಿ:—

ಸಂಸಾರರೂಪಿರಥಕ್ಕೆ ಭಾರ್ಯಾಭರ್ತರು ಎರಡು ಚಕ್ರಗಳು. ರಥವು ಸುಸ್ಥಿತಿಯಲ್ಲಿ ಪ್ರಯಾಣಮಾಡಿ ಗಮ್ಯಸ್ಥಾನವನ್ನು ಕ್ಷೇಮವಾಗಿ ಸೇರಲು, ಎರಡು ಚಕ್ರಗಳೂ ಎಲ್ಲಾ ವಿಷಯಗಳಲ್ಲೂ ಸಮಾನವಾಗಿರಬೇಕು. ಕಾಷ್ಟಮಯವಾದ ಚಕ್ರಗಳು, ಎತ್ತರ ಆಕಾರ ಪ್ರಮಾಣಗಳಲ್ಲಿ ಸಮಾನವಾಗಿರದೆ ಒಂದಕ್ಕೊಂದಕ್ಕೆ ಅರ್ಧ ಅಂಗುಲದಷ್ಟು ವ್ಯತ್ಯಾಸವಿದ್ದರೂ ರಥವು ಹೇಗೆ ಸರಿಯಾಗಿ ನಡೆಯಲಾರದೋ, ಹಾಗೆಯೇ ಸಂಸಾರರಥದ ಎರಡು ಚಕ್ರಗಳಾದ ಪತಿಪತ್ನಿಯರೂ ವಿದ್ಯಾಬುದ್ಧಿಗಳು, ದಯೆದಾಕ್ಷಿಣ್ಯಾದಿಗಳು, ಗುಣನಡತೆಗಳು ಮುಂತಾದುವುಗಳಲ್ಲಿ ಸಮಾನರಾಗಿದ್ದರಲ್ಲದೆ ಸಂಸಾರರಥವು ಸರಿಯಾಗಿ ಪ್ರಯಾಣಮಾಡಲಾರದು. ಮಧ್ಯಮಾರ್ಗದಲ್ಲಿ ಕುಂಠಿಸುವುದು! ಚಕ್ರಗಳೆರಡರಲ್ಲಿ ಯಾವುದೊಂದು ಕೆಟ್ಟಿದ್ದರೂ ರಥವು ಹೇಗೆ ನಡೆಯಲಾರದೋ ಹಾಗೆಯೇ ಪತಿಪತ್ನಿಯರಿಬ್ಬರಲ್ಲಿ ಯಾರೊಬ್ಬರು ಉತ್ತಮವಾಗಿದ್ದ ಮಾತ್ರದಲ್ಲೇ ಸಂಸಾರದಲ್ಲಿ ಸುಖಶಾಂತಿಗಳುಂಟಾಗಲಾರವು. ಪತ್ನಿಯು ಪತಿಯ ಮನೋನುಕೂಲಳಾಗಿಯೂ ಸಂಸಾರದ ಸ್ಥಿತಿಗಳನ್ನು ತಿಳಿದು ನಡೆಯತಕ್ಕವಳಾಗಿಯೂ ಇರಬೇಕು; ಪತಿಯೂ ಪತ್ನಿಯ ಸಹಜಾಪೇಕ್ಷೆಗಳನ್ನು ತೀರಿಸಿಕೊಡುತ್ತಾ, ಅನ್ಯೋನ್ಯತೆಯಿಂದ ಬೆರೆದು ಇರತಕ್ಕದೇ ಸಂಸಾರವು ಸುಖಮಯವಾಗಿ ಸಾಗಲು ಅತ್ಯಂತ ಸಹಾಯಕವಾಗಿರುವುದು. ಐಶ್ವರ್ಯವಲ್ಲ, ವಸ್ತುಸಾಮಗ್ರಿಗಳಲ್ಲ, ಧನಕನಕಾದಿಗಳಲ್ಲ,–ಪತಿಪತ್ನಿಯರ ಮನೋಧರ್ಮಗಳ ಒಂದಾಗಿರುವಿಕೆಯೇ ಸಂಸಾರದಲ್ಲಿ ಶಾಂತಿಸುಖಗಳನ್ನು ಸಾಧಿಸುವ ಮುಖ್ಯ ಸಾಧನವು. ಹೀಗೆ ಗಂಡಹೆಂಡಿರ ಮನೋನುಕೂಲ್ಯವು ಸಾಮಾನ್ಯವಾಗಿ ಲಭಿಸದು. ಇಬ್ಬರೂ ಸುಶಿಕ್ಷಿತರಾಗಿರಬೇಕು ಅವರು ಅಕ್ಷರವೈಯನ್ನು ಕಲಿತಿರಬಹುದು! ಆದರೆ ಸುಸಂಸ್ಕೃತರಾಗಿರಬೇಕು. ಒಬ್ಬರ ಕಷ್ಟಸುಖಗಳನ್ನು ಮತ್ತೊಬ್ಬರು ತಿಳಿದುಕೊಂಡು, ಹೊಂದಿಕೊಂಡು ಹೋಗುವಷ್ಟು ಲೌಕಿಕ ಜ್ಞಾನ, ತಾಳ್ಮೆ ಮುಂತಾದ ಗುಣಗಳು ಇಬ್ಬರಲ್ಲೂ ಇರಬೇಕು. ಒಬ್ಬರ

ಕ್ಷೇಮಚಿಂತನೆಯನ್ನು ಮತ್ತೊಬ್ಬರು ಗಮನಿಸದಿದ್ದರೆ ಆ ಸಂಸಾರದಲ್ಲಿ ಏನು ಸುಖವಿದ್ದೀತು?

ನಮ್ಮ ಪಕ್ಕ ಕಥಾನಾಯಿಕೆಯು ರಾಣಿ ವೀರಮತಿ. ಈಕೆಯ ಜೀವಿತವು ಶ್ರೀಮತಿ ಭಂಡಾರು ಅಚ್ಚಮಾಂಬಾ ಎಂಬ ಆಂಧ್ರಸಾಧ್ವೀಮಣಿಯೊಬ್ಬರಿಂದ ತೆಲುಗು ಭಾಷೆಯಲ್ಲಿ ವಿರಚಿತವಾದ "ಅಬಲಾ ಸಚ್ಚರಿತ್ರ ರತ್ನಮಾಲಾ" ಎಂಬ ಗ್ರಂಥದಲ್ಲಿ ವರ್ಣಿತವಾಗಿದೆ. ಈ ಕಥೆಯು ಅದರ ತರ್ಜುಮೆಯೇ ಅಲ್ಲದಿದ್ದರೂ, ವಿಶೇಷವಾಗಿ ಅದನ್ನನುಸರಿಸಿಯೇ ಬರೆದುದಾಗಿದೆ. ಇದು ಆ ಕ್ಷತ್ರಿಯ ವೀರರಮಣಿಯ ಪ್ರತ್ಯಕ್ಷ ಜೀವಿತಚರಿತ್ರೆಯೇ ಆಗಿದ್ದರೂ, ಇದರಲ್ಲಿ ಸಂಭವಿಸುವ ಘಟನಾವಳಿಗಳು ಇದು ಕಾದಂಬರಿಯೋ ಎಂದು ತೋರುವಂತಹ ಭಾವನೆಯನ್ನುಂಟುಮಾಡಲು ಸಾಕಾಗಿವೆ. ಸ್ತ್ರೀಯೂ ಪುರುಷನಂತೆಯೇ, ಸರ್ವವಿಷಯಗಳಲ್ಲೂ ಸುಶಿಕ್ಷಿತಳಾದರೆ, ಪತಿಯ ಕಷ್ಟತಾಪತ್ರಯಗಳಲ್ಲಿ ಆತನನ್ನು ನೆಳಲಿನಂತೆ ಆಶ್ರಯಿಸಿಕೊಂಡಿದ್ದು ಎಷ್ಟುವಿಧಗಳಲ್ಲಿ ಸಹಾಯಕಳಾಗಬಹುದು! ಕಷ್ಟಕಾಲವು ಪ್ರಾಪ್ತವಾದಾಗ ಪಾತಿವ್ರತ್ಯರಕ್ಷಣೆಗಾಗಿ ಎಂತಹ ಸಾಹಸಕಾರ್ಯಗಳನ್ನು ಮಾಡುವ ಧೈರ್ಯಸಮಯಸ್ಫೂರ್ತಿಗಳನ್ನು ಗಳಿಸಬಹುದು! ಎಂಬುದನ್ನು ಈ ವೀರಮತಿಯ ಚರಿತ್ರೆಯಿಂದ ತಿಳಿಯಬಹುದು. ಭಕ್ತನ ಸಹವಾಸದಿಂದ ಭಕ್ತಿಯೂ ಸಜ್ಜನನ ಸಹವಾಸದಿಂದ ಸದ್ಗುಣವೂ, ಕಳ್ಳನ ಗೆಳೆತನದಿಂದ ಕಳ್ಳತನದ ಗುಣವೂ ಉಂಟಾಗುವಂತೆಯೇ, ಮಹನೀಯರ ಸಹವಾಸದಿಂದ ಮನುಷ್ಯನಲ್ಲಿ ಮಹತ್ವದ ಗುಣನಡತೆಗಳೂ ಉಂಟಾಗದಿರಲಾರವು. ಪ್ರತ್ಯಕ್ಷ ಸಾನ್ನಿಧ್ಯವು ದೊರೆಯದಿದ್ದ ಸಂದರ್ಭದಲ್ಲಿ ಸಹಾಯಕಾಂಗಳಾಗಿರಲೆಂದೇ, ಚರಿತ್ರೆ ಚಿತ್ರಪಟಗಳನ್ನು ಸಂಗ್ರಹಿಸಿಡುವರು. ಪ್ರತ್ಯಕ್ಷಸಾನ್ನಿಧ್ಯದಿಂದಾಗುವಂತಹ ಪ್ರಯೋಜನ-ಪರಿಣಾಮಗಳೇ ಸ್ವಲ್ಪ ಹೆಚ್ಚು ಕಡಮೆ ಪ್ರಮಾಣದಿಂದ, ಚರಿತ್ರ ಚಿತ್ರಪಟಗಳಿಂದಲೂ ಆಗುವುವು. ಹೀಗೆ ಮಹನೀಯರ ಮಹತ್ವಪ್ರದರ್ಶಕ ಚರಿತ್ರೆಗಳಿಂದ ನಮ್ಮ ಬಾಲಕ ಬಾಲಿಕೆಯರಲ್ಲಿ ಉತ್ತಮ ಗುಣನಡತೆಗಳು ಮೊಳೆತು, ಬೆಳೆದು, ಅಭಿವೃದ್ಧಿಯಾಗಿ, ಫಲಪ್ರದಗಳಾಗಲು ಲೇಶಮಾತ್ರವಾದರೂ ಸಹಾಯಕವಾಗಿರಲೆಂಬ ಮಹೋದ್ದೇಶದಿಂದ ಗ್ರಂಥಮಾಲೆಯು ಮಾತೃಭಾಷಾಸೇವಾಕಾರ್ಯದಲ್ಲಿ ಯಥಾಶಕ್ತಿ ಶ್ರಮಿಸುತ್ತಿರುವುದರಿಂದ ದೇಶ-ಭಾಷಾಬಾಂಧವರು ಸ್ವಹಸ್ತಪರಹಸ್ತಗಳಿಂದ ಇದರ ಕಾರ್ಯಕ್ಕೆ ಸಹಕರಿಸಿ ಪ್ರೋತ್ಸಾಹಿಸಬೇಕೆಂದು ಪ್ರಾರ್ಥಿಸುತ್ತೇವೆ.

ಬೆಂಗಳೂರು ಸಿಟಿ
೧—೯—೧೯೩೬

ಅತಿ ಸುಜನ ವಿಧೇಯ,
ಯಂ. ರಾಮರಾವ್.



ಕ್ಷತ್ರಿಯ ವೀರಸ್ತ್ರೀ ರಾಣೀ ವೀರಮತಿ

ಶ್ರೀರಾಮ ಸಹಾಯಂ

# ಕ್ಷತ್ರಿಯ ವೀರಸ್ತ್ರೀ

# ವೀರಮತಿ



## ಅಧ್ಯಾಯ ೧ "ಜನನ–ಬಾಲ್ಯ–ವಿದ್ಯಾಭ್ಯಾಸ"

ಸುಪ್ರಸಿದ್ಧವಾದ ಈ ಭರತಖಂಡವನ್ನು ನಮ್ಮ ಮಾತೃಭೂಮಿಯೆಂದು ಎಡೆಬಿಡದೆ–ಅಡಿಗಡಿಗೆ ಹೇಳಿಕೊಂಡಿರುವುದರಲ್ಲಿ ಸತ್ಯಾಂಶವಿಲ್ಲದಿಲ್ಲ. ಪ್ರಪಂಚದಲ್ಲಿ ಜನ್ಮವೆತ್ತುವ ಯಾವುದೊಂದು ಪ್ರಾಣಿಗಾದರೂ ಮಾತೃವಿಗಿಂತಲೂ ಸಮೀಪದ ಬಂಧುವು ಮತ್ತಾರೂ ಇಲ್ಲವೆಂಬುದು, ನಿರ್ವಿವಾದ ವಿಷಯವು! ಬಾಂಧವರಲ್ಲಿ ತಾಯಿ ಮೊದಲನೆಯವಳು ಎರಡನೆಯವನು ತಂದೆ. ಜನ್ಮಿಸಿದ ತರುವಾಯವೇ, ಅಣ್ಣತಮ್ಮಂದಿರ ಅಕ್ಕತಂಗಿಯರ ಸಂಬಂಧವಾಗುವುದು. ಆದರೆ ತಾಯಿತಂದೆಗಳ ಸಂಬಂಧವು ಜನನಕ್ಕೆ ಪೂರ್ವದಿಂದಲೂ ಇರುವುದೆಂದರೆ ಅತಿಶಯವೇನು! ಅಲ್ಲ ಅಲ್ಲ, ಜನನವೇ ಅವರ ಸಂಬಂಧದಿಂದಾಗಿರುವಾಗ, ತಾಯಿತಂದೆಗಳೊಂದಿಗೆ ಪ್ರಾಣಿಗೆ ಇರುವ ಬಾಂಧವ್ಯವು ಅತಿಶಯ ಮಹತ್ವದ್ದಾಗಿರುವುದಲ್ಲವೆ? ಹೀಗೆ ಜನ್ಮಕೊಟ್ಟು, ಹಾಲೂಡಿ ಪೋಷಿಸಿದ ತಾಯಿಯನ್ನು ಎಷ್ಟು ಬಗೆಯಿಂದ ಪ್ರೀತಿಸಿ, ಸೇವಿಸಿ, ಗೌರವಿಸಿದರೂ ಅದು ಸ್ವಲ್ಪವೇ ಇರುವುದು. ಹಾಗೆಯೇ ಜನ್ಮಭೂಮಿಯಾದರೂ ಸಕಲ ವಿಷಯಗಳಲ್ಲಿಯೂ ಪೂಜ್ಯವಾದುದು, ಗೌರವಾರ್ಹವಾದುದು. ನಮ್ಮ ದೇಹದಲ್ಲಿರುವ ಒಂದೊಂದು ಹನಿ ರಕ್ತದ ವಿಷಯದಲ್ಲೂ ನಾವು ನಮ್ಮ ತಾಯಿತಂದೆಗಳಿಗೆ ಹೇಗೆ ಋಣಿಗಳಾಗಿದ್ದೇವೆಯೋ, ಹಾಗೆಯೇ ದೇಶಮಾತೆಗೂ ಋಣಿಗಳಾಗಿದ್ದೇವೆ. ದೇಹವು ಪಂಚಭೂತಾತ್ಮಕವಾದುದಷ್ಟೆ! ಪೃಥ್ವಿ, ಅಪ್, ತೇಜೋವಾಯುರಾಕಾಶಗಳಲ್ಲಿ ದೇಹದ ಹೆಚ್ಚು ಭಾಗವಾದ ಪೃಥಿವ್ಯಂಶವು ಎ

ಲ್ಲಿಂದ ಬಂದಿತು? ಅದು ಈ ಭಾರತಭೂಮಿಯ ಅಂಶವಲ್ಲವೆ? ಅದರಲ್ಲಿ ಬೆಳೆದ ದವಸಧಾನ್ಯ-ಹಣ್ಣುಹಂಪಲುಗಳನ್ನುಂಡು ಬೆಳೆದುದಲ್ಲವೆ? ನಮ್ಮ ದೇಹದಲ್ಲಿ ಅವಿಚ್ಛಿನ್ನವಾಗಿ ಪ್ರವಹಿಸುವ ರಕ್ತದಲ್ಲಿ, ಭಾರತಭೂಮಿಯಲ್ಲಿ ಹರಿಯುವ ನದಿಗಳ ಜಲದಭಾಗವು ಸೇರಿಲ್ಲವೇನು? ನನ್ನದೆಂಬ ಮಮಕಾರಕ್ಕೆ ವಶನಾಗಿ ಮೆರೆವ ಈ ದೇಹದ ಒಂದು ಅಣುಮಾತ್ರವಸ್ತುವಾದರೂ ಈ ಭಾರತದೇಶ ಮಾತೆಯಿಂದಲ್ಲದೆ ಬಂದ ಒಗೆಯು ಬೇರಾವುದು?

ತನಗೆ ಜನ್ಮವಿತ್ತು, ಚಿಕ್ಕವನನ್ನು ದೊಡ್ಡವನನ್ನಾಗಿ ಮಾಡಿ, ವಿದ್ಯಾಬುದ್ಧಿಗಳನ್ನು ಕಲಿಸಿದ ತಾಯಿತಂದೆಗಳಿಗೆ ವಿಧೇಯನಾಗಿ ಅವರ ಮುಪ್ಪಿನಲ್ಲಿ ತನುಮನಧನಗಳಲ್ಲಿ ಲೋಭವನ್ನು ವಹಿಸದೆ ಸರ್ವವನ್ನೂ ಅವರ ಪ್ರೀತಿಗೋಸ್ಕರ ವಿನಿಯೋಗಿಸಿ-ಹೀಗೆ 'ಸೇವೆ ಮಾಡಿ' ಮಾತಾಪಿತೃ ಋಣವನ್ನು ತೀರಿಸಿಕೊಳ್ಳುವನಾವನೋ ಅವನೇ ಪುತ್ರ-ಮಗನೆನಿಸಿಕೊಳ್ಳಲು ಅರ್ಹನು. ಹಾಗೆಯೇ ಹಿಂದೆ ಹೇಳಿದಂತೆ ನಮ್ಮ ಮಾತೃಭೂಮಿಯಾದ ಈ ಭಾರತದೇಶದ-ಮುಖ್ಯವಾಗಿ ಕನ್ನಡಿಗರಾದ ನಮ್ಮ ಕರ್ನಾಟಕದ-ಸೇವೆಯುಳ್ಳ ದೇಹವನ್ನು ಸವೆಯಿಸಲು ಸಿದ್ಧರಾದಲ್ಲದೆ ದೇಶಮಾತೆಯ ಋಣದಿಂದ ಮುಕ್ತರಾಗುವುದು ಯಾರಿಂದಲೂ ಸಾಧ್ಯವಿಲ್ಲ! ನೀನು ತಾನೆಂದೆನ್ನದೆ-ಅವನು ಇವನೆನ್ನದೆ ಪ್ರತಿಯೊಬ್ಬನೂ ದೇಶಸೇವಾವ್ರತದಲ್ಲಿ ಬದ್ಧಾಧರನಾಗಬೇಕು ಅದಕ್ಕಾಗಿ ಸರ್ವವನ್ನೂ ತ್ಯಜಿಸಲು ಸಿದನಾಗಬೇಕು. ಸಮಯ ಬಂದರೆ ಎದೆಯ ರಕ್ತವನ್ನರ್ಪಿಸಲೂ-ತಲೆಯನ್ನು ತೆರಲೂ ಹಿಂದೆಗೆಯದಿರಬೇಕು. ಹೀಗೆ ಹುಟ್ಟುವುದು, ಇರುವುದು, ಹೋಗುವುದು ಎಲ್ಲಕ್ಕೂ ಮೂಲಕಾರಣವಾಗಿರುವ ಮಾತೃಭೂಮಿಗಾಗಿ ಸೇವೆಮಾಡಬೇಕಾದುದು ದೇಹಧಾರಣೆಗೆ ನಿಶ್ವಾಸೋಚ್ಛ್ವಾಸಗಳನ್ನು ನಡೆಯಿಸುವಂತೆಯೂ, ಬಾಯಾರಿಸಿದರೆ ನೀರುಕುಡಿಯುವಂತೆಯೂ ಅನಿವಾರ್ಯಧರ್ಮವಾಗಿರುತ್ತಿರುವಲ್ಲಿ ಸ್ವಾರ್ಥಕ್ಕೆ ದಾಸರಾಗಿ-ಮೋಹಕ್ಕೆ ಮರುಳರಾಗಿ ಅಂತಹ ಮಾತೃಭೂಮಿಯನ್ನು ಅಲಕ್ಷ್ಯದಿಂದ ನೋಡಿ, ಅಷ್ಟುಮಾತ್ರವಲ್ಲ-ತುಚ್ಛಭಾವದಿಂದ ಕಂಡು ಕಪಟಿಗಳಾದ ಪರಕೀಯರ ಕುಮಂತ್ರಕ್ಕೊಳಪಟ್ಟು ದ್ರೋಹಿಗಳಾಗುತ್ತಿರುವ ಮಕ್ಕಳ ವಿಷಯದಲ್ಲಿ ಆ ಮಹಾಮಾತೆಯ ಶಾಪವಿರಲಾರದೆ! ಅಂಥವರಿಗೆ ದೇವತೆಗಳಾದರೂ ಸಹಾಯಮಾಡಿಯಾರೆ!

ಈ ಸಂದರ್ಭದಲ್ಲಿ ಸೇವಾಧರ್ಮದ ವಿಷಯ ವಿಚಾರವು ಅವಶ್ಯಕವಾಗಿದೆ! ಸೇವೆಯೆಂದರೇನು? ಅದನ್ನು ಮಾಡತಕ್ಕವನಾರು?—ಹೇಗೆ? ಭಗವತ್ಸೇವೆಯೇ ಜನ್ಮದ ಪರಮಧ್ಯೇಯವೆಂದು ಭಾವಿಸುವ ಶ್ರದ್ಧಾವಂತನು, ಹೇಗೆ ತನ್ನ ಇಷ್ಟದೈವದ ವಿಷಯದಲ್ಲಿ ನವವಿಧಭಕ್ತಿಭಾವನೆಯನ್ನು ವಹಿಸಿ ಸೇವಿಸಿ ಪೂಜಿಸಿ ಸ್ತುತಿಸಿ ತನ್ನದೆನ್ನಿಸಿಕೊಳ್ಳುವ ಸಮಸ್ತ ವಸ್ತುವನ್ನೂ ತ್ಯಜಿಸಿ ಅದರ ಪಾದಸನ್ನಿಧಿಯಲ್ಲಿ ಆತ್ಮವನ್ನು ನಿವೇದಿಸುವನೋ, ಹಾಗೆಯೇ ಮಹಾಶ್ರದ್ಧಾವಂತನಾದ ದೇಶಭಕ್ತನಾದರೂ ದೇಶಸೇವೆಗಾಗಿ ತನ್ನದೆಂಬ ಸಮಸ್ತವನ್ನೂ ತ್ಯಜಿಸಿ ಸಹಜಾತೀಯರ, ಸಹಧರ್ಮೀಯರ ಸ್ವದೇಶೀಯರ ಹಿತಸಾಧನೆಗಾಗಿ ಏನೇನುಮಾಡಬೇಕೋ ಆ ಎಲ್ಲವನ್ನೂ ಮಾಡಲು ಸಿದ್ಧನಾಗಿರುವನು! ಅವನ ದೇಶಸೇವಾಕಾರ್ಯದಲ್ಲಿ ಸ್ವೀಯ-ಪರಕೀಯವೆಂಬ ಭೇದವಿರದು ಆತನಿಗೆ ಲಾಭನಷ್ಟಗಳ ಮೇಲೆ ಗಮನವಿರದು. ಆತನು ಇದು ಮಾನ ಇದು ಅಪಮಾನ, ಇದು ಸುಖಕರವಾದುದು ಇದು ಕ್ಲೇಶದಾಯಕವಾಗುದು. ಇದು ತನಗೆ ಕೀರ್ತಿಯನ್ನು ತರವುದು, ಈ ಕೆಲಸ ಮಾಡುವುದರಿಂದ ಜನಗಳಲ್ಲಿ ನಿಂದೆಗೆ ಅಥವಾ ಹೇಳನಕ್ಕೆ ಗುರಿಯಾಗಬೇಕಾಗುವುದು ಎಂಬುದನ್ನೇ ಗಮನಿಸನು. ದೇಶಕ್ಕೆ-ಮಾನವವರ್ಗಕ್ಕೆ-ಪ್ರಾಣಿಮಾತ್ರಕ್ಕೆ ಹಿತಕಾರಿಯೆಂದು ತೋರಿತೆಂದರೆ ಆತನು, ಆ ಕೆಲಸವು ಎಷ್ಟು ಕ್ಲೇಶಕರವಾದುದಾದರೂ ಹಿಂದೆಗೆಯದೆ, ಅದನ್ನು ಕೈಕೊಂಡು ಅದರ ಸಾಧನಗಾಗಿ ಪುರುಷಪ್ರಯತ್ನದಿಂದ ಸಾಧ್ಯವಿದ್ದಷ್ಟೂ ಶ್ರಮಿಸುವನು. ಏಕೆಂದರೆ ಅವನಿಗೆ ಸ್ವಾರ್ಥವೆಂಬುದೇ ಇರುವುದಿಲ್ಲ ತನಗೋಸ್ಕರ ಪ್ರತೀಕವಾಗಿ ಇಂತಹ ಲಾಭವಾಗಬೇಕೆಂಬ ಆಸೆಯೇ ಆತನಿಗಿರದು. ಆತನೂ ಅಂತರ್ಮುಖಿಯಾದ ಮಹಾಯೋಗಿಯಂತೆ ಫಲಾಭಿಲಾಷೆಯನ್ನು ತ್ಯಜಿಸಿ ಕರ್ತವ್ಯಕ್ಕಾಗಿ ಕಾರ್ಯಮಾಡುತ್ತಾ, ಸರ್ವವೂ ಈಶ್ವರಾಧೀನವೆಂದು ಕೇವಲ ಪರತಂತ್ರನಂತಿರುವನು

ಇದು ಕೇವಲ ಕರ್ತವ್ಯನಿಷ್ಠರಾದ ಕರ್ಮವೀರರ ಮಾತಾಯಿತು. ಸಾಮಾನ್ಯರು ಒಂದೇಸಾರಿಗೆ ಹೀಗೆ ಲೌಕಿಕ ಸಂಬಂಧ ಬಾಂಧವ್ಯಗಳು, ಪ್ರಾಪಂಚಿಕ ಆಸ್ತಿಪಾಸ್ತಿಗಳನ್ನು ತ್ಯಜಿಸಿ ಇಂತಹ ಗಹನವಾದ ನಿಷ್ಕಾಮ ಕರ್ಮಮಾರ್ಗದಲ್ಲಿ ತೊಡಗಿ ದೇಶಸೇವಾವ್ರತವನ್ನು ಕೈಕೊಳ್ಳುವುದು ಸಾಧ್ಯವಿಲ್ಲದ ಮಾತು! ನಿಜ. ಅದುದರಿಂದಲೇ ದೇಶಸೇವಾಕಾರ್ಯವು ಸಾಮಾನ್ಯರಿಂದ ಆಗ

ತಕ್ಕುದಲ್ಲವೆಂದು ಹತಾಶರಾಗಿ ಯಾರೂ ಕುಳಿತುಕೊಳ್ಳಲಾಗದು. ದೇಶಸೇವಾ ಕಾರ್ಯದಲ್ಲೇ-ಪರಹಿತಕಾರ್ಯಗಳಲ್ಲೇ ಬಹುದೂರಹೋಗಿ ದೇಹವನ್ನು ತೇಯ್ದಿರುವ ಮಹಾಪುರುಷರು ಸಾಧಿಸಲು ಸಾಧ್ಯವಿರುವ ಕಾರ್ಯಗಳನ್ನು ಮಾಡಲು ನಮ್ಮಿಂದ ಸಾಧ್ಯವಿಲ್ಲವಾದುದರಿಂದ ದೇಶಸೇವಾಕಾರ್ಯವು ನಮಗಾಗಿ ಅಲ್ಲ, ನಾವು ಆ ಕೆಲಸಕ್ಕಾಗಿ ಹುಟ್ಟಲಿಲ್ಲ, ಅಂತಹ ಪುಣ್ಯವನ್ನು ಪಡೆಯಲಿಲ್ಲ ಎಂದು ಯಾರೂ ಹತಾಶರಾಗಕೂಡದು. ಮನುಷ್ಯನು ನಿಷ್ಕಾಮ ಕರ್ಮವನ್ನು ಮಾಡಿ ಬಹುಜನ್ಮಗಳ ಕೊನೆಯಲ್ಲಿ ಜ್ಞಾನವಂತನಾಗಿ ಸರ್ವವೂ ವಾಸುದೇವನೇ ಎಂದು ತಿಳಿಯುತ್ತಾನೆಂದೂ, ಅಂತಹ ಮಹಾತ್ಮನು ಕಡು ದುರ್ಲಭನೆಂದೂ ಶ್ರೀಕೃಷ್ಣಪರಮಾತ್ಮನು ನುಡಿದಿರುವನಲ್ಲವೆ? ಹಾಗೆಯೇ ಸರ್ವವೂ ದೇಶವೇ-ತನ್ನ ಸರ್ವಸ್ವವೂ ದೇಶಕ್ಕಾಗಿಯೇ ಎಂದು ಭಾವಿಸಿ ಸೇವಾಶೀಲರಾಗುವ ಕರ್ಮಯೋಗಿಗಳಾದರೂ ದುರ್ಲಭರೇ! ಮಿಕ್ಕವರು ಕ್ರಮವಾಗಿ ಅವರ ಉದಾಹರಣೆಯನ್ನು ನೋಡಿಕೊಂಡು ಅವರು ಹೋದ ಮಾರ್ಗದಲ್ಲೇ ನಡೆದು ಸೇವಾಧರ್ಮವನ್ನು ಕಲಿಯಬೇಕಾಗಿದೆ.

ಭಗವತ್ಸೇವಾನಿರತರಾದ ಪೂರ್ವಿಕ ಮಹನೀಯರು, ಲೌಕಿಕರ ಈ ಬಗೆಯ ತೊಂದುಕೊರತೆಗಳನ್ನು ಅರಿಯದಿರಲಿಲ್ಲ ಶ್ರೀಹರಿಯ ಕಲ್ಯಾಣಗುಣಕಥನ ಸದ್ಧರ್ಮಶ್ರವಣಾದಿಗಳು ನಡೆದಾಗ ತನ ಹೇಯ ಜೀವಿತಕ್ಕಾಗಿ ಬೇಸತ್ತು ಲೌಕಿಕವಾದ ಸಮಸ್ತವನ್ನೂ ತ್ಯಜಿಸಿ ಪರಗತಿಯನ್ನು ಸಂಪಾದಿಸಿಕೊಳ್ಳಬೇಕೆಂದು ಮನಸ್ಸು ಹಾತೊರೆದು ಹಂಬಲಿಸುತ್ತಿರುವಲ್ಲಿ-ಇತ್ತ ಮನೆಯಲ್ಲಿನ ಹೆಂಡಿರುಮಕ್ಕಳಮೇಲಿನ ಆಶಾಮೋಹಗಳು ಹಿಡಿಸಲು ಕರ್ತವ್ಯವು ತೋರದೆ ಹತಾಶನಾಗುತ್ತಿರುವ ಪ್ರಾಪಂಚಿಕನ ಸ್ಥಿತಿಯು ಮಹಾಮಹಿಮರಾದ ಪೂರ್ವಿಕರಿಗೆ ಗೋಚರವಿರಲಿಲ್ಲವೆಂದಲ್ಲ ಇದನ್ನರಿತೇ ಅವರು ಸುಲಭಮಾರ್ಗದಿಂದಲೇ ಭಗವಂತನನ್ನು ಮೆಚ್ಚಿಸುವ ಭಗವತ್ಸೇವಾಮಾರ್ಗಗಳಾವುವೆಂಬುದನ್ನು ಹೇಳಿದರು. ನೀನು ಮಾಡುವ ಸಮಸ್ತಕಾರ್ಯಗಳೂ ಹರಿಸೇವೆಯೆಂದು ತಿಳಿದು ಮಾಡೆಂದರು. ಕಿವಿಯಿಂದ ಕೇಳುವುದೆಲ್ಲವೂ ಹರಿಕಥೆಯೆಂದು ತಿಳಿಯೆಂದರು. ನೋಡುವುದೆಲ್ಲವೂ ಹರಿಯ ಪ್ರತಿರೂಪಗಳೆಂದು ಗೌರವಿಸೆಂದರು ನಡೆವುದೆಲ್ಲವೂ ಶ್ರೀಹರಿಯ ದಿವ್ಯಕ್ಷೇತ್ರಯಾತ್ರೆಗಳೆಂದು ಭಾವಿಸೆಂದರು. ಹೀಗೆ ಸುಲಭ ಪೂಜಾವಿಧಾನದಿಂದ, ಕಪಿಯಂತೆ ಚಪಲತೆಯಿಂದ ಅಲ್ಲಿ

ಯಲ್ಲಿ ಚಲಿಸುತ್ತಿರುವ ಚಿತ್ತವೃತ್ತಿಯನ್ನು ಹಿಡಿತಂದು ಅಡಿಗಡಿಗೆ ಹರಿವಾದ ದಲ್ಲಿ ತೊಡಗಿಸಿ ಹೀಗೆ ಸಂಸಾರನಿರ್ವಹಣಕ್ಕಾಗಿ ಮಾಡಿಕೊಳ್ಳುವ ಇಂತಹ ಕಾರ್ಯಗಳನ್ನೇ ಭಗವತ್ಸೇವೆಯೆಂದು ಭಾವಿಸಿಕೊಳ್ಳುವುದರಿಂದ ನಿಷ್ಕಾಮ ಕರ್ಮದ ಪ್ರಥಮಪಾತವು ಸಂಸಾರದ ಮೂಲಕವಾಗಿಯೇ ನಡೆದ ಹಾಗಾಯಿತಲ್ಲವೆ! ಹಾಗೆಯೇ ದೇಶಸೇವೆಯ ವಿಷಯವಾದರೂ! ಆದರೆ ಒಂದು ಸಂಗತಿ! "ಇದು ನನಗೋಸ್ಕರವಾಗಿ" ಎಂಬ ಕ್ಷುದ್ರಸ್ವಾರ್ಥತೆಯೊಂದು ಮಾತ್ರ ಕಡಿಮೆಯಾಗಲಿ-ನಶಿಸಿಹೋಗಲಿ! ಅಷ್ಟೆ! ಮತ್ತು ಮಾಡುವ ಕಾರ್ಯವೆಲ್ಲವೂ ದೇಶಸೇವೆಯೇ ಎಂಬ ಭಾವನೆಯುಂಟಾಗಲಿ! ಒಬ್ಬನು ಬೇರೊಬ್ಬನಲ್ಲಿ, ಒಬ್ಬ ಸಾಹುಕಾರನಲ್ಲಿ ಅಥವ ಒಂದು ರಾಜಾಶ್ರಯದಲ್ಲಿ-ಸರಕಾರದಲ್ಲಿ ಸೇವಕನಾಗಿರಬಹುದು! ಆ ಯಜಮಾನನ ಇಷ್ಟವನ್ನನುಸರಿಸಿ ಆತನು ಬೇರೆ ಬೇರೆ ಕಾರ್ಯಮಾಡಬೇಕಾಗಬಹುದು. ಆದರೇನು! ಯಾವ ಕಾರ್ಯಮಾಡುತ್ತಿದ್ದರೂ ಭಾವನೆಯು ಮಾತ್ರ ನಾನು ದೇಶಸೇವೆಯನ್ನೇ ಮಾಡುತ್ತಿದ್ದೇನೆ ಎಂದಿರಲಿ! ಇಷ್ಟಾಗಿ, ದೇಶವೆಂದರೆ ಏನು-ದೇಶೀಯರೆಂದರೆ ಯಾರು! ಬೇರೆ ಯಾರೂ ಅಲ್ಲ. ಇಲ್ಲಿ ತತ್ವವಿಷ್ಟೆ! ನಿಷ್ಕಾಮದೃಷ್ಟಿಯಿಂದ ಯಾರ ಸೇವೆ ಮಾಡುವುದರಿಂದ ಬಂಧಕವು ನಾಶವಾಗಿ ಮುಕ್ತಿಭಾಗ್ಯವು ಲಭಿಸುವುದೋ, ಅವರ ಸೇವೆಯನ್ನೇ ಕಾಮ್ಯದೃಷ್ಟಿಯಿಂದ ಮಾಡಿದರೆ ಬಂಧಕಕ್ಕೆ ತಗುಲಿಕೊಳ್ಳಬೇಕಾಗುವುದು. ಇಲ್ಲಿ ವ್ಯತ್ಯಾಸವು ಹೊರಗಿನ ಪದಾರ್ಥಗಳಲ್ಲಿ ಆಗತಕ್ಕುದಲ್ಲ. ಒಳಗಿನ ತನ್ನ ಮನೋಭಾವನೆಯು ವ್ಯತ್ಯಸ್ತವಾಗಬೇಕು. ಸರಕಾರದ ಕೆಲಸದಲ್ಲಾದರೂ, ಅಲ್ಲಿಯೂ ತನ್ನ ದೇಶೀಯರಿಗೆ-ದೇಶಕ್ಕೆ ಸಂಬಂಧಿಸಿದ ಕೆಲಸಗಳನ್ನೇ ಅಲ್ಲವೆ ಬೇರೇನು ಮಾಡಲಾದೀತು? ಅದನ್ನು ಸ್ವಾರ್ಥಸಾಧನೋದ್ದೇಶದಿಂದಲೂ ದಾಸ್ಯಮನೋಭಾವದಿಂದಲೂ ಮಾಡಿ ಸೇವಾಧರ್ಮಕ್ಕೆ ದೂಷ್ಯವನ್ನುಂಟುಮಾಡದೆ, ಅದನ್ನೂ ತನ್ನ ದೇಶಕ್ಕೋಸ್ಕರವಾಗಿಯೇ ತನ್ನ ದೇಶಬಾಂಧವರಿಗೋಸ್ಕರವಾಗಿಯೇ ಮಾಡಿದುದೆಂಬ ಭಾವನೆಯು ಉಂಟಾಗಲಿ. ನಿಸ್ಪೃಹತೆ ನಿರಲಸಿಕೆಗಳು ನಿನ್ನ ಕಾರ್ಯಗಳನ್ನು ಕಳೆಗೊಳಿಸಲಿ. ಹೊಟ್ಟೆಗೋಸ್ಕರ ದುಡಿಯುತ್ತಾನೆಂಬ ದಾಸ್ಯಭಾವನೆಯು ಹೋಗಲಿ, ಜೀವಿತವನ್ನುಂಟುಮಾಡಿದವನೂ ಭಗವಂತನೇ! ಆದುದರಿಂದ ಜೀವಿಸಿರಬೇಕಾದುದೂ ಕರ್ತವ್ಯವೇ! ಸೇವಾಧರ್ಮದಲ್ಲಿ ಉದರಪೋಷಣಾವಿಚಾರವು ಗೌಣಪಕ್ಷವು.

ನಿನ್ನ ಪ್ರತಿ ದಿನದ ಕಾರ್ಯಗಳು ಕುಟುಂಬರಕ್ಷಣೆಗಾಗಿಯೇ ಆಗುತ್ತಿದ್ದಿಗೂ, ಅದನ್ನೂ ಪರಹಿತದೃಷ್ಟಿಯಿಂದ ಮಾಡುವಂತಹ ಭಾವನಾಭ್ಯಾಸವು ಪ್ರಾಪ್ತವಾಗಲಿ. ಹೆಚ್ಚೇನು! ಎದ್ದರೆ ಕುಳಿತರೆ-ನಿಂತರೆ ನಡೆದರೆ, ದೇಶವಿಚಾರದ ಭಾವನೆಯು ಮನಸ್ಸಿನಲ್ಲಿ ತುಂಬಿರಲಿ! ತರುವಲ್ಲಿ ತಿನ್ನುವಲ್ಲಿ-ನುಡಿವಲ್ಲಿ ನೋಡುವಲ್ಲಿ, ದೇಶೀಯರ ಹಿತಭಾವನೆಯು ಮನಸ್ಸಿನಲ್ಲಿ ಬರುತ್ತಿರಲಿ! ಮಾಡುವ ಕೊಡುವ-ತರುವ ತಿರುವ ಸರಸ್ವ ವಿಷಯಗಳೂ ಸ್ವದೇಶಕ್ಕಾಗಿ. ಸ್ವದೇಶೀಯರಿಗಾಗಿ ಎಂಬ ಭಾವನೆಯು ಮನಸ್ಸಿನಲ್ಲಿ ಮೂಡಲಿ! ಅಷ್ಟೆ ಅಷ್ಟಾದರೆ ಸಾಕು. ಆಮೇಲೆ ಮಾಡುವ ಪ್ರತಿಯೊಂದು ಕಾರ್ಯದಲ್ಲೂ ಸ್ವಾರ್ಥದೃಷ್ಟಿಯು ಬದಲಾಗಿ ಸೇವಾದೃಷ್ಟಿಯು ಉದಯವಾಗುವುದು. ಅದು ಕಾಲಕ್ರಮದಲ್ಲಿ ಶುದ್ಧವಾಗಿ ಕರ್ತವ್ಯವನ್ನು ಕರ್ಮವೀರನನ್ನಾಗಿಸುವುದು. ಅಂತಹ ಕರ್ಮವೀರರು ಹಚ್ಚಿದಂತೆಲ್ಲಾ ದಾಸ್ಯದಲ್ಲಿ ಮುಳುಗಿರುವ ದೇಶವು ಪರಾಧೀನ ಶೃಂಖಲೆಯನ್ನು ಭೇದಿಸಿ ಸ್ವಾತಂತ್ರ್ಯವನ್ನು ಸಾಧಿಸಲು ಶಕ್ತನಾಗುವುದು. ಹೀಗೆ ಮುಕ್ತಿ-ಸ್ವಾತಂತ್ರ್ಯ ಸಾಧನೆಗೆ ದಾಸ್ಯಮನೋಭಾವವು ತೊಲಗಬೇಕಾದುದೇ ಮೊದಲನೆಯ ಕೆಲಸವು. ಪ್ರಸ್ತುತ ಚರಿತ್ರೆಯು, ರಾಜಸೇವೆಯಲ್ಲಿದ್ದರೂ ಮನುಷ್ಯನು ಆ ಸೇವೆಯನ್ನು ಸ್ವಾರ್ಥತೆಯ ದೃಷ್ಟಿಯಿಂದ ದೂಷ್ಯವೆನಿಸದೆ ಪವಿತ್ರವೆನಿಸಿ ಕರ್ಮವೀರನೆನ್ನಿಸಿಕೊಳ್ಳುವುದು ಹೇಗೆಂಬುದನ್ನು ತಿಳಿಸುವ ವಿಷಯದಲ್ಲಿ ಉತ್ತಮ ನಿದರ್ಶಕವಾಗಿರುವುದು. ವಾಚಕಮಹಾಶಯರು ಈ ಕಥೆಯಲ್ಲಿ ಬರುವ ಪಾತ್ರಗಳನ್ನು ಅವರವರ ಸಹಜಸ್ಥಿತಿಯಲ್ಲಿ ನೋಡಿ ಗುಣಗ್ರಹಣಮಾಡುವುದು ಲಾಭದಾಯಕವಾಗಿರುವುದು!

ಪ್ರಾಚೀನಭಾರತದಲ್ಲಿ ಸುಪ್ರಸಿದ್ಧಗಳಾಗಿ ವಿರಾಜಿಸಿದ ಛಪ್ಪನ್ ಎಂದರೆ ಐವತ್ತಾರು ದೇಶಗಳಲ್ಲಿ ಮಾಳವವೂ ಒಂದು. ಇದರ ರಾಜಧಾನಿ ಧಾರಾನಗರ. ಆ ದೇಶವನ್ನು ಕ್ಷತ್ರಿಯ ಕುಲಾವತಂಸನೆನ್ನಿಸಿ, ತನ್ನ ಮಹತ್ವಪೂರ್ಣಕಾರ್ಯಗಳಿಂದ ಆ ಬಾಲವೃದ್ಧ ಭಾರತೀಯನಿಗೂ ಚಿರಪರಿಚಿತನಾದ ವಿಕ್ರಮಾರ್ಕಭೂಪಾಲನು ಭಟ್ಟಿ ಮುಂತಾದ ಮಂತ್ರಿಶ್ರೇಷ್ಠರೊಡಗೂಡಿ ಬಹುಕಾಲ ರಾಜ್ಯವಾಳಿ ಕೀರ್ತಿಶೇಷನಾದನು. ಈತನ ವಂಶದಲ್ಲಿ ಉದಯಾದಿತ್ಯನೆಂಬ ರಾಜೋತ್ತಮನೊಬ್ಬನು ಜನಿಸಿ ತನ್ನ ಬಾಹುಬಲದಿಂದ ಅನೇಕ ರಾಜ್ಯಗಳನ್ನು ಜಯಿಸಿ ನೂರಾರು ಮಂದಿ ಸಾಮಂತರಾಜರಿಂದ ಕಿತ್ತಿಯೆ

ಮುಗಿಸಿಕೊಳ್ಳುತ್ತಾ, ಸಾರ್ವಭೌಮನೆಂಬ ಕೀರ್ತಿಪ್ರತಿಷ್ಠೆಗಳಿಗೆ ಪಾತ್ರನಾಗಿ ಮಹಾಪ್ರಸಿದ್ಧನಾಗಿದ್ದನು. ಈತನ ಕಾಲದಲ್ಲಿ ಮಾಳವದೇಶವು, ಕಾಲಕಾಲಕ್ಕೆ ಸುರಿವ ಮಳೆಗಳಿಂದ ಉತ್ತಮ ಬೆಳೆಗಳನ್ನು ಬೆಳೆದು, ತನ್ನ ಉದರವಾಸಿಗಳಾದ ಪಶುಪಕ್ಷಿ ಮೃಗಗಳನ್ನೂ-ಮಾನವವರ್ಗಗಳನ್ನೂ ಕಾಲಕಾಲಕ್ಕೆ ಆಹಾರಪಾನೀಯಗಳನ್ನೊದಗಿಸಿ ಪೋಷಿಸುತ್ತಿರಲು, ಸಕಲರೂ ಸುಖಸೌಭಾಗ್ಯಗಳಲ್ಲಿ ಓಲಾಡುತ್ತಾ ದುಃಖಮಯವೆನ್ನಿಸಿಕೊಂಡ ಸಂಸಾರದ ಕೋಟಲೆಗಳಿಂದ ಮುಕ್ತರಾಗಿ-ಸ್ವರ್ಗವಾಸವೋ ಎಂಬಂತಹ ತೃಪ್ತಿಶಾಂತತೆಗಳಿಂದ ಕೂಡಿ ನಿತ್ಯಸಂತೋಷಿಗಳಾಗಿ ಕಾಲಯಾಪನೆ ಮಾಡುತ್ತಿದ್ದರು.

ಆತನಿಗೆ ಇಬ್ಬರು ಪತ್ನಿಯರು. ಒಬ್ಬಾಕೆಯನ್ನು ರಾಜನು ವಾಘೇಲಿ ವಂಶದಿಂದಲೂ ಮತ್ತೊಬ್ಬಾಕೆಯನ್ನು ಪ್ರಸಿದ್ಧವಾದ ಸೋಳಂಕ ವಂಶದಿಂದಲೂ ತಂದುಕೊಂಡು ವಿವಾಹವಾಗಿದ್ದನು. ಇಬ್ಬರಲ್ಲೂ ರಾಜನಿಗೆ ಒಬ್ಬೊಬ್ಬ ಮಗನು ಜನಿಸಿದರು. ವಾಘೇಲೀರಾಣಿಯ ಮಗನಿಗೆ ರಣಧವಲನೆಂದು ಹೆಸರು. ಸೋಳಂಕರಾಣಿಯ ಮಗನಿಗೆ ಉದಯಾದಿತ್ಯನು ಜಗದೇವನೆಂದು ನಾಮಕರಣ ಮಾಡಿದ್ದನು. ರಾಣಿಯರಿಬ್ಬರೂ ನಾನುಹೆಚ್ಚು ತಾನುಹೆಚ್ಚೆಂದು ಸ್ಪರ್ಧೆಯಿಂದಲೋ ಎಂಬಂತೆ ಬಾಲತೊಡಿಗೆಯ ವಸ್ತ್ರವಡವೆಗಳನ್ನಿಟ್ಟು ತಮ್ಮ ಮಕ್ಕಳನ್ನು ಸಿಂಗರಿಸಿ ಬಾಲಲೀಲೆಗಳನ್ನು ಕಣ್ದಣಿಯೆ ನೋಡಿ-ಅವರೊಂದಿಗಾಡಿ, ನಲಿದು ಆನಂದಶರಧಿಗಳಲ್ಲಿ ಓಲಾಡುತ್ತಾ ಇರುತ್ತಿರಲು, ರಾಜಕುಮಾರರಾದ ರಣಧವಲ ಜಗದೇವರು ಶುಕ್ಲಪಕ್ಷದ ಬಾಲೇಂದುವಿನಂತೆ ದಿನದಿನಕ್ಕೆ-ಕ್ಷಣಕ್ಷಣಕ್ಕೆ ಬೆಳೆದು ಅಭಿವೃದ್ಧಿಗೊಳ್ಳುತ್ತಿದ್ದರು.

ಮಾಳವದೇಶದ ಉದಯಾದಿತ್ಯನಿಗೆ ಸಮಕಾಲೀನನಾಗಿ ಗುಜರಾತುದೇಶದ ಚಾವಡಾವಂಶಸ್ಥನಾದ ಬಿರಜನೆಂಬ ರಾಜನು ಟುಕಟೋಡಾ ಎಂಬೊಂದು ಗ್ರಾಮವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಸುತ್ತುಮುತ್ತಿನ ಪ್ರಾಂತಗಳನ್ನು ಪಾಲಿಸುತ್ತಿದ್ದನು ಈತನ ತಂದೆಯು ಆಗ ಜೀವಂತನಾಗಿದ್ದರೂ ಆತನು ಅತಿ ವೃದ್ಧನೂ ದುರ್ಬಲನೂ ಆಗಿದ್ದುದರಿಂದ ಪ್ರೌಢನಾದ ಬಿರಜನೇ ರಾಜ್ಯಭಾರವನ್ನು ವಹಿಸಿದ್ದನು. ವೃದ್ಧರಾಜನಿಗೆ ಬಿರಜನು ಮಾತ್ರವಲ್ಲದೆ ಬೇರೇ ಮಕ್ಕಳೂ ಇದ್ದರು. ಅವರಲ್ಲೆಲ್ಲಾ ಕೊನೆಯ ಪುತ್ರಿಯೇ ವೀರಮತಿ. ವೀರಮತಿಯು ಕೊನೆಯ ಮಗಳಾದುದರಿಂದ ಸಾ

ತಾಪಿತೃಗಳ ಅಧಿಕಾಧಿಕ ಪ್ರೇಮಕ್ಕೆ ಪಾತ್ರಳಾಗಿದ್ದಳು. ಚಿಕ್ಕತನದಿಂದಲೂ ಅವಳೂ ತನ್ನ ಅಣ್ಣಂದಿರಾದ ರಾಜಕುಮಾರರೊಂದಿಗೇ-ಗಂಡುಮಕ್ಕಳ ಮಧ್ಯದಲ್ಲಿ ತಾನೂ ಒಂದು ಗಂಡುಮಗುವೋ ಎಂಬಂತೆಯೇ ಬೆಳೆದಳು. ಅವರು ಆಡುವ ಆಟಪಾಟಗಳನ್ನೇ ಅವಳೂ ಆಡುತ್ತಿದ್ದಳು. ಅವರು ವಿದ್ಯೆ ಕಲಿಯಲಾರಂಭಿಸಿದಾಗ, ಅವರೊಂದಿಗೆ ಅವಳೂ ವಿದ್ಯೆಯನ್ನು ಕಲಿತಳು. ಆದರೆ ವೀರಮತಿಯು ಅಕ್ಷರವಿದ್ಯೆಯಲ್ಲಿ-ಕಾವ್ಯವ್ಯಾಕರಣಾದಿಗಳು ಪ್ರೌಢಪಾಟಗಳಲ್ಲಿ ಶಿಕ್ಷಿತಳಾದಳೆಂಬುದಕ್ಕೆ ಆಕೆಯ ಜೀವಿತಚರಿತ್ರೆಯಲ್ಲಿ ಉಲ್ಲೇಖವಿಲ್ಲ. ಆದರೆ ಉತ್ತಮ ಗೃಹಿಣಿಗೆ ಅತ್ಯಾವಶ್ಯಕವಾದಷ್ಟು ಓದುಬರಹ ಲೆಕ್ಕಗಳು ಆಕೆಗೂ ತಿಳಿಯದಿರಲಿಲ್ಲ. ಆದರೆ ಆಕೆಯು ಪ್ರೌಢಪಾಠಗಳನ್ನು ಕಲಿತುದು ವೀರವಿದ್ಯೆಗಳಲ್ಲಿ! ಅಶ್ವಾರೋಹಣ, ಗಜಾರೋಹಣ, ರಥಾಸಾರಥ್ಯ ಚಾತುರ್ಯ, ಗದೆ ಚಕ್ರ ಮುದ್ಗರ ಖಡ್ಗ ಬಾಣಗಳ ಪ್ರಯೋಗಕೌಶಲ್ಯಗಳು ಅಂಗಸಾಧನೆ, ಈಜುವಿಕೆ, ಹಾರುವಿಕೆ, ಓಡುವಿಕೆ ಮುಂತಾದ ಸಕಲ ಯುದ್ಧ ವಿದ್ಯೆಗಳಲ್ಲೂ ಯಾವ ರಾಜಪುತ್ರ ವೀರನಿಗೂ ಕಡಮೆಯೆನಿಸಿಕೊಳ್ಳದಂತಹ ಪ್ರಜ್ಞಾಸಾಮರ್ಥ್ಯವನ್ನು ಗಳಿಸಿದಳು. ಹೀಗೆ ವೀರಮತಿಯು ಬಾಲ್ಯವನ್ನು ವಿದ್ಯಾಭ್ಯಾಸದಲ್ಲಿ ಕಳೆದು, ತಾನು ಹೆಂಗುಸೆಂಬ ಭಾವನೆಯೇ ಮನಸ್ಸಿಗೆ ತೋರಲಿಲ್ಲವೋ ಎಂಬಂತೆ ಬೆಳೆದು ರಾಜಮಂದಿರವನ್ನು ಬೆಳಗುತ್ತಿದ್ದಳು.



**ಅಧ್ಯಾಯ ೨** **"ವಿವಾಹ ಮಹೋತ್ಸವ"**

ರಾಜಪುತ್ರಿ ವೀರಮತಿಯು ದಿನದಿನಕ್ಕೆ ವೀರರಾಜಪುತ್ರೋಚಿತ ವೀರವಿದ್ಯೆಗಳಲ್ಲಿ ಕ್ರಮಶಿಕ್ಷಣವನ್ನು ಹೊಂದುತ್ತಾ, ಆದರೂ ಸ್ತ್ರೀಜನೋಚಿತವಾದ ಲಜ್ಜಾವಿನಯ ಗಾಂಭೀರ್ಯಾದಿಗಳಲ್ಲಿಯೂ ಯಾವ ಬಗೆಯ ಬಿಡುನುಡಿಗೂ ಪಾತ್ರಳಾಗದಂತೆ ಅಭಿವೃದ್ಧಿಯಾದಳು. ಆಕೆಗೆ ಹದಿನಾರು ವರ್ಷಗಳ ಪ್ರಾಯವು ಪ್ರಾಪ್ತವಾಗುತ್ತಿರಲು, ವೃದ್ಧಳಾದ ರಾಜಮಾತೆಯು ಪ್ರಬುದ್ಧಳಾದ ಸ್ತ್ರೀರತ್ನವನ್ನು ವಿವಾಹವಿಲ್ಲದೆ ಮನೆಯಲ್ಲಿಟ್ಟುಕೊಂಡಿರತಕ್ಕುದು

ಅಪಶಯಸ್ಸಿಗೆ ಕಾರಣವೆಂದು ಮಗನಾದ ಬಿರಜನೊಂದಿಗೆ ನುಡಿಯಲು ಆತನು ತನ್ನ ತಂಗಿಗೆ ಉತ್ತಮ ವರನನ್ನು ಹುಡುಕಲೋಸುಗ ಅನೇಕಮಂದಿ ಚತುರರಾದ ವಿಪ್ರಶ್ರೇಷ್ಠರನ್ನು ದೇಶದೇಶಗಳಿಗೂ ಕಳುಹಿಸಿದನು. ಅವರು ಸಕಲ ದೇಶಗಳಲ್ಲೂ ಸಂಚರಿಸಿ, ಅಲ್ಲಲ್ಲಿ ವಿದ್ಯಾವಿನಯಸಂಪನ್ನರೂ ಯೌವನಸ್ಥರೂ ಆದ ರಾಜಪುತ್ರರ ಭಾವಚಿತ್ರಗಳನ್ನು ತಂದು ಬಿರಜನಲ್ಲಿ ಸಮರ್ಪಿಸಿದರು. ರಾಜನು, ಅವುಗಳನ್ನು ತನ್ನ ತಂಗಿಯು ಸಮೀಪಕ್ಕೆ ಕಳುಹಿಸಲಾಗಿ, ವೀರಮತಿಯು ಅವೆಲ್ಲವನ್ನೂ ಪರೀಕ್ಷಿಸಿ–ಅಷ್ಟುಮಾತ್ರವಲ್ಲದೆ, ಚಿತ್ರಸ್ಥಿತರಾದ ಆಯಾರಾಜಪುತ್ರರ ಶೌರ್ಯ ಧೈರ್ಯ ಪರಾಕ್ರಮಾದಿಗಳು, ವಿದ್ಯಾವಿನಯ ಗಾಂಭೀರ್ಯಾದಿಗಳು ಮುಂತಾದುವುಗಳನ್ನು ಕುರಿತ ವೃತ್ತಾಂತಗಳನ್ನೆಲ್ಲಾ ವಿಪ್ರವರ್ಯರಿಂದ ತಿಳಿದು, ಅಷ್ಟು ಮಂದಿಯಲ್ಲಿ, ಧಾರಾನಗರದ ರಾಜನಾದ ಉದಯಾದಿತ್ಯಮಹಾರಾಜನ ಮಗ ಜಗದೇವನ ರೂಪು ಲಕ್ಷಣ ತೇಜಸ್ವಿತೆಗಳು ಸತ್ಯಶಾಂತತೆ ವಿನಯಾದಿ ಸದ್ಗುಣನಡತೆಗಳೊಂದಿಗೆ ಬೆರೆದು ಸುವರ್ಣಪುಷ್ಪಕ್ಕೆ ಸುವಾಸನೆಯೂ ಸೇರಿದಂತೆ ಇರುವುದೆಂಬುದನ್ನು ಕೇಳಿ ಪರಮಸಂತೋಷದಿಂದ ಆತನನ್ನೇ ತನ್ನ ಪ್ರಾಣವಲ್ಲಭನನ್ನಾಗಿ ವರಿಸಿದಳು. ಆ ಸಂಗತಿಯನ್ನು ವಿಪ್ರರು ವೀರಮತಿಯ ಅಣ್ಣನಾದ ಬಿರಜಮಹಾರಾಜನಿಗೂ ವೃದ್ಧಮಾತಾಪಿತೃಗಳಿಗೂ ತಿಳಿಸಿದರು. ಅವರು ಆ ವರಸಾಮ್ಯಕ್ಕೆ ಮೆಚ್ಚಿಕೊಂಡು, ವೀರಮತಿಯು ಚಾತುರ್ಯಕ್ಕಾಗಿ ಪರಮಾನಂದಪಟ್ಟರು. ತರುವಾಯ ಬಿರಜನು ತನ್ನ ತಂಗಿಯನ್ನು ಜಗದೇವನಿಗೆ ಕೊಟ್ಟು ವಿವಾಹ ಮಾಡಲು ಇಷ್ಟಪಟ್ಟಿದ್ದೇನೆಂದು ಒಂದು ಶುಭಲೇಖವನ್ನು ಬರೆಸಿ ಅದನ್ನು ಉದಯಾದಿತ್ಯಮಹಾರಾಜನಲ್ಲಿಗೆ ರಾಜೋಚಿತ ಉಡುಗೆರೆ ವಸ್ತ್ರಭೂಷಣಗಳೊಂದಿಗೆ ಕಳುಹಿಸಿದನು.

ಆದರೆ ಇತ್ತ ಕೆಲವರ್ಷಗಳಿಂದ ಉದಯಾದಿತ್ಯನ ರಾಣಿಯರಿಬ್ಬರೂ ಸವತಿಮತ್ಸರದಿಂದ ಒಬ್ಬರನ್ನೊಬ್ಬರು ದ್ವೇಷಿಸುತ್ತಾ, ರಾಜನ ಮನಸ್ಸನ್ನು ತಮ್ಮ ತಮ್ಮ ಕಡೆಗೆಳೆದುಕೊಂಡು ತನ್ಮೂಲಕ ತನ್ನ ಸವತಿಯನ್ನು ಬಹುವಿಧ ಕಷ್ಟ ಸಂಕಟಗಳಿಗೆ ಒಳಪಡಿಸಬೇಕೆಂಬ ಯೋಚನೆಯಲ್ಲಿ ಸರ್ವದಾ ಮಗ್ನರಾಗಿರುತ್ತಿದ್ದರು. ರಾಜನು ಆ ಉಭಯರ ದ್ವೇಷಮಾತ್ಸರ್ಯಾಗ್ನಿಗಳ ಮಧ್ಯದಲ್ಲಿ ಸಿಕ್ಕು ತಪ್ಪಿಸಿಕೊಳ್ಳುವ ಮಾರ್ಗಕಾಣದೆ ಮಹಾಪಂಕಗತವಾದ

ಮದಗಜದಂತೆ ತೊಳಲುತ್ತಿದ್ದನು ಪುರುಷನು ತಾನು ಸ್ವತಂತ್ರನೆಂಬ ಹೆಮ್ಮೆಗೊಳಗಾಗಿ ಅಬಲೆಯರಾದ ಸ್ತ್ರೀಜಾತಿಯ ವಿಷಯದಲ್ಲಿ ಆಚರಿಸುವ ಅಪರಾಧಗಳಲ್ಲಿ 'ಬಹು ಪತ್ನೀತ್ವ' ವೆಂಬುದೊಂದು ಬಹುದಿನಗಳಿಂದಲೂ ನಮ್ಮ ದೇಶದಲ್ಲಿ ಆಚರಣೆಯಲ್ಲಿ ಬಂದು ಸಮಾಜದ ಸತ್ವವನ್ನೇ ಹೀರುತ್ತಿದೆ. ಲಗ್ನ ಕಾಲದಲ್ಲಿ ಅಗ್ನಿಸಾಕ್ಷಿಕವಾಗಿ ಒಬ್ಬ ಸ್ತ್ರೀಯ (ಕನ್ಯೆಯ) ಹಸ್ತಗ್ರಹಣಮಾಡಿ, ನೆರೆದ ಬಹುಮಂದಿ ಸಭ್ಯಗೃಹಸ್ಥ-ಗೃಹಿಣಿಯರ ಎದುರಿನಲ್ಲಿ "ಧರ್ಮೇಚ, ಅರ್ಥೇಚ, ಕಾಮೇಚ ನಾತಿಚರಾಮಿ-ನಾತಿಚರಾಮಿ" ಎಂದು ಮಾಡಿದ ಪ್ರಮಾಣಕ್ಕೆ ಅರ್ಥವೇನು? ಅದನ್ನು ದಾಂಪತ್ಯಧರ್ಮದ ಮೂಲಮಂತ್ರವೆಂಬ ದೃಷ್ಟಿಯಿಂದ ನೋಡಿ, ಆ ತಮ್ಮ ಪ್ರಮಾಣವಾಕ್ಯದಿಂದ ಬದ್ಧಾಧರರಾಗಿ ನಡೆದುಕೊಳ್ಳುವ ಪುಣ್ಯಾತ್ಮರು ಎಷ್ಟು ಮಂದಿ ಸಿಕ್ಕುವರು? ಇದಂತಿರಲಿ, ತನ್ನೊಂದಿಗೆ ಸಂಸಾರ ಮಾಡಿಕೊಂಡಿದ್ದು ತನಗಾಗಿ ಮಕ್ಕಳುಮರಿಗಳನ್ನು ಹೆತ್ತು, ತನ್ನ ಗೋತ್ರಾಭಿವೃದ್ಧಿಗಾಗಿ ಸಂತಾನಗಳನ್ನು ಕೊಟ್ಟ ತನ್ನಾ ಧರ್ಮಪತ್ನಿಯು ದೈವವಶದಿಂದ ಮರಣೋನ್ಮುಖಳಾದರೆ, ಆಕೆಯು ಹಾಗೆ ತೀರಿಕೊಂಡ ಹದಿನೈದುದಿನಗಳೊಳಗಾಗಿ, ದಾಪಂತ್ಯದ ಪವಿತ್ರಪ್ರೇಮಬಂಧವನ್ನು ಕಿತ್ತೊಗೆದು,—ಸಮಸ್ತವನ್ನೂ ಮರೆತು, ದ್ವಿತೀಯವಿವಾಹಕ್ಕೆ ಕನ್ಯೆಯರನ್ನು ಹುಡುಕುವ ಸ್ವಾತಂತ್ರ್ಯವೂ ಧಾರ್ಷ್ಟ್ಯವೂ ಪುರುಷನಿಗುಂಟು! ಆದರೆ ಕೇವಲ ಲಗ್ನಕಾಲದಲ್ಲಿ ಮಾತ್ರ ವರನ ಅಂಗುಲೀಗ್ರಹಣ ಮಾಡಿದ ತಪ್ಪಿತಕ್ಕಾಗಿ ಪುನಃ ಆತನ ಮುಖದರ್ಶನವನ್ನೇ ಮಾಡದಿದ್ದರೂ ದುರ್ದೈವವಶದಿಂದ ಗಂಡನನ್ನು ಕಳೆದುಕೊಂಡರೆ, ಪಾಪ, ಅಜ್ಞಾನಿಯಾದ ಹನ್ನೆರಡು ವಯಸ್ಸಿನ ಆ ಬಾಲೆಯು ಮುಂದೆ ಜನ್ಮಾವಧಿ, ಕೇವಲ ಮಹರ್ಷಿಗಳಿಗೆ ಮಾತ್ರ ಸಾಧ್ಯವೆನ್ನಿಸುವ ಆದಿತ್ಯಬ್ರಹ್ಮಚರ್ಯವ್ರತವನ್ನು ಪಾಲನೆಮಾಡಬೇಕೆಂದು ನಿಬಂಧನೆಗಳನ್ನು ವಿಧಿಸುವ ಸ್ವಾತಂತ್ರ್ಯವೂ ಪುರುಷನಿಗುಂಟು! ಅಲ್ಲವೆ? ಇದು ಯಾವ ನ್ಯಾಯ? ಕಾಲದೇಶವರ್ತಮಾನಗಳ ಸ್ಥಿತಿಗತಿಗಳಿಂದ ಇದು ಹೇಗೆ ಸಾಧ್ಯ? ಸ್ತ್ರೀವರ್ಗದಮೇಲೆ ವಿಧಿಸತಕ್ಕ ಈ ಧಾರ್ಮಿಕ ನಿಬಂಧನೆಯು ಸಮಾಜಧರ್ಮರಕ್ಷಣೆಗಾಗಿ, ಎಂಬ ಪವಿತ್ರಭಾವನೆಯು ಇದ್ದುದಾದರೆ ಆ ಸಂದರ್ಭದಲ್ಲಿ ಅದು ಶಿರಸಾ ಮಾನ್ಯವಾಗತಕ್ಕುದು! ಆದರೆ, ಅದರಂತೆಯೇ ಪತ್ನೀವಿಯೋಗವಾದನಂತರ ತಮ್ಮ ಶೇಷಜೀವಿತವನ್ನು ಲೋಕಸಂಗ್ರಹಣಕಾರ್ಯ

ಕ್ಕೂ ಆತ್ಮಾಭಿವೃದ್ಧಿಕಾರ್ಯಕ್ಕೂ ವಿನಿಯೋಗಿಸಲು ಪುರುಷರೂ ನಿರ್ಬಂಧಿತ ರಾಗತಕ್ಕದು ನ್ಯಾಯ ಸಮ್ಮತವು, ಅಲ್ಲವೆ? ಇದೂ ಅಂತಿರಲಿ! ಬೇರೊಂದು ತರಗತಿಯವರಿರುವರು. ಅವರಿಂದಲೇ ಸಮಾಜಕ್ಕೆ ಹೆಚ್ಚು ಬಾಧೆಯುಂಟು. ಅವರು ಧರ್ಮಪತ್ನಿಯು ಬದುಕಿದ್ದಾಗಲೇ ಲಗ್ನಕಾಲದ ಪ್ರಮಾಣವಾಕ್ಯ, ದಾಂಪತ್ಯಧರ್ಮ ಕೊನೆಗೆ ಮಾನವಧರ್ಮಗಳನ್ನು ಕೂಡ ಲೆಕ್ಕಿಸದೆ ಕೇವಲ ಕಾಮಸಂತೃಪ್ತಿಗಾಗಿಯೇ-ಪಶುವಿಹಿತ ಇಂದ್ರಿಯ ಭೋಗಕ್ಕಾಗಿಯೇ ದ್ವಿತೀಯ ತೃತೀಯ ವಿವಾಹಗಳನ್ನು ಮಾಡಿಕೊಂಡು ಆ ತಮ್ಮ ಪತ್ನಿಯರ ಜೀವಿತಗಳನ್ನು ನರಕವಾಸಕ್ಕೆ ಸಮಾನವಾಗಿ ಮಾಡಿ ಸಮಾಜದ ಕಷ್ಟನಷ್ಟಗಳನ್ನು ದಿನದಿನಕ್ಕೆ ಹೆಚ್ಚಿಸುತ್ತಿರುವರು ಇಂಥವರನ್ನು ಏನೆನ್ನಬಹುದು? ಪ್ರಿಯ ವಾಚಕಮಹಾಶಯರೇ! ದಿನದಿನಕ್ಕೆ ಅಭಿವೃದ್ಧಿಸ್ಥಿತಿಗೇರಬೇಕೆಂಬ ನಿಜವಾದ ಅಪೇಕ್ಷೆಯೇ ನಮಗಿರುವುದಾದರೆ, ನಾವು ನಮ್ಮ ಸಮಾಜದಲ್ಲಿ ರೂಢಮೂಲವಾಗಿ ಅಡಗಿರುವ ದೋಷಗಳೇನೆಂಬುದನ್ನು ನಿಷ್ಪಕ್ಷಪಾತದೃಷ್ಟಿಯಿಂದ ವಿಚಾರಿಸಿ ಅವುಗಳನ್ನು ಕುರಿತು ಯೋಚಿಸಿ, ತತ್ಪರಿಹಾರ ಮಾರ್ಗಗಳನ್ನು ಕುರಿತು ಚರ್ಚಿಸಿ, ಸ್ವಾರ್ಥತ್ಯಾಗಮಾಡಿ ಶ್ರಮಿಸತಕ್ಕದು ಪ್ರತಿಯೊಬ್ಬನ ಕರ್ತವ್ಯವಲ್ಲವೆ?

ಉದಯಾದಿತ್ಯನು ಕೆಲದಿನಗಳು ಉಭಯಪತ್ನಿಯರ ಪ್ರೇಮಪಾಶಕ್ಕೂ ಸಿಕ್ಕು ಡೋಲಾಯಮಾನ ಮನಸ್ಕತೆಯಿಂದ ತೊಳಲುತ್ತಿದ್ದು ಕೊನೆಗೆ ವಾಘೇಲೀರಾಣಿಯ ಮೋಹಪಾಶದಿಂದ ಜಿತನಾಗಿ, ಸೋಳಂಕೀರಾಣಿಯನ್ನು ದಾಸಿಯಂತೆ ನೋಡಿಕೊಳ್ಳತೊಡಗಿದನು ಸ್ವಲ್ಪದಿನಗಳಲ್ಲೇ ಸವತಿಮಾತ್ಸರ್ಯವು ಮತ್ತೂ ಅಧಿಕವಾಯಿತು. ವಾಘೇಲಿಯು, ತನ್ನ ಸವತಿಯನ್ನೂ ಆಕೆಯ ಮಗನನ್ನೂ ಅರಮನೆಯಿಂದ ಹೊರಡಿಸಿದಳು. ಆದರೆ ಮಂತ್ರಿಮುಂತಾದವರು ಮಧ್ಯಸ್ಥರಾಗಿ ರಾಣಿಯ ಮತ್ತು ಜಗದೇವನ ಉದರನಿರ್ವಾಹಕ್ಕಾಗಿ ಎರಡು ಗ್ರಾಮಗಳನ್ನೂ ವಾಸಕ್ಕಾಗಿ ಊರಹೊರಗೆ ಒಂದು ಮನೆಯನ್ನೂ ಕೊಡಿಸಿದರು. ಸೋಳಂಕೀರಾಣಿಯು ವಿಚಾರಶೀಲೆಯಾದುದರಿಂದ ಪ್ರಾಪ್ತವಾದ ಸಂಕಟಕ್ಕಾಗಿ ಬೆದರಿ ಹತಾಶಳಾಗದೆ, ತನ್ನಾ ದುಸ್ಥಿತಿಯಲ್ಲೇ ತನ್ನ ಕುಮಾರನ ವಿದ್ಯಾಬುದ್ಧಿಗಳನ್ನು ಕುರಿತು ಹೆಚ್ಚುಲಕ್ಷ್ಯವನ್ನಿಟ್ಟಳು. ದಾಸದಾಸಿಯರು ಮುಂತಾದ ಹೆಚ್ಚುವೆಚ್ಚಗಳನ್ನಿಟ್ಟುಕೊಳ್ಳದೆ, ದ್ರವ್ಯವ

ನ್ನು ಮಿಗಿಸಿಕೊಂಡು, ಆದನ್ನು ತನ್ನ ಮಗನಿಗೆ ರಾಜಯೋಗ್ಯವಾದ ವಿದ್ಯಾ ಬುದ್ಧಿಗಳನ್ನು ಕಲಿಸುವುದಕ್ಕಾಗಿ ವಿನಿಯೋಗಿಸಿದಳು ಉತ್ತಮ ಪಂಡಿತ ರನ್ನು ನಿಯಮಿಸಿದಳು, ಜಗದೇವನು ಉಪಾಧ್ಯಾಯರಿಗೆ ವಿಧೇಯನಾಗಿ ಕಾವ್ಯವ್ಯಾಕರಣ ನಾಟಕಾದಿ ಸಾಹಿತ್ಯಭಾಗಗಳು, ದೇಶಚರಿತ್ರೆ, ಅರ್ಥಶಾಸ್ತ್ರ, ರಾಜನೀತಿಶಾಸ್ತ್ರಗಳು ಮುಂತಾಗಿ ಸಕಲ ವಿಷಯಗಳಲ್ಲೂ ಉತ್ತಮರೀತಿಯ ಶಿಕ್ಷಣವನ್ನು ಹೊಂದಿದನು ಅಲ್ಲದೆ ಕ್ಷತ್ರಿಯೋಚಿತವಾದ ಯುದ್ಧವಿದ್ಯೆಯ ಲ್ಲೂ ಸಂಪೂರ್ಣಪರಿಶ್ರಮವನ್ನು ಹೊಂದಿದನು. ಅಂಗಸಾಧನೆ ಮಲ್ಲಯುದ್ಧಾ ದಿಗಳಲ್ಲಿ ಅದ್ವಿತೀಯನೆನ್ನಿಸಿದನು. ಕುದುರೆ ಆನೆ ರಥಗಳ ಏರಾಟ, ಸವ್ಯ ಸ್ತ್ರ ಆಯುಧ ಪ್ರಯೋಗಗಳು ಮುಂತಾದ ಎಲ್ಲಾ ವೀರವಿದ್ಯೆಗಳೂ ರಾಜಪು ತ್ರನಿಗೆ ಕರತಲಾಮಲಕವಾದುವು. ಸಕಲ ಪ್ರಜೆಗಳೂ ತಮ್ಮಾ ರಾಜಪುತ್ರ ನ ಪ್ರೌಢಿಮೆಗಾಗಿ ಪರಮಾನಂದಪಡುತ್ತಾ ಸಕಲ ವಿಷಯಗಳಲ್ಲೂ ರಣಧ ವಲನಿಗಿಂತಲೂ ಜಗದೇವನೇ ಶ್ರೇಷ್ಠನೆಂದು ಮುಕ್ತಕಂಠರಾಗಿ ಹೊಗಳು ತ್ತಿದ್ದರು ರಾಜನಿಗೂ ತನ್ನ ಮಗನ ಶೌರ್ಯಸಾಹಸಗಳನ್ನು ಕೇಳಿ ಪರ ಮಾನಂದವಾಗುತ್ತಿದ್ದಿತು ಆದರೇನು ಮಾಡುವನು! ಪಾಪ, ತನ್ನ ಹಿರಿ ಯರಾಣಿಗೆಲ್ಲಿ ಕೋಪ ಬರುವುದೋ ಎಂದು ಬೆದರಿ ರಾಜನು ಆ ತನ್ನ ಸಂ ತೋಷವನ್ನು ಹೊರಕ್ಕೆ ಪ್ರಕಾಶಪಡಿಸದಿದ್ದನು.

ಜಗದೇವನು ಮೇಲ್ಕಂಡಂತೆ ಪ್ರಾಯಪ್ರಬುದ್ಧನಾಗಿ ವಿದ್ಯಾವಿನಯಾದಿ ಸದ್ಗುಣಗಣಗಳಿಂದ ವಿಭೂಷಿತನಾಗಿದ್ದ ವೇಳೆಯಲ್ಲೇ ಬಿರಜರಾಜನ ಆಸ್ಥಾ ನದಿಂದ ಹೊರಟಿದ್ದ ಬ್ರಾಹ್ಮಣರು ಬಂದು ವರರ ಚಿತ್ರಪಟಗಳನ್ನು ಕೊಂ ಡೊಯ್ದು ವೀರಮತಿಗೆ ತಲ್ಪಿಸಿದುದು. ಅಲ್ಲಿಂದ ಪತ್ರವನ್ನು ತಂದ ಬ್ರಾಹ್ಮ ಣರೂ ಉದಯಾದಿತ್ಯನನ್ನು ಕಂಡು ಉಡುಗರೆಗಳೊಂದಿಗೆ ಆ ಪತ್ರವನ್ನೂ ಆತನಿಗೆ ಒಪ್ಪಿಸಿದರು. ರಾಜನು ಅದನ್ನು ಓದಿ ನೋಡಿಕೊಂಡು ಪರಮಾ ನಂದಪಟ್ಟನಾದರೂ ಆ ವಿಷಯದಲ್ಲಿ ತನ್ನ ಹಿರಿಯರಾಣಿಯ ಅಭಿಪ್ರಾಯ ವಿಲ್ಲದೆ, ಹೀಗೇ ಎಂದು ನಿರ್ಧರದ ಪ್ರತ್ಯುತ್ತರಕೊಡಲು ಮಾರ್ಗವಿಲ್ಲದೆ, ಯೋಚನೆಗೊಳಗಾದನು ವಾಘೇಲಿರಾಣಿಯು ತನ್ನ ಮಗನಾದ ರಣಧವ ಲನಿಗೆ ಲಗ್ನವಿಲ್ಲದೆ, ಜಗದೇವನ ಲಗ್ನಕ್ಕೆ ಸಮ್ಮತಿಸುವಳೋ ಇಲ್ಲವೋ ಎಂಬುದೇ ಆತನ ಯೋಚನೆಗೆ ವಸ್ತುವಾಗಿದ್ದಿತು! ಆದರೂ ವಾಘೇಲಿಯು ಆ

ಸಂಗತಿಯನ್ನು ಕೇಳಿ, ಯಾವ ಸುಗ್ರಹದ ಮಹಿಮೆಯಿಂದಲೋ ಅವನ ವಿವಾಹಕ್ಕೆ ಒಪ್ಪಿದಳು.

ಉದಯಾದಿತ್ಯನು ತನ್ನ ಮಗನಿಗೆ ವೀರಮತಿಯನ್ನು ಪತ್ನಿಯನ್ನಾಗಿ ಸ್ವೀಕರಿಸುವ ವಿಷಯದಲ್ಲಿ ತನ್ನ ಸಮ್ಮತಿಯುಂಟೆಂದು ಬಿರಜನಿಂದ ಪತ್ರವನ್ನು ತಂದಿದ್ದ ಬ್ರಾಹ್ಮಣರೊಂದಿಗೆ ಹೇಳಿ ಕಳುಹಿಸಿದನು. ಅತ್ತ ಟುಕಟೋಡಾ ರಾಜಧಾನಿಯಲ್ಲಿ ವೀರಮತಿಯ ವಿವಾಹ ಮಹೋತ್ಸವಕ್ಕಾಗಿ ನಗರಶೃಂಗಾರ, ವಿವಾಹಮಂಟಪಾದಿಗಳ ಅಲಂಕಾರ, ಲಗ್ನಸಾಮಗ್ರಿಗಳ ಸಂಗ್ರಹಣ, ಅತಿಥಿ ಅಭ್ಯಾಗತರ-ದೇಶವಿದೇಶದ ರಾಜ ರಾಜಪುತ್ರರ ಆಹ್ವಾನ ಮುಂತಾದ ಅನೇಕ ಲಗ್ನಕಾರ್ಯಕಲಾಪಗಳು ಪ್ರಾರಂಭವಾದುವು ಯುಕ್ತಕಾಲದಲ್ಲಿ ಉದಯಾದಿತ್ಯನೂ ತನ್ನ ಕಿರಿಯರಾಣಿ-ಪುತ್ರನಾದ ಜಗದೇವನಿಂದಲೂ ತನ್ನ ಪದವಿಗೆ ಕುಂದಿಲ್ಲದಂತೆ ಹಸ್ತ್ಯಶ್ವರಥಪದಾತಿಜನಯುಕ್ತವಾದ ಪರಿವಾರಗಳಿಂದಲೂ ಕೂಡಿ ಬಿಯ್ಯಾಗರ ರಾಜಧಾನಿಗೆ ಪ್ರಯಾಣಮಾಡಿದನು. ಬಿರಜನು, ತನ್ನ ಅಧೀಶನಾದ ಉದಯಾದಿತ್ಯರಾಜನನ್ನು ಯೋಗ್ಯಮರ್ಯಾದೆಯಿಂದ ಇದಿರುಗೊಂಡು ಕರೆತಂದು ಬಿಡಾರದಲ್ಲಿಳಿಸಿದನು.—ಸಕಲ ರಾಜ-ರಾಜಪುತ್ರರೂ ದೇಶವಿದೇಶಗಳಿಂದ ಬ್ರಾಹ್ಮಣಾದಿ ಚತುರ್ವರ್ಣದವರೂ ಬಂದು ರಾಜಧಾನಿಯಲ್ಲಿ ನೆರೆದರು.

ಮುಂದೊಂದು ಶುಭದಿನದಲ್ಲಿ ನೇತ್ರಾನಂದಕರವಾಗಿ ಅಲಂಕರಿಸಲ್ಪಟ್ಟಿದ್ದ ವಿವಾಹವೇದಿಕೆಯಲ್ಲಿ ಜಗದೇವ-ವೀರಮತಿಯರು ದಿವ್ಯಹಸೆಮಣೆಗಳಲ್ಲಿ ಕುಳಿತರು. ಪುರೋಹಿತರು ಸ್ವಸ್ತಿವಾಚನಗಳನ್ನುಚ್ಚರಿಸಿದರು. ವಿಪ್ರವರ್ಯರು ಮಂಗಳಾಶೀರ್ವಚನಗಳನ್ನು ನುಡಿದರು. ಸುಮಂಗಲೆಯರು ಆ ವಧೂವರರು ದೀರ್ಘಕಾಲಗಳವರೆಗೆ ಸುಖವಾಗಿ ದಾಂಪತ್ಯಭೋಗಗಳನ್ನನುಭವಿಸುತ್ತಾ ಲೋಕೋಪಕಾರಿಗಳಾಗಿರಲೆಂದು ಆಶೀರ್ವದಿಸಿದರು. ಸಕಲರೂ ಆ ವಧೂವರರ ಮಯುಸ್ಸು ತೇಜಸ್ಸು ರೂಪುರೇಖಾವಿಲಾಸಗಳು ನಯವಿನಯಗಳು ಮುಂತಾದುವುಗಳಲ್ಲಿನ ಸಾಮಂಜಸ್ಯವನ್ನು ಕಂಡು ಪರಮಾನಂದಪಟ್ಟರು. ಸಕಲರೂ ದಿವ್ಯಭೋಜನಾದಿಗಳು, ಗಂಧ ಪುಷ್ಪ ತಾಂಬೂಲಾದಿಗಳು ಮುಂತಾದುವುಗಳಿಂದ ಸಂತುಷ್ಟರಾದರು ಉದಯಾದಿತ್ಯನು ತಮಗೆ ಗುಣವತಿಯಾದ ಸೊಸೆ ದೊರೆತುದಕ್ಕಾಗಿಯೂ, ಜಗದೇವನು ರತಿ

ಸಮಾನ ಸೌಂದರ್ಯವತಿಯೂ ಸದ್ಗುಣವತಿಯೂ ಆದ ಪತ್ನೀಲಾಭಕ್ಕಾಗಿಯೂ, ವೀರಮತಿಯು ಅನುರೂಪನಾದ ತನ್ನ ಮನವೊಪ್ಪಿದ ಪತಿಯು ದೊರೆತುದಕ್ಕಾಗಿಯೂ, ಬಿರಜನು ತಾನು ಸಾಮಂತನಾಗಿದ್ದರೂ ತಮ್ಮ ಬಾಂಧವ್ಯವನ್ನು ನಿರಾಕರಿಸದೆ ಕೈಗೊಂಡ ಉದಯಾದಿತ್ಯನ ಸೌಜನ್ಯದಿಂದ ತನ್ನ ತಂಗಿಗೆ ಜಗದೇವನಂತಹ ಉತ್ತಮ ವರನು ದೊರೆತುದಕ್ಕಾಗಿಯೂ ಹೀಗೆ ಆ ವಿವಾಹಕ್ಕಾಗಿ ಸೇರಿದ್ದ ಪ್ರತಿಯೊಬ್ಬರೂ ಅವರವರ ಸ್ಥಿತಿಯಲ್ಲಿ ಅವರವರ ಅಭೀಷ್ಟಗಳನ್ನು ಪಡೆದು ಪರಮಾನಂದಪಟ್ಟರು. ಉದಯಾದಿತ್ಯನು, ಜಗದೇವ-ವೀರಮತಿಯರ ವಿವಾಹಮಹೋತ್ಸವವು ನೆರವೇರಿದ ತರುವಾಯ ಸೊಸೆಯನ್ನೂ ಕರೆದುಕೊಂಡು ಮಹಾವೈಭವದಿಂದ ತನ್ನ ರಾಜಧಾನಿಯನ್ನು ಕುರಿತು ಪ್ರಯಾಣಮಾಡಿದನು.



## ಅಧ್ಯಾಯ ೩ "ಭರ್ತೃಬಂಧನನಿವೃತ್ತಿ"

ವಿವಾಹವಾದ ತರುವಾಯ ಸೋಳಂಕಿರಾಣಿಯೂ ಜಗದೇವನೂ ಊರ ಹೊರಗಿನ ಮನೆಯನ್ನು ಬಿಟ್ಟು ಮಹಾರಾಜನ ದೊಡ್ಡ ಅರಮನೆಯಲ್ಲೇ ವಾಸಿಸುತ್ತ ಇರಬಹುದೆಂದು ಉದಯಾದಿತ್ಯನು ಅನುಮತಿಸಿದನು ಜಗದೇವನೂ ರಾಜಾಜ್ಞೆಯಿಂದ ಪ್ರತಿದಿನವೂ ರಾಜಸಭೆಗೆ ಹೋಗುತ್ತಲೂ, ಅಲ್ಲಿ ಮಂತ್ರಿಸಾಮಂತರೊಂದಿಗೆ ಬೆರೆದು ರಾಜಕೀಯ ವಿಚಾರಗಳಲ್ಲಿ ಅನುಭವಪಡುತ್ತಲೂ ಇದ್ದನು. ಯೌವನಸ್ಥನೂ ವಿನಯಶೀಲನೂ ಸೂಕ್ಷ್ಮಮತಿಯೂ ಶೂರನೂ ಉದಾರನೂ ಆದ ಆ ರಾಜಪುತ್ರನ ವಿಷಯದಲ್ಲಿ ಸಕಲ ಪ್ರಜೆಗಳೂ ಉತ್ತಮಾಭಿಪ್ರಾಯವುಳ್ಳವರಾಗಿ ಅವನನ್ನು ಹೃತ್ಪೂರ್ವಕವಾಗಿ ಪ್ರೀತಿಸುತ್ತಿದ್ದರು. ಜಗದೇವನು ಹೀಗೆ ತನ್ನ ವಿನಯವಿಧೇಯತಾ ಸದ್ಗುಣಗಳಿಂದ ಎಲ್ಲರ ಪ್ರೀತಿಗೂ ಪಾತ್ರನಾಗಿರುತ್ತಿರಲು, ವಾಘೇಲಿಯ ಮಗನಾದ ರಣಧವಲನು ಇದಕ್ಕೆ ಸಂಪೂರ್ಣ ವಿರುದ್ಧವಾಗಿ ಮುಖೇಡಿಯಾಗಿಯೂ ಯಾರೊಂದಿಗೂ ಸರಳತೆಯಿಂದ ಮಾತನಾಡದೆ-ಉನ್ನತವಿಷಯವಿಚಾರಗಳಲ್ಲಿ ಬೆರೆಯದೆ ಮಂಕನಂತೆಯೂ ಇರುತ್ತಿದ್ದನು. ಜಗದೇವನು ತನ್ನ ತಾಯಿಯ ವಿಷಯದಲ್ಲಿ ಹೇಗೋ

ಹಾಗೆಯೇ ತನ್ನ ಬಲತಾಯಿಯಾದ ವಾಘೇಲಿಯ ಸನ್ನಿಧಿಯಲ್ಲೂ ಭಯ ಭಕ್ತಿ ವಿನಯ ಪ್ರೇಮಾನ್ವಿತನಾಗಿ ನಡೆದುಕೊಳ್ಳುತ್ತಾ, ಆಗಾಗ್ಗೆ ಆಕೆಯ ಅಂತಃಪುರಕ್ಕೆ ಹೋಗಿ ಬರುತ್ತಾ ಆಕೆಯ ಪ್ರೀತಿವಿಶ್ವಾಸ ಸಂಪಾದನೆಗಾಗಿ ಯೂ ಪ್ರಯತ್ನಿಸುತ್ತಿದ್ದನು.

ವೀರಮತಿಯು ತನ್ನ ಪತಿಯೊಂದಿಗೆ ಅತ್ತೆಯ ಮನೆಯಲ್ಲಿ ಕೆಲವು ತಿಂಗಳುಗಳಕಾಲ ವಾಸಿಸಿದ್ದು, ತರುವಾಯ ಪತಿಯ ಅಪ್ಪಣೆಯನ್ನು ಪಡೆದು ಮೊದಲನೆಯಸಾರಿ, ತೌರುಮನೆಗೆಂದು ಹೊರಟು ನಡೆದಳು. ಜಗದೇವನೂ ದಿನದಿನಕ್ಕೆ ತಂದೆಯ ಅನುಗ್ರಹಕ್ಕೆ ಹೆಚ್ಚುಹೆಚ್ಚಾಗಿ ಪಾತ್ರನಾಗುತ್ತಾ, ಪ್ರಜೆಪರಿವಾರಗಳ ಪ್ರೀತಿವಿಶ್ವಾಸಗಳನ್ನು ಸಂಪಾದಿಸಿಕೊಳ್ಳುತ್ತಾ ಅಭಿವೃದ್ಧಿಗೆ ಬರುತ್ತಿರುವಷ್ಟರಲ್ಲೇ ಅವನ ಶ್ರೇಯಸ್ಸಿಗೆ ಕುಠಾರಸ್ವರೂಪವಾದ ಒಂದು ವಿಪ್ಪತ್ತು ಪ್ರಾಪ್ತವಾಯಿತು.—ತನ್ನ ಮಗನು ಶುಂಠನಾಗಿಯೂ, ತನ್ನ ಸವತಿಯ ಮಗನು ಸರ್ವಲಕ್ಷಣಸಮನ್ವಿತನಾಗಿ ಪ್ರಜಾರಂಜಕನಾಗಿಯೂ ಇದ್ದುದರಿಂದ ಮುಂದೆ ಚತುರನಾದ ಜಗದೇವನು ರಾಜನ ಮನಸ್ಸನ್ನು ವಲಿಸಿಕೊಂಡು ತಾನೇ ರಾಜ್ಯಾಧಿಪತಿಯಾಗಿ ರಣಧವಲನನ್ನು ನಿರ್ಗತಿಕನನ್ನಾಗಿ ಮಾಡಬಹುದೆಂಬ ಸಂಶಯವು ವಾಘೇಲಿಯ ಚಿತ್ತವೃತ್ತಿಯನ್ನು ಅವಲಂಬಿಸಿತು ದಿನದಿನಕ್ಕೆ ಅದು ಬಹು ವಿಕೃತಾಕಾರವನ್ನು ಹೊಂದಿ ಪ್ರಬಲವಾಗ ತೊಡಗಿತು. ಅವರಿಬ್ಬರ ಗುಣಸ್ವಭಾವಗಳನ್ನು ಕುರಿತು ಸ್ವಾಭಾವಿಕವಾಗಿ ಯೋಚಿಸಿದರೂ ರಾಜ್ಯಾಧಿಪತ್ಯಕ್ಕೆ ಸರ್ವ ವಿಷಯಗಳಲ್ಲೂ ಜಗದೇವನೇ ಪಾತ್ರನೆಂಬುದಕ್ಕೆ ಯಾವ ಸಂದೇಹವೂ ಇರಲಿಲ್ಲ ಅದನ್ನು ಕಂಡು ವಾಘೇಲಿಯು ಜಗದೇವನನು ಬದುಕಲಿತ್ತರೆ ರಾಜ್ಯವು ನಿಶ್ಚಯವಾಗಿಯೂ ಅವರ ಪಾಲಾಗುವುದೆಂದೂ, ಉದಯಾದಿತ್ಯನ ತರುವಾಯ ರಾಜ್ಯವು ತನ್ನ ಮಗನಿಗೆ ಪ್ರಾಪ್ತವಾಗಬೇಕಾಗಿದ್ದರೆ ಜಗದೇವನನ್ನು ತೀರಿಸುವುದೇ ಮುಖ್ಯೋಪಾಯವೆಂದೂ ನಿರ್ಧರಿಸಿ, ಆ ಕಾರ್ಯಕ್ಕಾಗಿ ಪ್ರಯತ್ನಿಸ ತೊಡಗಿದಳು

ಒಬ್ಬನಲ್ಲಿ ತಪ್ಪು ಕಂಡುಹಿಡಿಯಬೇಕೆಂತಲೇ ಕಣ್ಣಿಟ್ಟುಕೊಂಡು ಕಾಯುತ್ತಾ ಕುಳಿತರೆ ತಪ್ಪು ಸಿಕ್ಕಲು ಸಾವಕಾಶವಾಗುವುದೇ? ಜಗದೇವನು ಬಲತಾಯಿಯಲ್ಲಿ ಪ್ರೀತಿಸಂಪಾದನೆಮಾಡಬೇಕೆಂದು ಅಡಿಗಡಿಗೆ ವಾಘೇಲಿಯ

ಅಂತಃಪುರಕ್ಕೆ ಬಂದುಹೋಗುವ ವಾಡಿಕೆಯಿತ್ತಲ್ಲವೆ! ಇದನ್ನೇ ಕಾರಣವಾಗಿ ಟ್ಟುಕೊಂಡು ಘಾತುಕಳಾದ ಆಕೆಯು ಪರಿಶುದ್ಧಾಂತಃಕರಣದ ಆ ರಾಜಪುತ್ರನ ಮೇಲೆ ಪ್ರಾಣಾಂತ್ಯಕಾರಿಯಾದ ಮಹದಪರಾಧವೊಂದನ್ನು ಹೊರಿಸಿದಳು. ರಾಜನಿಗೆ ನಿಶ್ಚಯವೆಂದು ತೋರಲು ಬೇಕಾದಷ್ಟು ಕೃತ್ರಿಮಗಳನ್ನೆಲ್ಲಾ ಉಂಟುಮಾಡಿದಳು ಈ ಮೂಲಕ ತನ್ನನ್ನು ಮಾತೆಯೆಂದೇ ಭಾವಿಸಿದ್ದ ನಿರಪರಾಧಿಯೂ, ನಿಷ್ಕಲಂಕನೂ ಆದ ಆ ಜಗದೇವನನ್ನು ಮೂಲೋತ್ಪಾಟನ ಮಾಡಬೇಕೆಂದು ಉದ್ದೇಶಿಸಿದಳು

ಮೋಹದ ಪತ್ನಿಯಿಂದ ಪ್ರೇರಿಸಲ್ಪಟ್ಟ ಉದಯಾದಿತ್ಯನು ಕರ್ತವ್ಯಮೂಢನಾಗಿ, ಕ್ರೋಧಾರುಣನೇತ್ರನಾಗಿ, ಉರಿಯುವವನಂತೆ ತೋರ್ಪಡುತ್ತಾ, ಮಾತಾಪಿತೃದ್ರೋಹಿಯಾದ ಆ ಜಗದೇವನು ತನಗೆ ಮುಖವನ್ನು ಸಹ ತೋರಿಸದಂತೆ ರಾಜ್ಯಭ್ರಷ್ಟನಾಗಿ ಹೊರಟುಹೋಗಬೇಕೆಂದು ಆಜ್ಞೆಮಾಡಿದನು. ಮಾನನಿಧಿಯಾದ ಜಗದೇವನಿಗೆ ರಾಜನಾದ ತಮ್ಮ ತಂದೆಯಿಂದ ಮೇಲ್ಕಂಡ ಕಾರಣಕ್ಕಾಗಿ ಕೊಡಲ್ಪಟ್ಟ ಆ ಆಜ್ಞೆಯು ಕೇವಲ ಶಿರಚ್ಛೇದನಕ್ಕೆ ಸದೃಶವಾದುದಾಗಿದ್ದಿತು ಅಂದೇ ತನ್ನ ತಲೆಯನ್ನು ಕಡಿದು ಹಾಕಬೇಕೆಂಬ ಆಜ್ಞೆಯಾಗಿದ್ದರೂ ಅವನು ಅಷ್ಟು ವ್ಯಥೆ ಪಡುತ್ತಿರಲಿಲ್ಲ! ಆದರೂ ಉಪಾಯವಿಲ್ಲವೆಂದುಕೊಂಡು ಯಾರೊಂದಿಗೂ ಯಾವ ವಿಷಯದಲ್ಲಿಯೂ ಮಾತನಾಡದೆ ನೇರವಾಗಿ ತನ್ನ ತಾಯಿಯನ್ನು ಕಂಡು ನಮಸ್ಕರಿಸಿ ಅನುಮತಿ ಪಡೆದು ತನ್ನ ಕುದುರೆಯನ್ನೇರಿ ಆಯುಧಗಳನ್ನು ಮಾತ್ರ ತೆಗೆದುಕೊಂಡು ರಾಜನಗರಿಯಿಂದ ಹೊರಹೊರಟನು

ರಾಜಧಾನಿಯಿಂದ ಹೊರಟಾಗ್ಗೆ ಜಗದೇವನು ತಮ್ಮ ರಾಜ್ಯಕ್ಕೆ ಸಮೀಪದಲ್ಲೇ ಇದ್ದ 'ಪಟ್ಟನ'ವೆಂಬ ಒಂದು ಸ್ವತಂತ್ರಸಂಸ್ಥಾನಕ್ಕೆ ಹೋಗಿ ಅಲ್ಲಿಯ ರಾಜನ ಬಳಿಯಲ್ಲಿ ಒಂದು ಉದ್ಯೋಗವನ್ನು ಸಂಪಾದಿಸಿಕೊಳ್ಳಬೇಕೆಂದು ಯೋಚಿಸಿದ್ದನು ಅಷ್ಟರಲ್ಲಿ ತನ್ನ ಧರ್ಮಪತ್ನಿಯು ವಾಸಿಸುತ್ತಿದ್ದ ಟುಕಟೋಡಾ ಪಟ್ಟಣಕ್ಕೆ ನಡೆದು ಆಕೆಯನ್ನೂ ನೋಡಿಕೊಂಡು ಆಕೆಯ ಅನುಮತಿಯನ್ನೂ ಪಡೆದು ಮುಂದಕ್ಕೆ ಹೋಗೋಣವೆಂಬ ಯೋಚನೆಯೂ ಉಂಟಾಯಿತು. ಒಡನೇ ಆ ಕಡೆಗೆ ತನ್ನ ಕುದುರೆಯನ್ನು ತಿರುಗಿಸಿದನು. ಧಾರಾನಗರದಿಂದ ಹೊರಟನಂತರ ಮಧ್ಯೆ ಎಲ್ಲೂ ನಿಲ್ಲದೆ ಪ್ರಯಾಣಮಾಡುತ್ತಾ

ಆ ಊರಿನ ಉದ್ಯಾನವನದ ಸಮೀಪಕ್ಕೆ ಬರುವ ವೇಳೆಗೆ ಸಾಯಂಕಾಲವಾಗಿದ್ದುದರಿಂದ ಅಲ್ಲಿ ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡಿದ್ದು ತರುವಾಯ ರಾತ್ರಿ ಬೆಳದಿಂಗಳಲ್ಲಿ ಊರನ್ನು ಸೇರಬಹುದೆಂದು ಕೊಳದಲ್ಲಿ ಕೈಕಾಲು ಮುಖಗಳನ್ನು ತೊಳೆದುಕೊಂಡು ಫಲಾಹಾರಮಾಡಿ ಅಲ್ಲೇ ಮರದೆಡೆಯ ಶಿಲಾಸನದಲ್ಲಿ ವಿಶ್ರಾಂತಿಗಾಗಿ ಮಲಗಿಕೊಂಡನು.

ಜಗದೇವನ ಮೇಲೆ ಲೋಕನಿಂದ್ಯವಾದ ಮಹದಪರಾಧವನ್ನು ಹೊರಿಸಿ ರಾಜ್ಯಭ್ರಷ್ಟನನ್ನಾಗಿ ಮಾಡಿದ ವಾಘೇಲಿಯು ಅಷ್ಟರಿಂದಲೇ ತೃಪ್ತಳಾಗಲಿಲ್ಲ ತಾನು ಹೊರಿಸಿದ ತಪ್ಪಿತಕ್ಕಾಗಿ ರಾಜನು ಅವನ ಶಿರಚ್ಛೇದನಮಾಡಿಸುವನೆಂದು ನಂಬಿದ್ದಳು. ಆದರೆ ಕೇವಲ ರಾಜ್ಯದಿಂದ ಮಾತ್ರ ಹೊರಡಿಸಿ ಅವನನ್ನು ಪ್ರಾಣಗಳೊಂದಿಗೆ ಬದುಕಲಿತ್ತುದು ಆ ಕರಾಳೆಗೆ ಸಮಾಧಾನವೆನಿಸಲಿಲ್ಲ. ಒಡನೆ ಕೆಲಮಂದಿ ಕೊಲೆಗಡಿಗರನ್ನು ಕರೆಸಿ ಅವರಿಗೆ ವಿಶೇಷಧನವನ್ನು ಕೊಟ್ಟು ರಾಜ್ಯವನ್ನು ಬಿಟ್ಟು ಕಾಡುಬಿದ್ದು ಹೋಗುತ್ತಿರುವ ಜಗದೇವನನ್ನು ಸಂಹರಿಸಿ ಬನ್ನಿರೆಂದೂ ಆಜ್ಞಾಪಿಸಿದಳು. ಜಗದೇವನು ಮಾರ್ಗಮಧ್ಯದಲ್ಲಿ ಅವರಿಗೆ ಸಿಕ್ಕಿದ್ದರೆ ಮೃತ್ಯುಮುಖಸಾಗತಕ್ಕವನೇ! ಆದರೆ ಯಾವ ಪುಣ್ಯವಶದಿಂದಲೋ ಅವನು ಬಹುಶಃ ಆಕೆಯು ಹೀಗೆ ತನ ಪ್ರಾಣಕ್ಕೆ ಮುನಿಯಬಹುದೆಂದು ಶಂಕಿಸಿ, ರಾಜಮಾರ್ಗದಲ್ಲೇ ಪ್ರಯಾಣಮಾಡದೆ, ಬೇರೇಕಾಲುದಾರಿಯನ್ನು ಹಿಡಿದಿದ್ದನು ಆದುದರಿಂದ ಆ ಘಾತುಕರ ದೃಷ್ಟಿಗೆ ಬೀಳಲಿಲ್ಲ. ಆದರೂ ಉದ್ಯಾನದಲ್ಲಿ ಏಕಾಂಗಿಯಾಗಿ ನಿದ್ರಿಸುತ್ತಿದ್ದ ರಾಜಪುತ್ರನು ಅಲ್ಲಲ್ಲಿ ಸುತ್ತುತ್ತಾ ಆ ಉದ್ಯಾನಕ್ಕೂ ಬಂದ ಆ ನಾಲ್ವರು ಘಾತುಕರ ಕಣ್ಣಿಗೆ ಬಿದ್ದನು ಒಡನೆ ಅವರು ನಿರಾತಂಕನಾಗಿ ನಿದ್ರಿಸುತ್ತಿದ್ದ ಅವನನ್ನು ಸುಲಭವಾಗಿಯೇ ಬಂಧಿಸಿ ಹೊತ್ತುಕೊಂಡು ನಡೆದರು.

ಅಷ್ಟರಲ್ಲಿ ಜಗದೇವನ ಪಾಲಿನ ದೈವತಂತ್ರದಿಂದಲೋ ಎಂಬಂತೆ, ಬೇಟೆಗಾಗಿ ಕಾಡಿನಲ್ಲಿ ಸುತ್ತುತ್ತಾ ಹೋಗಿದ್ದ ವೀರಮತಿಯೂ ಆಕೆಯ ಪ್ರಿಯದಾಸಿಯೂ ಪುರುಷವೇಷಧಾರಿಗಳಾಗಿ ದಿವ್ಯಾಶ್ವಗಳನ್ನೇರಿ ಆ ಉದ್ಯಾನವನಕ್ಕೆ ಬಂದರು ಮತ್ತು ಅಲ್ಲಿಯ ಕಾವಲುಗಾರನನ್ನು ವಿಶೇಷವೇನೆಂದು ಕೇಳಲು ಅವನು ಯಾವನೋ ಒಬ್ಬ ರಾಜಪುತ್ರನು ಕುದುರೆಯನ್ನು ಹತ್ತಿ ಆ ವನವನ್ನು ಪ್ರವೇಶಿಸಿ ವಿಶ್ರಾಂತಿಗಾಗಿ ಅಲ್ಲಿಯ ಶಿಲಾಸನದ ಮೇಲೆ ಮಲಗಿಕೊಂಡಿದ್ದ

ನೆಂದೂ, ಅಷ್ಟರಲ್ಲಿ ಭಯಂಕರಾಕಾರರಾದ ನಾಲ್ಕುಮಂದಿ ಘಾತುಕರು ಎಲ್ಲಿಂದಲೋ ಬಂದು ಅವನನ್ನು ಬಂಧಿಸಿ ಹೊತ್ತುಕೊಂಡು ಹೋದರೆಂದೂ ತಿಳಿಸಿದನು. ಆ ಮಾತನ್ನು ಕೇಳಿ ವೀರಮತಿಯು ಅತ್ಯಂತ ಆಶ್ಚರ್ಯಯುಕ್ತಳಾಗಿ ಅವರು ಹೋದ ಮಾರ್ಗವನ್ನು ತಿಳಿದುಕೊಂಡು ಒಡನೆ ಆ ಕಡೆಗೆ ಕುದುರೆಗಳನ್ನು ಓಡಿಸುತ್ತಾ ನಡೆದಳು. ಸ್ವಲ್ಪ ದೂರ ಹೋಗುವುದರೊಳಗಾಗಿಯೇ ಅರಣ್ಯಪ್ರಾಂತವು ಸಿಕ್ಕಲು, ಆ ವೀರಸ್ತ್ರೀಯು ಭಯಪಡದೆ ಸುಗ್ಗಿ ಮುಂದೆ ಮುಂದೆ ಹೋಗುತ್ತಿದ್ದಳು. ಅಷ್ಟರಲ್ಲೇ ಸಮೀಪದ ಒಂದು ಓಯಲುಪ್ರದೇಶದಲ್ಲಿ ನಾಲ್ಕುಮಂದಿ ಘಾತುಕರು ಮಧ್ಯೆ ಕೈಕಾಲು ಕಟ್ಟಲ್ಪಟ್ಟ ಒಬ್ಬನನ್ನು ಹಾಕಿಕೊಂಡು, ಅವನನ್ನು ಕೊಲ್ಲಬೇಕೆ ಬೇಡವೇ ಎಂದು ಯೋಚಿಸುತ್ತಾ ಕುಳಿತಿದ್ದುದು ಕಾಣಿಸಿತು. ವೀರಮತಿಯು ಏಕಾಏಕಿ ದುಡಿಕಿದರೆ ಕೆಲಸಕೆಡಬಹುದೆಂದೂ ಅವರು ಏನುಮಾಡುವರೋ ತಿಳಿದುಕೊಂಡು ನಂತರ ಯುಕ್ತತೋರಿದ ಪ್ರಯತ್ನ ಮಾಡಬಹುದೆಂದೂ ಯೋಚಿಸಿ, ಕುದುರೆಗಳ ಪ್ರಯಾಣವೇಗವನ್ನು ಕಡಮೆ ಮಾಡಿ ಅವರ ಸಮೀಪದಲ್ಲೇ ಬಿಟ್ಟುಕೊಂಡು ಮೆಲ್ಲನೆ ಹೋಗುತ್ತಿದ್ದಳು. ಅಷ್ಟರಲ್ಲಿ ಆ ಘಾತುಕರು ಈ ಇಬ್ಬರನ್ನೂ ಕಂಡು, ಅವರೂ ಸಿರಿವಂತರಂತೆ ತೋರಿಬಂದುದರಿಂದ, ಅವರಲ್ಲಿ ಸಿಕ್ಕಬಹುದಾದ ದ್ರವ್ಯವನ್ನು ಅಪಹರಿಸಬೇಕೆಂದು ಅವರ ಮೇಲೇರಿ ಬಂದರು. ಒಡನೆ ವೀರಮತಿಯು ಬಾಣವನು ಬಿಲ್ಲಿನಲ್ಲಿ ಸಂಧಿಸಿ ಗುರಿಯಿಟ್ಟು ಪ್ರಯೋಗಿಸಲು, ಅದು ಅವರಲ್ಲೊಬ್ಬನ ಎದೆಯುಲ್ಲಿ ಪ್ರವೇಶಿಸಿ ಅವನನ್ನು ನೆಲದಲ್ಲಿ ಕೂಲಿಸಿತು. ಮತ್ತೆ ಮಿಕ್ಕವರು ರೋಷಾಕ್ರಾಂತರಾಗಿ ಮೇಲೇರಿ ಬರಲು, ವೀರಮತಿಯ ದಾಸಿಯು ಪ್ರಯೋಗಿಸಿದ ಭಲ್ಲೆಯು ಅವರಲ್ಲೊಬ್ಬನ ತೊಡೆಯುಲ್ಲಿ ಪ್ರವೇಶಿಸಿ ಅವನನ್ನು ನೆಲಕ್ಕೆ ಕೆಡಹಿತು. ಮಿಕ್ಕ ಇಬ್ಬರೂ ವೀರಮತಿಯ ಕತ್ತಿಯ ಹೊಳಪಿಗೇ ಗಾಬರಿಯಾಗಿ ಪ್ರಾಣದೊಂದಿಗೆ ಉಳಿದರೆ ಸಾಕೆಂದು ಓಡಿಹೋದರು. ಹೀಗೆ ಆ ಘಾತುಕರನ್ನು ಓಡಿಸಿದನಂತರ ಬಂಧಿಸಲ್ಪಟ್ಟ ಆತನನ್ನು ಬಿಡುಗಡೆಮಾಡಬೇಕೆಂದು ಜಗದೇವನು ಬಿದ್ದಿದ್ದ ಸ್ಥಳಕ್ಕೆ ಬಂದು ನೋಡಲು, ಆತನು ಮತ್ತಾರೂ ಅಲ್ಲದೆ ತನ್ನ ಪ್ರಿಯಭರ್ತನೇ ಎಂಬುದನ್ನು ತಿಳಿದು ವೀರಮತಿಯು ಪರಮಾನಂದ ಆಶ್ಚರ್ಯಗಳಲ್ಲಿ ಮುಳುಗಿದಳು. ಆದರೂ ತನ್ನ ಪರಿಚಯುವನ್ನು ತಿಳಿಸದೆ, ತನ್ನೊಂದಿಗೇ ಆ ದಿನ ಪ್ರಯಾಣಮಾಡಿ ಬರಬೇಕೆಂದು ಅಗ್ರಹಪಟ್ಟು ಆತನ

ನ್ನೂ ಕರೆದುಕೊಂಡು ಶೀಘ್ರವಾಗಿಯೇ ರಾಜಾಂತಃಪುರವನ್ನು ಸೇರಿದಳು. ಅಲ್ಲಿ ತನ್ನ ನಿಜರೂಪವನ್ನು ಪ್ರಕಟಿಸಲು ಜಗದೇವನು, ಅಂತಹ ಆಪತ್ತಿನ ವೇಳೆಯುಲ್ಲಿ ತನ್ನ ಪ್ರಾಣಪ್ರಿಯೆಯಿಂದಲೇ ತನ್ನ ಬಂಧನನಿವೃತ್ತಿಯಾಗುವಂತೆ ಅನುಗ್ರಹಿಸಿದುದಕ್ಕಾಗಿ ಭಗವಂತನಿಗೆ ಅನಂತ ಪ್ರಮಾಣಗಳನ್ನರ್ಪಿಸಿ, ಪತ್ನಿಯ ಸಾಹಸಚಾತುರ್ಯಗಳನ್ನೂ ಬಹುಬಗೆಯಿಂದ ಅಭಿನಂದಿಸಿದನು



## ಅಧ್ಯಾಯ ೪ "ಅಣಹಿಂತಪುರ"

ವೀರಮತಿಗೆ ಪರಮಾಶ್ಚರ್ಯವಾಯಿತು ಧಾರಾನಗರಿಯ ರಾಜಧಾನಿಯುಲ್ಲಿ ಸುಖವಾಗಿ ವಾಸಿಸುತ್ತಿದ್ದ ತನ್ನ ರಮಣನು, ಪರಿವಾರವೇನನ್ನೂ ಸಂಗಡ ಕರೆದುಕೊಳ್ಳದೆ ಏಕಾಂಗಿಯಾಗಿ ಅಲ್ಲಿಗೆ ಬಂದುದೇನು? ಅಲ್ಲಿ ಘಾತುಕರು ಬಂದು ಆತನನ್ನು ಕಟ್ಟಿ ಕೊಂಡೊಯ್ದು ಕೊಲ್ಲಲು ಹವಣಿಸುತ್ತಿದ್ದುದೇನು ಎಂಬುದರ ನೆಲೆಯೇ ಆಕೆಗೆ ಹತ್ತಲಿಲ್ಲ. ಆದರೂ ಮಾರ್ಗಾಯಾಸದಿಂದಲೂ ದುರುಳರ ಬಂಧನದಿಂದಲೂ ಆ ವರೆಗೇ ಶ್ರಮಿಸಿದ್ದ ಆತನನ್ನು ಪುನಃ ತೊಂದರೆಗೊಳಿಸಲಿಷ್ಟವಿಲ್ಲದೆ, ಸ್ನಾನಭೋಜನಾದಿಗಳಿಂದ ಉಪಚರಿಸಿ, ಸುಖನಿದ್ರೆಮಾಡಲಿತ್ತಳು. ಮಾರನೆಯ ಪ್ರಾತಃಕಾಲ, ಬಿರಜನೂ ತನ್ನ ಭಾವಮೈದುನನನ್ನು ಕಂಡು ಉಚಿತವಚನಗಳಿಂದ ಉಪಚರಿಸಿದನು ತರುವಾಯ ಒಂದೆರಡು ದಿನಗಳು ಅಲ್ಲಿದ್ದು ಪ್ರಯಾಣಸನ್ನದ್ಧನಾಗಿ, ತನ್ನ ಪತ್ನಿಯನ್ನು ಕುರಿತು "ಪ್ರಾಣಪ್ರಿಯೇ, ನನ್ನ ವೃತ್ತಾಂತವನ್ನು ಈ ವರೆಗೂ ನಿನ್ನಲ್ಲಿ ತಿಳಿಸದಿದ್ದುದಕ್ಕಾಗಿ ಅಸಮಾಧಾನಪಡಬೇಡ. ಕೇಳು ಆ ದಿನ ನನ್ನನ್ನು ಬಂಧಿಸಿ ಕೊಂಡೊಯ್ದು ಕೊಲ್ಲಲು ಯತ್ನಿಸುತ್ತಿದ್ದವರು ನಮ್ಮ ಸವತಿತಾಯಿಯಿಂದ ಕಳುಹಿಸಲ್ಪಟ್ಟಿದ್ದ ಕೊಲೆಗಡಿಗರು. ದೈವಯೋಗದಿಂದ ನೀನು ಮಾತ್ರ ನಿನ್ನ ದಾಸಿಯೊಂದಿಗೆ ಆ ಹೊತ್ತಿಗೆ ಬಂದು ನನ್ನನ್ನು ಉಳಿಸದಿದ್ದಿದ್ದರೆ ನಾನು ನಿಶ್ಚಯವಾಗಿಯೂ ನಿಸ್ಸಹಾಯನಾಗಿ ಅವರ ಕತ್ತಿಯಬಾಯಿಗೆ ತುತ್ತಾಗುತ್ತಿದ್ದೆನು. ಅದಂತಿರಲಿ ಈಗ ನಾನು ನನ್ನಾ ಸವತಿತಾಯಿಯ ಆದೇಶದಂತೆ ರಾಜ್ಯಭ್ರಷ್ಟನಾಗಿದ್ದೇನೆ. ನಿನ್ನ ಅಣ್ಣನು ನಮ್ಮ ತಂದೆಗೆ ಸಾಮಂ

ತರಾಜನಾದುದರಿಂದ ನಾನು ಇಲ್ಲಿರುವ ಸಂಗತಿಯು ಧಾರಾನಗರಕ್ಕೆ ತಿಳಿದರೆ, ನನ್ನ ಕಾರಣದಿಂದ ನಿಮ್ಮಣ್ಣನೂ ನಮ್ಮ ತಂದೆಯು ಅಸಮಾಧಾನಕ್ಕೆ ಒಳಪಡಬೇಕಾಗಬಹುದು. ಆದುದರಿಂದ ನಾನು ಈಗ ಏಕಾಂಗಿಯಾಗಿಯೇ, ಇಲ್ಲೇ ಸಮೀಪದಲ್ಲಿರುವ ಸ್ವತಂತ್ರಸಂಸ್ಥಾನವಾದ ಪಟ್ಟನವೆಂಬ ನಗರಕ್ಕೆ ಹೋಗಿ ಅಲ್ಲಿಯ ರಾಜನನ್ನು ಆಶ್ರಯಿಸಿ ಒಂದು ಉದ್ಯೋಗವನ್ನು ಸಂಪಾದಿಸಿಕೊಂಡು, ತರುವಾಯ ನಿನ್ನನ್ನು ಕರೆಯಿಸಿಕೊಳ್ಳುತ್ತೇನೆ ಆವರೆಗೂ ನೀನು ಇಲ್ಲೇ ವಾಸಿಸುತ್ತಿರು ನಾನು ಈಗ ಹೊರಡಲು ಅನುಮತಿಸು'' ಎಂದು ಹೇಳಿದನು. ಆ ಮಾತನ್ನು ಕೇಳಿ ವೀರಮತಿಯು ಬೆದರಿಬಿದ್ದು ''ಪ್ರಾಣೇಶ್ವರಾ, ನೀವು ಹೀಗೆ ಶತ್ರುಗಳ ಕಾಪಟ್ಯಕ್ಕೆ ಒಳಗಾಗಿರುವ ಸಂದರ್ಭದಲ್ಲಿ ಪರಸ್ಥಳಕ್ಕೆ ಏಕಾಂಗಿಗಳಾಗಿ ಪ್ರಯಾಣಮಾಡುವುದು ಕ್ಷೇಮವಲ್ಲ ಆದುದರಿಂದ ನನ್ನನ್ನೂ ಜೊತೆಗೆ ಕರೆದುಕೊಂಡು ಹೋಗಬೇಕು'' ಎಂದು ಪ್ರಾರ್ಥಿಸಿದಳು. ವೀರಮತಿಯು ಸಹಜವಾದ ಆ ಕಾರಣಗಳನ್ನು ಕೇಳಿ ಆಕೆಯ ಮನವಿಯನ್ನು ನಿರಾಕರಿಸುವುದು ಜಗದೇವನಿಂದ ಸಾಧ್ಯವಾಗಲಿಲ್ಲ. ಹಾಗೆ ತನ್ನ ತಂಗಿಯೂ ಜಗದೇವನೂ, ಪರಸ್ಥಳಕ್ಕಾಗಿ ಪ್ರಯಾಣ ಹೊರಡುವರೆಂಬ ವೃತ್ತಾಂತವು ಬಿರಜನಿಗೂ ತಿಳಿಯಿತು ಆತನು ಜೊತೆಗೆ ಸ್ವಲ್ಪ ಸೈನ್ಯ ಸಹಾಯವನ್ನು ತೆಗೆದುಕೊಂಡು ಹೋಗಬೇಕೆಂದು ಬಲವಂತಪಡಿಸಿದನು ಆದರೆ ಜಗದೇವನು ಅದಕ್ಕೆ ಸಮ್ಮತಿಸಲಿಲ್ಲ—ಕೊನೆಗೆ ವೀರಮತೀ ಜಗದೇವರು ಎರಡು ದಿವ್ಯಾಶ್ವಗಳನ್ನೇರಿಕೊಂಡು, ಯುದ್ಧಕ್ಕೆ ಉಪಯೋಗವಾಗುವ ಶಸ್ತ್ರಸಾಮಗ್ರಿಗಳನ್ನು ಮಾತ್ರ ತೆಗೆದುಕೊಂಡು ಅಲ್ಲಿಂದ ಪ್ರಯಾಣಮಾಡಿದರು

ಹಾಗೆ ಹೊರಟ ಅವರಿಬ್ಬರೂ ಮಧ್ಯಾಹ್ನದವರೆಗೂ ಪ್ರಯಾಣಮಾಡಿ, ಮಾರ್ಗಮಧ್ಯದಲ್ಲಿ ಸಿಕ್ಕಿದ ಒಂದೂರಿನಲ್ಲಿಳಿದು ಸ್ನಾನ ಭೋಜನಾದಿಗಳನ್ನು ತೀರಿಸಿಕೊಂಡು ವಿಶ್ರಮಿಸಿದರು ಮುಂದೆ ಪಟ್ಟನಕ್ಕೆ ಮಾರ್ಗವಾವುದೆಂದು ಆ ಊರಿನವರನ್ನು ವಿಚಾರಿಸಲು, ಅವರು, ''ಪಟ್ಟನಕ್ಕೆ ಈ ಊರಿನಿಂದ ಎರಡುದಾರಿಗಳಿವೆ. ಒಂದು ಸುಗಮವಾದ ರಾಜಮಾರ್ಗವು; ಮತ್ತೊಂದು ಹತ್ತಿರದ ಮಾರ್ಗ. ಅದು ಅಷ್ಟು ಸುಗಮವಾದುದಲ್ಲ ಅಲ್ಲದೆ ಅಲ್ಲಿ ನರಭಕ್ಷಕಗಳೆಂದು ಪ್ರಸಿದ್ಧವಾದ ಎರಡು ಹೆಬ್ಬುಲಿಗಳು ಪ್ರಯಾಣಿಕರನ್ನು ಹೊಂಚಿ ಸಂಹರಿಸುತ್ತಿರುವುವು ಆದುದರಿಂದ ಆ ಮಾರ್ಗವಾಗಿ ಹೆಚ್ಚು ಜನಗಳು

ಸಂಚರಿಸುತ್ತಲಿಲ್ಲ'' ವೆಂದು ಹೇಳಿದರು. ಆ ಮಾತನ್ನು ಕೇಳಿ ವೀರಮತಿಯು, "ಹಾಗಾದರೆ ನಾವು ಹುಲಿಗಳಿರುವ ಆ ಮಾರ್ಗವಾಗಿಯೇ ಪ್ರಯಾಣ ಮಾಡಿ ದಾರಿಗರಿಗೆ ಉಪದ್ರವಕಾರಿಗಳಾದ ಆ ದುಷ್ಟ ಮೃಗಗಳನ್ನು ಕೊಂದು ಮುಂದಕ್ಕೆ ಹೋಗೋಣ'' ಎಂದು ನುಡಿದಳು. ಜಗದೇವನು ತನ್ನ ಪತ್ನಿಯ ಪರೋಪಕಾರಚಿಂತನೆಗೆ ಪರಮಸಂತೋಷಪಟ್ಟು, ಹಾಗೆಯೇ ಆಗಲೆಂದು ಸಮ್ಮತಿಸಿ, ಇಬ್ಬರೂ ಆ ಮಾರ್ಗವಾಗಿಯೇ ಪ್ರಯಾಣಹೊರಟರು. ಅವರು ಹಾಗೆ ನಾಲ್ಕು ಕ್ರೋಶಗಳಷ್ಟು ಮಾರ್ಗವನ್ನು ಪ್ರಯಾಣಮಾಡುವುದರೊಳಗಾಗಿಯೇ, ಪಕ್ಕದಲ್ಲಿ ಸ್ವಲ್ಪ ದೂರದಿಂದ "ಅಯ್ಯೋ, ಅಯ್ಯೋ, ಈ ಕ್ರೂರಮೃಗಗಳನ್ನು ಕೊಂದು ನಮ್ಮನ್ನು ಪ್ರಾಣಸಹಿತ ಕಾಪಾಡುವ ಪುಣ್ಯಾತ್ಮರು ಯಾರೂ ಇಲ್ಲವೇ?'' ಎಂಬ ಒಂದು ಆರ್ತನಾದವು ಅವರ ಕಿವಿಗೆ ಬಿದ್ದಿತು. ಒಡನೆ ಜಗದೇವ ವೀರಮತಿಯರಿಬ್ಬರೂ ತಮ್ಮ ಕುದುರೆಗಳನ್ನು ಆ ಕಡೆಗೆ ತಿರುಗಿಸಿ ಓಡಿಸಿದರು. ಹಾಗೆ ಸ್ವಲ್ಪ ದೂರ ಹೋಗುವಷ್ಟರಲ್ಲೇ ಒಂದು ದೊಡ್ಡ ಮರದಮೇಲೆ ಕುಳಿತು ಗಡಗಡನೆ ನಡುಗುತ್ತಾ, ಭಯಾಕ್ರಾಂತರಾಗಿದ್ದ ಇಬ್ಬರು ಮನುಷ್ಯರು ಅವರ ಕಣ್ಣಿಗೆ ಬಿದ್ದರು ಮರದಕೆಳಗೆ ದೊಡ್ಡದೊಂದು ಹುಲಿಯು ಆ ಎಂದು ಬಾಯಿಬಿಟ್ಟು ಭಯಂಕರ ಗರ್ಜನೆಯಿಂದ ಬೆದರಿಸುತ್ತಾ, ಅವರನ್ನು ಕೆಳಕ್ಕೆ ಕೆಡಹಿ ಭಕ್ಷಿಸಬೇಕೆಂದು ಬಾಲವನ್ನಪ್ಪಳಿಸುತ್ತಾ, ಹಲ್ಲು ತುಟಿಗಳನ್ನು ನಾಲಿಗೆಯಿಂದ ಸವರಿಕೊಳ್ಳುತ್ತಾ, ಕೋರೆಹಲ್ಲುಗಳನ್ನು ಕಿರಿದು ಮೊದಲೇ ಭಯಗೊಂಡಿದ್ದ ಅವರನ್ನು ಮತ್ತೂ ಭಯಾಕ್ರಾಂತರನ್ನಾಗಿ ಮಾಡುತ್ತಿದ್ದಿತು ಅದನ್ನು ಕಂಡು ಜಗದೇವ ವೀರಮತಿಯರು, ಒಂದು ಪೊದೆಯ ಹಿಂದೆ ಮರೆಯಾಗಿದ್ದು ಆ ದುಷ್ಟಪ್ರಾಣಿಯ ಬೆನ್ನಿಗೆ ತಗುಲುವಂತೆ ಹರಿತವಾದ ಬಾಣಗಳನ್ನು ಬಿಟ್ಟರು. ಹುಲಿಯು ಆ ಪೆಟ್ಟಿಗೆ ಕೆರಳಿ, ಆ ಮನುಷ್ಯರ ಕಡೆಯಿಂದ ತನ್ನನ್ನು ನೋಯಿಸಿದ ಈ ದಂಪತಿಗಳ ಕಡೆಗೆ ತಿರುಗಿತು ಆಗ ಬೆದರದೆ ಜಗದೇವನು ಮತ್ತೊಂದು ಬಾಣವನ್ನು ಬಿಟ್ಟನು. ಅದು ತಪ್ಪಿಹೋಗಲು ಹುಲಿಯು ಭಯಂಕರ ಗರ್ಜನೆಯಿಂದ ಅವನ ಕಡೆಗೆ ಹಾರಿತು ಒಡನೆ ವೀರಮತಿಯು ತನ್ನ ಕೈಯಲ್ಲಿನ ಬಲ್ಲೆಯನ್ನು ಬಲವಾಗಿ ಅದರ ಹೊಟ್ಟೆಯಲ್ಲಿ ದೂರಿಸಲು, ಆ ಕ್ರೂರಜಂತುವು, ಮರಣವೇದನೆಯಿಂದ ಅಬ್ಬರಿಸುತ್ತಾ, ಭೂಮಿಯಮೇಲೆ ಬಿದ್ದಿತು. ಅಷ್ಟರಲ್ಲಿ ಪಕ್ಕದ ಪೊದೆಯಲ್ಲಿ

ಅಡಗಿದ್ದ ಹೆಣ್ಣುಹುಲಿಯು ರೋಷಾವೇಶದಿಂದ ಹೊರಕ್ಕೆ ಬಂದು ಅವರ ಕಡೆಗೆ ನುಗ್ಗಿತು. ಆ ಶೂರದಂಪತಿಗಳು ಅದನ್ನೂ ತೀರಿಸಿದರಾದರೂ, ಅದರ ಕಾಲುಗುರುಗಳಿಂದ ಗಾಯಪಟ್ಟು ಜಗದೇವನ ಕುದುರೆಯು ಕೆಳಕ್ಕೆ ಬಿದ್ದು ಪ್ರಾಣಬಿಟ್ಟಿತು. ತಮ್ಮ ಪ್ರಯಾಣದಲ್ಲಿ ಅತ್ಯುಪಯುಕ್ತವಸ್ತುವಾಗಿದ್ದ ಆ ಉತ್ತಮಾಶ್ವದ ಮರಣಕ್ಕಾಗಿ ಆ ದಂಪತಿಗಳು ಅತಿಶಯ ಮರುಗಿದರು.

ಪ್ರಾಣಭಯದಿಂದ ಮರದಮೇಲಡಗಿದ್ದ ಆ ಇಬ್ಬರು ಮನುಷ್ಯರೂ ಆ ಕ್ರೂರಜಂತುಗಳು ಸತ್ತುದನ್ನು ಕಂಡು ಧೈರ್ಯಗೊಂಡು ಕೆಳಗಿಳಿದು ಬಂದರು. ಜಗದೇವನು ನೀವಾರೆಂದು ಪ್ರಶ್ನಿಸಲು ಅವರು, "ಧಾರಾನಗರಿಯ ರಾಜನಾದ ಉದಯಾದಿತ್ಯ ಮಹಾರಾಜನ ಎರಡನೆಯ ಮಗನಾದ ಜಗದೇವನು ಈಗ್ಗೆ ಇಪ್ಪತ್ತು ದಿನಗಳಹಿಂದೆ, ಅರಮನೆಯನ್ನು ಬಿಟ್ಟು ಯಾರಿಗೂ ಹೇಳದೆ ಎಲ್ಲೋ ಹೊರಟುಹೋಗಿದ್ದಾನೆ ಆತನನ್ನು ಹುಡುಕಲಿಕ್ಕಾಗಿ ಆತನ ತಾಯಿಯಾದ ಸೋಳಂಕೀರಾಣಿಯು ಧೀರಸಿಂಹನೆಂಬ ಮಂತ್ರಿಯನ್ನು ಕಳುಹಿಸಿದಳು. ನಾವು ಧಾರಾನಗರದ ಹತ್ತಿರದಲ್ಲಿನ ಒಂದು ಹಳ್ಳಿಯವರು. ನಮ್ಮಾಪ್ರವಾಸದಲ್ಲಿ ಮಿಕ್ಕವರಿಗಿಂತಲೂ ಮುಂಚಿತವಾಗಿ ಹೋಗಿ ಮುಂದಿನ ಮಜಲಿನಲ್ಲಿ ಭೋಜನಾದಿಗಳನ್ನು ಸಿದ್ಧಪಡಿಸಲಿಕ್ಕಾಗಿ ಧೀರಸಿಂಹನು ನಮ್ಮನ್ನು ಕಳುಹಿಸಿದನು. ನಾವು ಮುಂದಿನ ಗ್ರಾಮಕ್ಕೆ ಹೋಗುವಾಗ ಮಾರ್ಗ ತಪ್ಪಿ, ಈ ಕ್ರೂರಮೃಗಗಳ ಬಾಯಿಗೆ ತುತ್ತಾಗುತ್ತಿದ್ದೆವು. ಧರ್ಮಾತ್ಮರಾದ ನಿಮ್ಮಿಂದ, ಇಂದು ನಮ್ಮ ಪ್ರಾಣ ಉಳಿಯಿತು" ಎಂದು ಪಾದಕ್ಕೆ ಬಿದ್ದರು. ಆ ಮಾತನ್ನು ಕೇಳಿ ಜಗದೇವನು ಅತ್ಯಂತ ಸಂತೋಷಪಟ್ಟು, ಅವರಿಂದ ತನ್ನ ತಾಯಿಯ ಕ್ಷೇಮವಾರ್ತೆಯನ್ನೂ ತಿಳಿದು, ತಮ್ಮನ್ನು ಧೀರಸಿಂಹನಿರುವಲ್ಲಿಗೆ ಕರೆದೊಯ್ಯಿರೆಂದು ಅವರಿಗೆ ಹೇಳಿದನು. ತಮ್ಮನ್ನು ಅಪಾಯದಿಂದ ತಪ್ಪಿಸಿ ಪ್ರಾಣದಾನ ಮಾಡಿದವರು ತಮ್ಮ ರಾಣಿಯ ಮಗ ಸೊಸೆಯರೇ ಎಂಬ ಸಂಗತಿಯನ್ನು ತಿಳಿದು ಆ ಸೇವಕರು, ಪರಮಾನಂದದಿಂದ, ಧೀರಸಿಂಹನಿದ್ದ ಗ್ರಾಮದ ಕಡೆಗಾಗಿ ಹೊರಟರು. ಮುಂದೆ ಒಬ್ಬ ಸೇವಕ. ಅವನ ಹಿಂದೆ ಆ ದಂಪತಿಗಳು. ಅವರ ಹಿಂದೆ ಇನ್ನೊಬ್ಬ ಸೇವಕ. ಹೀಗೆ ಅವರು ಆ ಕಾಡಿನಲ್ಲಿ ಪ್ರಯಾಣಮಾಡುತ್ತಾ, ಮಾರ್ಗಕ್ರಮಣ ಮಾಡುತ್ತಿರಲು, ಎದುರಿಗೆ ಯಾರೋ ಎಂಟುಹತ್ತುಮಂದಿ ಕುದುರೆಯ ಸವಾರರು

ಬರುತ್ತಿದ್ದಂತೆ ಕಾಣಿಸಿತು ಅವರು ತಮ್ಮ ಸಹಾಯಕರಾದ ಧೀರಸಿಂಹನ ಪರಿವಾರದವರಿರಬಹುದೆಂದು ನನೆಸಿ ಜಯದೇವಾದಿಗಳು ಅಲ್ಲೇ ನಿಂತರು ಆದರೆ ಸಮೀಪಕ್ಕೆ ಬಂದಮೇಲೆ ನೋಡಲಾಗಿ ಅವರು ತಮ್ಮ ಸಹಾಯಕರಲ್ಲದೆ, ಶತ್ರುಪಕ್ಷದವರೆಂದು ತಿಳಿಯಬಂದಿತು. ಒಡನೆ ಜಗದೇವ ವೀರಮತಿಯರು ಆತ್ಮರಕ್ಷಣೆಗಾಗಿ ಆಯುಧಗಳನ್ನು ಸಿದ್ಧಪಡಿಸಿಕೊಂಡರು.—

ಅಷ್ಟರಲ್ಲಿ ಆ ಸವಾರರೂ ಬಂದು ಅವರನ್ನು ಸುತ್ತಿಕೊಂಡರು. ತಾವಿಬ್ಬರೂ ಅವರು ಎಂಟುಮಂದಿಯೂ ಇದ್ದುದರಿಂದ ಅವರೊಂದಿಗೆ ಯುದ್ಧಮಾಡಿ ಗೆಲ್ಲುವುದು ಅಸಾಧ್ಯವೆಂದು ಯೋಚಿಸಿ, ಜಗದೇವನು, ಅವರು ತಮ್ಮನ್ನು ಸಮೀಪಿಸದಂತೆ ಖಡ್ಗವನ್ನು ತಿರುಗಿಸಿಕೊಂಡಿರುವಂತೆ ತನ್ನ ಪತ್ನಿಗೆ ಸೂಚಿಸಿ ತಾನೂ ಹಾಗೆಯೇ ಮಾಡತೊಡಗಿದನು ಅವರ ಕರಚಮತ್ಕೃತಿಯೆಂಥಾದ್ದೋ! ಆ ಘಾತುಕರು ಬಿಡುತ್ತಿದ್ದ ಬಾಣಗಳಲ್ಲಿ ಒಂದಾದರೂ ಆ ದಂಪತಿಗಳಿಗೆ ತಗುಲದೆ, ಎಲ್ಲವೂ ಆ ಕತ್ತಿಗಳಿಗೆ ತಗುಲಿ ಕೆಳಕ್ಕೆ ಬೀಳುತ್ತಿದ್ದವು ಆದರೆ ಹೀಗೆ ಬಹುಹೊತ್ತು ಆತ್ಮರಕ್ಷಣೆಮಾಡಿಕೊಳ್ಳುವುದು ಅಸಾಧ್ಯವೆಂದು ತೋರಿತು ಆಗ ವೀರಮತಿಯು ತಮ್ಮನ್ನು ಸುತ್ತಿಕೊಂಡಿದ್ದ ಅವರ ಆವರಣವನ್ನು ಭೇದಿಸಿಕೊಂಡು ಹೊರಕ್ಕೆ ಹೋಗುವುದು ಉತ್ತಮವೆಂದು ತನ್ನ ಪತಿಗೆ ಸೂಚಿಸಿದಳು ಮತ್ತು ತಾನೂ ಆ ಶತ್ರುದಳದ ಮುಖ್ಯಸ್ಥನಿಗೆ ಗುರಿಯಿಟ್ಟು ಬಾಣವನ್ನು ಬಿಟ್ಟಳು ಆತನು ಅದನ್ನು ತಪ್ಪಿಸಿಕೊಂಡನಾದರೂ, ಆ ಏಟಿನಿಂದ ಅವನ ಕುದುರೆಯು ನೆಲಕ್ಕುರುಳಿತು. ಆತನೂ ನೆಲಕ್ಕೆ ಬಿದ್ದು ಮೂರ್ಛಿತನಾದನು ಅದನ್ನು ಕಂಡು, ಮಿಕ್ಕವರೆಲ್ಲರೂ ಒಂದೇ ಸಾರಿಗೆ ವೀರಮತಿಯ ಮೇಲೇರಿಬಂದರು ಅಷ್ಟರಲ್ಲಿ ಆಕೆಯ ಕತ್ತಿಯು ಕೈಯಿಂದ ಜಾರಿ ಕೆಳಕ್ಕೆ ಬಿದ್ದಿತು ಅದನ್ನು ತೆಗೆದುಕೊಳ್ಳುವುದಕ್ಕಾಗಿ ಬಗ್ಗಿರಲು, ಅವರಲ್ಲಿ ಒಬ್ಬನು ಬಿಟ್ಟ ಎರಡು ಬಾಣಗಳು ಆಕೆಯ ಕೈಗೊಂದು ಕಾಲಿಗೊಂದು ಚುಚ್ಚಿಕೊಂಡುವು ಅದನ್ನು ಕೀಳುವುದಕ್ಕಾಗಿ ಪ್ರಯತ್ನಿಸುತ್ತಿರುವಲ್ಲ, ಬೇರೊಬ್ಬನು ಬಂದ ಆಕೆಯ ಮುಡಿಯನ್ನು ಹಿಡಿದುಕೊಂಡನು ತನ್ನ ಪತ್ನಿಯನ್ನು ಸೋಕಿದ ಆ ನೀಚನನ್ನು ಕಂಡು ಜಗದೇವನು ರೋಷಾರುಣಲೋಚನನಾಗಿ ಹಲ್ಲುಗಳನ್ನು ಕಡಿಯುತ್ತಾ, ಅವನ ಎರಡು ಹಸ್ತಗಳನ್ನೂ ತನ್ನ ಕೈಖಡ್ಗದಿಂದ ತುಂಡರಿಸಿದನು. ಎಲ್ಲರೂ

ಕ್ಷಣಕಾಲ ಭ್ರಾಂತರಾಗಿ ನಿಂತರು. ಈ ಅಪಘಾತದಿಂದ ವೀರಮತಿಯು ಮೂರ್ಛೆ ಹೋದಳು. ಜಗದೇವನು ಮೂರ್ಛೆಗೊಂಡ ಪತ್ನಿಯನ್ನು ರಕ್ಷಿಸಿಕೊಂಡು, ಅವರೊಂದಿಗೂ ಪರಾಕ್ರಮದಿಂದ ಹೋರಾಡುತ್ತಾ ಇದ್ದನು. ಅಷ್ಟರಲ್ಲಿ ಧೀರಸಿಂಹನು ಇಪ್ಪತ್ತೈದುಮಂದಿ ಸವಾರರೊಂದಿಗೆ ಆ ಮಾರ್ಗವಾಗಿಯೇ ಬಂದನು. ಆತನಿಗೆ ಒಡನೆಯೇ ಜಗದೇವನ ಪರಿಚಯವು ಸಿಕ್ಕಿಹೋಯಿತು. ಆಗಲಾ ಸೇನಾಪತಿಯು ತನ್ನ ದಳದ ಸಹಾಯದಿಂದ ಅವರೆಲ್ಲರನ್ನೂ ಕೈದುಮಾಡಿಸಿ, ಮೂರ್ಛೆಗೊಂಡಿದ್ದ ವೀರಮತಿಯನ್ನು ಶೈತ್ಯೋಪಚಾರದಿಂದ ಎಚ್ಚರಗೊಳಿಸಿದನು. ಮತ್ತು, ಜಗದೇವನನ್ನು ಕುರಿತು, "ಕುಮಾರಾ, ಇದೆಲ್ಲವೂ ನಿನ ಬಲತಾಯಿಯು ಮಾಡಿದ ಘಾತುಕತನಗಳು. ಇವರು ನಿನ್ನನ್ನು ಬಂಧಿಸಿ ಕೊಲ್ಲುವುದಕ್ಕಾಗಿ ಆಕೆಯಿಂದ ಕಳುಹಿಸಲ್ಪಟ್ಟವರೇ! ಇನ್ನು, ಪತ್ನಿಯೊಂದಿಗೆ ಹೊರಟುಬಂದು ನಿನ್ನ ಸವತಿತಾಯಿಯು ನಿನ್ನ ನಾಶಕ್ಕಾಗಿ ಮಾಡಿದ ಈ ಕಾರ್ಯಗಳನ್ನೆಲ್ಲಾ ನಿಮ್ಮ ತಂದೆಗೆ ತಿಳುಹಿಸು. ನಿನ್ನ ವಿಷಯವಾಗಿ ನಾನೂ ಸಾಕ್ಷ್ಯಕೊಡುತ್ತೇನೆ" ಎಂದು ನುಡಿದನು. ಆದರೆ ಜಗದೇವನು,—"ಮಂತ್ರಿವರ್ಯ, ನಾನು ಈಗ ಊರಿಗೆ ಬರುವುದರಿಂದ ನಿಜಸ್ಥಿತಿಯನ್ನು ಹೇಳಿ ನಮ್ಮ ಬಲತಾಯಿಯನ್ನು ಅವಮಾನಗೊಳಿಸಿದಂತಾಗುವುದು. ಅಲ್ಲದೆ, ನಾನು ರಾಜಧಾನಿಯಿಂದ ಹೊರಡುವಾಗ್ಗೆ ನನ್ನ ಬಾಹುಬಲದಿಂದ ಕೀರ್ತಿಪ್ರತಿಷ್ಠೆ ಐಶ್ವರ್ಯಾದಿಗಳನ್ನು ಪಡೆದಲ್ಲದೆ, ಪುನಃ ನಗರಪ್ರವೇಶಮಾಡುವುದಿಲ್ಲವೆಂದು ಪ್ರತಿಜ್ಞೆಮಾಡಿದ್ದೇನೆ. ಆದುದರಿಂದ ಈಗ ನಾನು ಬರಲು ಸಮ್ಮತಿಸಲಾರೆನು. ನಾನು ಹೀಗೆ ದೇಶಾಂತರಗತನಾಗಿದ್ದರೂ, ನಮ್ಮ ಮಾತೆಯ ವಿಚಾರದಲ್ಲಿ ಮಾತ್ರ ದಯಯಿಟ್ಟು, ಆಕೆಯ ಯೋಗಕ್ಷೇಮಗಳನ್ನು ವಿಚಾರಿಸಿಕೊಳ್ಳುತ್ತಿರಬೇಕೆಂದು" ಆ ಮಂತ್ರಿಯನ್ನು ಪ್ರಾರ್ಥಿಸಿಕೊಂಡನು. ಆತನೂ ಆಗಲೆಂದೊಪ್ಪಿ, ಅವರಿಂದ ಅನುಮತಿಪಡೆದು ಧಾರಾನಗರಿಯನ್ನು ಸೇರಿ ಸೋಳಂಕೀರಾಣಿಗೆ ಮಗನ ಕ್ಷೇಮವಾರ್ತೆಯನ್ನು ಹೇಳಿದನು. ಇತ್ತ ಆ ದಂಪತಿಗಳು, ಮಾರ್ಗದಲ್ಲಿ ಇನ್ನೂ ಅನೇಕ ಕಷ್ಟಸಂಕಟಗಳನ್ನು ಅನುಭವಿಸಿ, ಕೆಲವು ದಿನಗಳ ಮೇಲೆ ಪಟ್ಟನವೆಂಬ ನಾಮಾಂತರವುಳ್ಳ ಅಣಹಿತಪುರವೆಂಬ ರಾಜಧಾನಿಯನ್ನು ಸೇರಿದರು.



## ಅಧ್ಯಾಯ ೫ "ಪಾತಿವ್ರತ್ಯವೇ-ರಕ್ಷಾಕವಚವು"

ಪ್ರಪಂಚದಲ್ಲಿ ಸಜ್ಜನರೂ ಇರುವರು ದುರ್ಜನರೂ ಇರುವರು. ದುರ್ಜನರು, ಯಾವಾಗಲೂ ದುಷ್ಟಕಾರ್ಯಗಳಲ್ಲೇ ನಿರತರಾಗಿದ್ದರೂ, ಸುಳ್ಳುಸಾಕ್ಷ್ಯ ಅನ್ಯಾಯ ಕಳವು ಮೋಸ ಕ್ಷುದ್ರತನ ಮುಂತಾದುವುಗಳಲ್ಲೇ ಆಸಕ್ತರಾಗಿರುತ್ತಿದ್ದರೂ, ಗೊತ್ತಾದ ಒಂದು ಧರ್ಮಕ್ಕೆ-ಒಂದು ನ್ಯಾಯಕ್ಕೆ ಒಂದು ಮಾತಿಗೆ ಕಟ್ಟುಬಿದ್ದು ನಡೆಯುದೆ ಇದ್ದರೂ, ಮನಸ್ಸು, ವಾಕ್ಕು, ಕಾರ್ಯಗಳಲ್ಲಿ ಐಕ್ಯತೆಯನ್ನು ಉಂಟಾಗಿರದೆ ಹೇಯಭಾವದಿಂದ ನಡೆಯುತ್ತಿದ್ದರೂ ಅವರಲ್ಲಿ ದ್ರವ್ಯ ಭೂಮಿಕಾಣಿಗಳೂ-ವಸ್ತ್ರವಡವೆಗಳೂ ದಿನದಿನಕ್ಕೆ ಅಧಿಕಾಧಿಕವಾಗಿ ಬಂದು ಸೇರುತ್ತಾ ಅವರು ಸುಖಸೌಭಾಗ್ಯಗಳನ್ನು ಅನುಭವಿಸುತ್ತಿರುವಂತೆ ತೋರುತ್ತಿರುವುದೇಕೆ? ಸಜ್ಜನರು, ಸತ್ಯವೆಂದೂ ಭೂತದಯೆ ಪರೋಪಕಾರಗಳೆಂದೂ, ದಯೆದಾಕ್ಷಿಣ್ಯಗಳೆಂದೂ ಬೆದರಿ ನಯಭಯದಿಂದ ನಡೆಯುತ್ತಾ ದೇವರು-ದೇವರೆಂದು ಹಲುಬಿಕೊಳ್ಳುತ್ತಿದ್ದರೂ ಅವರೇಕೆ ಹೇಳಲಾಗದ ಕಷ್ಟಕಾರ್ಪಣ್ಯಗಳಿಗೆ ಒಳಗಾಗಿ ದಿನದಿನಕ್ಕೆ ಪ್ರಾಪಂಚಿಕವಾದ ಐಶ್ವರ್ಯ-ಧನಕನಕಾದಿಗಳನ್ನು ಕಳೆದುಕೊಂಡು ನಿರ್ಗತಿಕರಾಗುತ್ತಿರುವುದು? ಇದನ್ನು ನೋಡಿದರೆ ದೇವರ ರಾಜ್ಯದಲ್ಲಿ ನ್ಯಾಯ ವಿಷಯದಲ್ಲಿ ಸರಿಯಾದ ದಕ್ಷತೆಯು ಏರ್ಪಟ್ಟಿಲ್ಲವೆನ್ನಬಹುದಾಗುತ್ತದೆಯಲ್ಲವೆ?-ಆದರೆ, ನಿಶ್ಚಯಸಂಗತಿಯು ಹಾಗಿಲ್ಲ. ಲೋಕದಲ್ಲಿ ಉನ್ನತಿಯಮಾರ್ಗವೇ ಕಡಿದಾದುದು ಅದಕ್ಕೆ ಏರುವುದರಲ್ಲಿ ಮನುಷ್ಯನು ಅವ್ಯಕ್ತಲಕ್ಷ್ಯಗಳನ್ನು ಅನುಸರಿಸಿ ನಡೆಯಬೇಕಾಗುತ್ತದೆ ಸತ, ಶಾಂತತೆ, ವಿನಯ, ಪರೋಪಕಾರ, ದೇವರು, ದೇಶ, ಧರ್ಮ, ನ್ಯಾಯ ಮುಂತಾದುವುಗಳೆಲ್ಲವೂ ಅವ್ಯಕ್ತ ಲಕ್ಷ್ಯಗಳು ಬಹುಕಷ್ಟಸಾಧ್ಯಗಳಾದ ಈ ಲಕ್ಷ್ಯಗಳನ್ನು ಸಾಧಿಸುವುದರಲ್ಲಿ ಮನುಷ್ಯನು ಅನೇಕ ದುಃಖಗಳನ್ನು ಅನುಭವಿಸಬೇಕಾದುದು ತಪ್ಪದು!

**ಶ್ಲೋಕ:— ಕ್ಲೇಶೋಧಿಕತರಸ್ತೇಷಾ ಮವ್ಯಕ್ತಾಸಕ್ತಚೇತಸಾಂ |**

**ಅವ್ಯಕ್ತಾಹಿಗತಿರ್ದುಃಖಂ ದೇಹವದ್ಭಿರವಾಪ್ಯತೇ ||**

"ಅವ್ಯಕ್ತತತ್ವದಲ್ಲಿ ಚಿತ್ತವನ್ನು ಇಟ್ಟು ಉಪಾಸನೆ ಮಾಡುವವರಿಗೆ ಶ್ರಮಅಧಿಕವು. ಅವ್ಯಕ್ತವನ್ನು ಅನುಸರಿಸಿದ ಗತಿಯು ದೇಹವಂತರಾದ

ಪ್ರಾಣಿಗಳಿಂದ ಸಾಧಿಸುವುದು ಮಹಾಶ್ರಮಕರವಾದುದು'' ಎಂದು ಶ್ರೀಕೃಷ್ಣ ಪರಮಾತ್ಮನೇ ಅಪ್ಪಣೆಕೊಡಿಸಿರುತ್ತಾನಲ್ಲವೆ!—ಹಾಗಲ್ಲದೆ, ಐಶ್ವರ್ಯ ಧನಪದವಿಗಳನ್ನು ಗಳಿಸುವಿಕೆಯು ವ್ಯಕ್ತಲಕ್ಷ್ಯವನ್ನುಳ್ಳುದು. ಇದರ ಸಾಧನೆಯಲ್ಲೇ ದೃಷ್ಟಿಯುಳ್ಳ ಮನುಷ್ಯನು, ಸಮಯೋಚಿತವಾಗಿ ನಡೆಯುವನು ಅವನ ಲಕ್ಷ್ಯವು ಅವುಗಳನ್ನು ಹೊಂದಿ ಭೌತಿಕ ಸುಖಭೋಗಗಳನ್ನು ಅನುಭವಿಸುವಿಕೆಯೇ ಅಲ್ಲದೆ, ಸತ್ಯಧರ್ಮ, ನೀತಿ-ನ್ಯಾಯಗಳ ಬಂಧಕಗಳಿಗೆ ಒಳಪಟ್ಟು ನಡೆಯಬೇಕೆಂಬುದಲ್ಲ. ಆದುದರಿಂದಲೇ ಅವನ ಮಾರ್ಗವು ಸುಗಮವಾಗಿರುವಂತೆ ತೋರುವುದು! ತೋರುವುದಷ್ಟೆ! ಅವನು ಐಶ್ವರ್ಯಾದಿಗಳನ್ನು ಗಳಿಸಿ, ಮಹಲುಗಳಲ್ಲಿ ವಾಸಿಸಿ, ಭಕ್ಷ್ಯಭೋಜ್ಯಗಳನ್ನುಂಡು ಸುಖವಾಗಿರುವಂತೆ ತೋರುತ್ತಿರುವನು. ಆದರೆ, ನಮ್ಮ ದೇಶದ ಪೂರ್ವಿಕ ಮಹನೀಯರು ಅನುಸರಿಸಿ ಹೋದ ಮಾರ್ಗವು ಇದಲ್ಲ ದೂರದರ್ಶಿಗಳಾದ ಅವರು, ತಾವು ಮಾಡುವ ಕಾರ್ಯವನ್ನು ಮಾತ್ರವಲ್ಲದೆ, ಅದರ ಪರಿಣಾಮವನ್ನೂ ಯೋಚಿಸುತ್ತಿದ್ದರು. ಅವರು ವ್ಯಕ್ತವಾದ ನಾಲ್ಕೆಂಟು ನಾಣ್ಯಗಳ ಲಾಭವನ್ನು ಮಾತ್ರವಲ್ಲದೆ, ಅವನ್ನು ಗಳಿಸುವಿಕೆಯಲ್ಲಿ ಮನುಷ್ಯನ ಜೀವಿತದ ಮೇಲುಂಟಾಗುತ್ತಿದ್ದ-ಗುಣನಡತೆಗಳ ಬೆಳೆವಣಿಗೆಯ ಮೇಲುಂಟಾಗುತ್ತಿದ್ದ ಪರಿಣಾಮವನ್ನೂ ಯೋಚಿಸುತ್ತಿದ್ದರು ಆದುದರಿಂದಲೇ ಮೇಲ್ಕಂಡ ಅವ್ಯಕ್ತಲಕ್ಷ್ಯಗಳನ್ನು ಅನುಸರಿಸಿ ಹೋಗುತ್ತಿದ್ದ ಸಜ್ಜನರು ಪ್ರಪಂಚದೃಷ್ಟಿಯಿಂದ ಸದಾ ದಾರಿದ್ರ್ಯ-ಕಷ್ಟ ಸಂಕಟಗಳಲ್ಲಿ ಸಿಕ್ಕಿ ನರಳುತ್ತಿದ್ದಂತೆಯೂ, ವ್ಯಕ್ತಲಕ್ಷ್ಯವನ್ನಿಟ್ಟುಕೊಂಡು ನ್ಯಾಯಾನ್ಯಾಯಗಳನ್ನು ಗಮನಿಸದ ಧನಕನಕಾದಿಗಳನ್ನು ಗಳಿಸಿದವರು, ಲೌಕಿಕ ದೃಷ್ಟಿಯಿಂದ ಸುಖಿಗಳಾದಂತೆಯೂ ಲೋಕವು ತಿಳಿಯುತ್ತಿರುವುದು ಆದರೆ, ಮನುಷ್ಯನು ನಿಜವಾಗಿ ಪಡಬೇಕಾದ ಸುಖವು 'ಮನಶ್ಶಾಂತಿ' ಎಂಬ ಲಕ್ಷ್ಯವನ್ನುಳ್ಳುದಾದರೆ, ಆಗ, ಸುಖವಾಗಿರುವನು ತೋರಿಕೆಗೆ ದರಿದ್ರನಾಗಿರುವ ಸಜ್ಜನನೋ, ಅಥವಾ ತೋರಿಕೆಗೆ ಲಕ್ಷ್ಮೀಪುತ್ರನಂತಿರುವ ದುರಾಚಾರಿಯಾದ, ಪಾಪಕರ್ಮನಿರತನಾದ ದುರ್ಜನನೋ ಎಂಬ ಸಂಗತಿಯು ವಿಶದವಾಗುವುದು. ಅಂತಹ ಐಶ್ವರ್ಯಸಂಪನ್ನನು ಪೂರ್ವಪುಣ್ಯಪರಿಪಾಕದಿಂದ ಸುಗುಣಿಯೂ ಸಜ್ಜನನೂ, ದೈವಭಕ್ತನೂ, ಆಸ್ತಿಕನೂ ಆಗಿದ್ದರೆ ಕೇಳುವುದೇನು! ಸುವರ್ಣಪುಷ್ಪಕ್ಕೆ ಸುವಾಸನೆಯೂ ಉಂಟಾದಂತೆ ಇರುವುದಲ್ಲವೆ ಅದು?

ನಮ್ಮ ಕಥಾನಾಯಿಕೆಯು ತನ್ನ ಪತಿಯೊಂದಿಗೆ ಅಣಹಿತಪುರದ ಬಹಿಃ ಪ್ರದೇಶವನ್ನು ಸೇರಿದ ಸಂಗತಿಯು ವಾಚಕಮಹಾಶಯರಿಗೆ ತಿಳಿದಿರುವುದಲ್ಲವೆ? ಆ ಪುರಕ್ಕೆ ಸಮೀಪವಾಗಿಯೇ ಸಹಸ್ರಲಿಂಗತಟಾಕವೆಂಬ ಸ್ವಚ್ಛ ಜಲದ ಒಂದು ಸರೋವರವಿದ್ದಿತು ಆ ಊರಿನವರೆಲ್ಲರೂ ಕುಡಿಯುವ ನೀರಿಗಾಗಿ ಆ ತಟಾಕದ ಸಮೀಪಕ್ಕೆ ಬರುವುದು ಪದ್ಧತಿಯಾಗಿದ್ದಿತು ಜಗದೇವನು ತನ ಪತ್ನಿಯನ್ನು ಮೇಲ್ಕಂಡ ತಟಾಕದ ಸಮೀಪದಲ್ಲಿ ಕೂರಿಸಿ, ವಾಸಕ್ಕೆ ಯೋಗ್ಯವಾದ ಒಂದು ಮನೆಯನ್ನು ನೋಡಿಕೊಂಡು ಬರುವುದಕ್ಕಾಗಿ ಊರಿನೊಳಕ್ಕೆ ಹೋದನು

ಜಗದೇವನು ಊರೊಳಕ್ಕೆ ಹೋದ ಸ್ವಲ್ಪಹೊತ್ತಿನೊಳಗಾಗಿಯೇ ಕೆರೆಗೆ ನೀರಿಗಾಗಿ ಒಬ್ಬ ಹಂಗಸು ಬಂದಳು ಆಕೆಯು ಅಲ್ಲೇ ಕುಳಿತಿದ್ದ ವೀರಮತಿಯನ್ನು ಕಂಡು ಆಕೆಯೊಂದಿಗೆ ಸಂಭಾಷಣೆಗೆ ತೊಡಗಿ ಆಕೆಯ ಹೆಸರು, ಆಕೆಯ ಗಂಡನಹೆಸರು, ಊರಹೆಸರು, ಮಾವ ಮತ್ತು ತಂದೆಯವರ ಹೆಸರು, ಮುಂತಾದ ಸಂಗತಿಗಳಲ್ಲೆಲ್ಲಾ ವಿಚಾರಿಸಿ ತಿಳಿದುಕೊಂಡು, ನೀರನ್ನು ತೆಗೆದುಕೊಂಡು ಹೊರಟು, ಆವೃತ್ತಾಂತವನ್ನೆಲ್ಲ ತನ್ನ ಯಜಮಾನಿಯಲ್ಲಿ ತಿಳಿಸಿದಳು. ಆ ಕಾಲದಲ್ಲಿ ಆಪಟ್ಟಣವು ಹನ್ನೆರಡು ಕೋಶಗಳ ವೈಶಾಲ್ಯವುಳ್ಳದಾಗಿ ಬಹು ರಮಣೀಯವಾದುದಾಗಿದ್ದಿತು. ಜಯಸಿಂಗುಸಿದ್ಧರಾಜು ಎಂಬಾತನು ರಾಜ್ಯಾಧಿಪತ್ಯವನ್ನು ವಹಿಸಿದ್ದನು ಆತನು ಧರ್ಮಾತ್ಮನೇ ಆದರೂ, ತನ್ನ ಕೈಕೆಳಗಿನ ಅಧಿಕಾರಿಗಳಮೇಲೆ ದಕ್ಷತೆಯಿಂದ ವಿಚಾರ ನಡೆಯಿಸದೆ, ನಂಬಿಕೆಯಿಂದ ಇದ್ದುದರಿಂದ ಅಧಿಕಾರಿಗಳು ಮನಬಂದಂತೆ ನಡೆಯತೊಡಗಿ ಆ ಪಟ್ಟಣವು ಅನೇಕ ಅನ್ಯಾಯಗಳಿಗೆ ನೆಲೆಮನೆಯಾಗಿದ್ದಿತು. ಆ ಪಟ್ಟಣದ ರಕ್ಷಣೆಗೆ ಡುಂಗರಸೀ ಎಂಬ ಒಬ್ಬ ಕೊತ್ವಾಲನು ನಿಯಮಿತನಾಗಿದ್ದನು ಅವನು ದುರಾಚಾರಿಯೂ ಮದ್ಯಪಾಯಿಯೂ ಆಗಿ ಚೋರರಿಗೆ ಪ್ರೋತ್ಸಾಹಕೊಟ್ಟು, ಅದರಲ್ಲಿ ಭಾಗವನ್ನು ಹೊಂದಿ ಧನವನ್ನು ಸಂಗ್ರಹಿಸುತ್ತಿದ್ದನು ಸಾಲದುದಕ್ಕೆ ಅವನು ವೇಶ್ಯಾಂಗನಾಸಕ್ತನಾಗಿ, ಅನೇಕಮಂದಿ ವೇಶ್ಯೆಯರನ್ನೂ ಆ ಊರಿನಲ್ಲಿ ತಂದಿರಿಸಿದನು. ಅವರಲ್ಲೆಲ್ಲಾ ಜಾಮೋತಿ ಎಂಬ ವೇಶ್ಯೆಯೇ ಬಹು ಸೌಂದರ್ಯವತಿಯೂ, ರಸಿಕಳೂ ಆಗಿ ದೇಹವಿಕ್ರಯದಿಂದ ಅಸಂಖ್ಯ ದ್ರವ್ಯವ ಆರ್ಜಿಸಿದಳು. ಅವಳ ಮನೆಯು ರಾಜಗೃಹದಂತೆ ರಮಣೀಯವಾಗಿ ಶೋ

ಘಿಸುತ್ತಿರುವುದು ತನ್ನ ದೇಹವಿಕ್ರಯಮಾತ್ರವಲ್ಲದೆ ಆ ನೀಚಳು, ಆ ಊರಿನ ಅನೇಕ ಸಾಧ್ವಿಯರನ್ನೂ ಉಪಾಯಾಂತರದಿಂದ ತನ್ನ ಬಲೆಯಲ್ಲಿ ತಗುಲಿಸಿಕೊಂಡು, ಅವರನ್ನು, ಬಲವಂತದಿಂದ, ಕಾಮುಕರಾಗಿ ತನ್ನನ್ನು ಆಶ್ರಯಿಸಿದ ಪುರುಷರ ವಶಪಡಿಸಿ ಆ ಮೂಲಕವೂ ವಿಶೇಷ ದ್ರವ್ಯವನ್ನು ಸಂಪಾದಿಸಿದ್ದಳು ಈ ದಂಡನಾಯಕನ ಮಗನಾದ ಲಾಲದಾಸೆಂಬುವನು ಮಹಾಕಾಮಿಯೂ ಮದ್ಯಪಾಯಿಯೂ ದುರುಳನೂ ಆಗಿ ಜಾರಶಿರೋಮಣಿಯೆನ್ನಿಸಿಕೊಂಡು ತನ್ನ ಕಾಮಸಂತೃಪ್ತಿಗಾಗಿ ಜಾನೋತಿಯನ್ನು ಆಶ್ರಯಿಸಿದ್ದನು ಅವಳು ಅವನು ತನಗೊಪ್ಪಿಸುತ್ತಿದ್ದ ದ್ರವ್ಯ-ಅಭರಣಾದಿಗಳಿಗೆ ಆಸೆಪಟ್ಟು ದಿನಕ್ಕೊಬ್ಬೊಬ್ಬ ಸುಂದರಸ್ತ್ರೀಯನ್ನು ಅವನಿಗೆ ಹವಣಿಸಿಕೊಡಲು ಸದಾ ತತ್ಪರಳಾಗಿರುತ್ತಿದ್ದಳು ತನ್ನ ದಾಸಿಯು ಸಹಸ್ರಲಿಂಗ ತಟಾಕದ ಬಳಿಯಲ್ಲಿದ್ದ ವೀರಮತಿಯ ಪರಿಚಯವನ್ನು ಸಂಪೂರ್ಣವಾಗಿ ತಿಳಿದು ಬಂದು ಹೇಳಿದ ಒಡನೆಯೇ ಜಾನೋತಿಯು ಸ್ವಲ್ಪವೂ ಸಾವಕಾಶವಮಾಡದೆ ಉತ್ತಮವಾದ ಒಂದು ಮೇನೆಯನ್ನು ತೆಗೆಯಿಸಿಕೊಂಡು, ಆ ತಟಾಕದ ಸಮೀಪವನ್ನು ಸೇರಿ, ವೀರಮತಿಯನ್ನು ಕುರಿತು, "ಅಮ್ಮಯ್ಯಾ, ಇದೇನು ಕೆಲಸ ಮಾಡಿದಿರಿ? ನೀವು ಒರುವ ಸಮಾಚಾರವನ್ನು ನಮಗೆ ತಿಳಿಸಿರಲಾಗದೇ! ನಾವೇನು ಪರಕೀಯರೇ? ನಿಮ್ಮ ಬರುವಿಕೆಯ ವಿಚಾರವು ಸ್ವಲ್ಪ ಮಾತ್ರ ತಿಳಿದಿದ್ದರೂ ನಿಮಗೆ ಎದುರಾಗಿ ಬಂದು, ನಿಮ್ಮ ಸುಖಪ್ರಯಾಣಕ್ಕೆ ತಕ್ಕ ಅನುಕೂಲಗಳನ್ನು ಒದಗಿಸುತ್ತಿದ್ದೆನಲ್ಲವೇ ನೀವು ಕೇವಲ ಹೊಸಬರಂತೆ ಈ ಊರಿಗೆ ಬಂದು ಇಲ್ಲಿ ಪರಕೀಯರಂತೆ ಏಕಾಂಗಿಯಾಗಿ ಕುಳಿತುಕೊಳ್ಳಬೇಕಾದುದೇಕೆ? ಆದರೇನು? ಏಳಮ್ಮಾ ನಡ ಮನೆಗೆ ಹೋಗೋಣ. ಜಗದೇವನು ಮನೆಯನ್ನು ಹುಡುಕಲಿಕ್ಕಾಗಿ ಊರೊಳಕ್ಕೆ ಬಂದಿರಲು, ಮಹಾರಾಜರು ಆತನನ್ನು ಕಂಡು ಮಾತನಾಡುತ್ತಾ ಕುಳಿತಿರುವರು ಇಲ್ಲಿ ನೀನು ಏಕಾಂಗಿಯಾಗಿರುವೆಯೆಂದು ತಿಳಿದು ನಿನ್ನನ್ನು ಕರೆದುಕೊಂಡು ಹೋಗಬೇಕೆಂದು ಬಂದೆನು ನನ್ನನ್ನು ಪರಕೀಯರೆಂದು ತಿಳಿಯಬೇಡಮ್ಮಾ! ನಾನು ನಿಮ್ಮ ಮಾವ ಉದಯಾದಿತ್ಯನ ಚಿಕ್ಕಪ್ಪನ ಮಗಳು ಜಗದೇವನು ನನ್ನ ನಮ್ಮ ಸೋದರಳಿಯ ಏಳು, ಎಕ್ಕ ಕುದುರೆ ಮುಂತಾದ ಸಾಮಾನುಗಳನ್ನು ಸೇವಕರು ಸಾಗಿಸಿಕೊಂಡು ಬರುತ್ತಾರೆ. ನೀನು ಮೇನಾದಲ್ಲಿ ಹತ್ತು, ಅರಮನೆಗೆ

ಹೋಗೋಣ!'' ಎಂದು ನುಡಿದಳು. ಆ ಮಾತನ್ನು ಕೇಳಿ ವೀರಮತಿಯು ಪಾಪ, ಅದನ್ನೆಲ್ಲಾ ನಿಜವೆಂದೇ ನಂಬಿದಳು. ಮೇಸೆಯಲ್ಲಿ ಕುಳಿತು ಇಬ್ಬರೂ ಹೊರಟರು. ಸ್ವಲ್ಪ ಹೊತ್ತಿನೊಳಗಾಗಿಯೇ ಜಾಮೋತಿಯು ರಾಜಗೃಹದೊಂದಿಗೆ ಸರಿದೂಗುತ್ತಿದ್ದ ತನ್ನ ಮನೆಗೆ ಕರೆತಂದು, ವೀರಮತಿಯುನ್ನು ಒಂದು ಕೊಟಡಿಯಲ್ಲಿಳಿಸಿ, ಆಕೆಗೆ ಅಭ್ಯಂಗನ ಮಾಡಿಸಿ, ದಿವ್ಯದುಕೂಲವನ್ನು ಕೊಟ್ಟು ಬಹುಬಗಯಿಂದ ಉಪಚರಿಸಿದಳು. ತರುವಾಯ ಉತ್ತಮ ಭಕ್ಷ್ಯಭೋಜ್ಯಗಳಿಂದ ಕೂಡಿದ ಎಡೆಯು ಸಿದ್ಧವಾಗಲು, ಪತಿವ್ರತಾತಿಲಕಳಾದ ವೀರಮತಿಯು ತನ್ನ ಪತಿಯ ಭೋಜನವಾಗುವವರೆಗೂ ತಾನು ಆ ಹಾರವನ್ನು ಸ್ವೀಕರಿಸುವುದಿಲ್ಲವೆಂದು ಹೇಳಿದಳು. ಅದನ್ನು ಕೇಳಿ ಜಾಮೋತಿಯು ತನ್ನ ದಾಸಿಯುರಲ್ಲೊಬ್ಬಳನ್ನು ಕರೆದು, 'ನಿಮಗಾಗಿ ನಿಮ್ಮ ಸೋದರತ್ತೆಯು ಊಟಮಾಡದೆ ಕಾದಿದ್ದಾರೆ'ಂದು ಹೇಳಿ ಜಗದೇವನನ್ನು ಕರೆದು ತಾರೆಂದು ಕಳುಹಿಸಿದಳು. ಆ ದಾಸಿಯು ಹೋದಂತೆನಟಿಸಿ, ಸ್ವಲ್ಪ ಹೊತ್ತಿನಲ್ಲೇ ಬಂದು, ಜಗದೇವನು ಮಹಾರಾಜರೊಂದಿಗೆ ಭೋಜನಮಾಡಿ, ತಾಂಬೂಲಚರ್ವಣಮಾಡುತ್ತಾ ಮಾತನಾಡಿಕೊಂಡು ಕುಳಿತಿದ್ದಂತೆಯೂ, ತನಗಾಗಿ ಕಾಯದೆ ಭೋಜನಮಾಡಬಹುದೆಂದು ಹೇಳಿದಂತೆಯೂ ತಿಳಿಸಿದಳು. ಆ ಮಾತನ್ನು ಕೇಳಿ ವೀರಮತಿಯು ಮನಸ್ಸಿಲ್ಲದಿದ್ದರೂ ಸ್ವಲ್ಪ ಮಾತ್ರ ಊಟಮಾಡಿ ಎದ್ದುಬಿಟ್ಟಳು ಅಷ್ಟರಲ್ಲೇ ಆ ವಾರವನಿತೆಯು ತಾಂಬೂಲಾದಿಗಳನ್ನು ತಂದಿತ್ತು, ಸುಂದರವಸ್ತುಗಳಿಂದ ಅಲಂಕೃತವೂ ಭದ್ರವೂ ಆದ ಒಂದು ಕೊಠಡಿಯುನ್ನು ಆಕೆಗೆ ವಿಶ್ರಮಿಸಿಕೊಳ್ಳುವುದಕ್ಕಾಗಿ ತೋರಿಸಿ ತಾನು ಕಣ್ಮರೆಯಾದಳು ವೀರಮತಿಯೂ ಪ್ರಯಾಣದಿಂದ ಉಂಟಾದ ಆಯಾಸಪರಿಹಾರಕ್ಕಾಗಿ ಸ್ವಲ್ಪಕಾಲ ನಿದ್ರಿಸಿದಳು.

ಸಾಯಂಕಾಲವಾಯಿತು! ಆವರೆಗೂ ಜಗದೇವ ವೀರಮತಿಯುರಿಗೆ ದರ್ಶನವಿಲ್ಲ. ವೀರಮತಿಯು ಆ ದಿನದ ಬೆಳಿಗ್ಗಿನಿಂದಲೂ ನಡೆದ ಸಂಗತಿಗಳನ್ನೆಲ್ಲಾ ಮನಸ್ಸಿನಲ್ಲಿ ಪರಿಭಾವಿಸಿಕೊಳ್ಳುತ್ತಾ, ಏನುಮಾಡಬೇಕೆಂಬುದು ತೋರದೆ, ತನ್ನ ವಾಸಸ್ಥಳದ ವಿಷಯದಲ್ಲೂ, ತನ್ನ ಪತಿಯು ಸೋದರತ್ತೆ ಎಂದು ಹೇಳಿಕೊಂಡ ಆ ಸ್ತ್ರೀಯು ವಿಷಯುದಲ್ಲೂ ಅತಿಶಯು ಸಂದೇಹಗೊಂಡಿದ್ದಳು. ಕತ್ತಲಾಯಿತು. ತನ್ನ ಪತಿಯು ಬಂದು ತನ್ನನ್ನು ಕಾಣುವ ಸುಳಿವೇ ಗೋ

ಚರಿಸಲಿಲ್ಲ ಜಾವೋತಿಯ ದಾಸಿಯು ಪುನಃ ಬಂದು, ಭೋಜನಕ್ಕೆ ಬರಬೇಕೆಂದು ಕರೆದಳು ವೀರಮತಿಯು ತನ್ನ ಪತಿಯು ಬಂದು ಭೋಜನ ಮಾಡಿದ್ದನ್ನು ನೋಡಿದಲ್ಲದೆ ತಾನು ಊಟಮಾಡಲಾರೆನೆಂದು ಖಂಡಿತವಾಗಿ ಹೇಳಿಬಿಟ್ಟಳು ಅದನ್ನು ಕೇಳಿ, ಜಾವೋತಿಯೇ ಒಂದು ಕೆಲವು ಫಲಾಹಾರಪದಾರ್ಥಗಳನ್ನು ಅವಳ ಸಮೀಪದಲ್ಲಿರಿಸಿ ಹೊರಟುಹೋದಳು ಹೋಗುತ್ತಾ, ಆ ವೇಶ್ಯೆಯು ವೀರಮತಿಯು ಕುಳಿತಿದ್ದ ಕೊಟಡಿಯ ಹೊರಗಿನ ಚಿಲುಕವನ್ನು ಹಾಕಿಕೊಂಡು ಹೋಗಿಬಿಟ್ಟಳು. ವೀರಮತಿಗೆ ಸಂದೇಹವು ಬಲವಾಯಿತು. ತಾನು ಮೋಸಹೋಗಿ, ಅಪಾಯಸ್ಥಳದಲ್ಲಿ ಸಿಕ್ಕಿಬಿದ್ದೆನೆಂದು ತಿಳಿದುಕೊಂಡಳು ಒಂದೊಂದು ಕ್ಷಣವೂ ತನ್ನ ಪತಿಯ ಬರುವಿಕೆಯನ್ನೇ ಎದುರುನೋಡುತ್ತಿದ್ದಳು. ಆತನ ನಾಮಾಕ್ಷರಗಳನ್ನೇ ಜಪಿಸಿಕೊಳ್ಳುತ್ತಿದ್ದಳು ಅಷ್ಟು ದೊಡ್ಡ ಮನೆಯಲ್ಲಿ ನರಪ್ರಾಣಿಗಳ ಸಂಚಾರವು ವೀರಮತಿಯ ಕಣ್ಣಿಗೆ ಬೀಳಲಿಲ್ಲ ಮನಸ್ಸಿನಲ್ಲಿ ಗಾಬರಿಗಾಬರಿಯಾಗುತ್ತಿತ್ತು ಆದರೂ ಮುಂದೇನಾಗಲಿರುವುದೋ ನೋಡೋಣವೆಂದು ವೀರಮತಿಯು ಧೈರ್ಯವನ್ನು ವಹಿಸಿ ಸುಮ್ಮನೆ ಕುಳಿತುಕೊಂಡಿದ್ದಳು

ರಾತ್ರಿಯಲ್ಲಿ ಮೊದಲನೆಯ ಜಾಮವು ಕಳೆಯಿತು ಮೇಲ್ಕಂಡ ಲಾಲದಾಸನು ಮಧುಪಾನಮತ್ತನಾಗಿ ಮದಗಜದಂತೆ ತೂಗಾಡಿಕೊಳ್ಳುತ್ತಾ ಜಾವೋತಿಯ ಮನೆಯ ಕಡೆಗೆ ಬಂದನು ಅವನು ದಿವ್ಯವಸ್ತ್ರಭೂಷಣಾದಿಗಳಿಂದ ಅಲಂಕೃತನಾಗಿದ್ದನು ಕೈಗಳಲ್ಲಿ ವಜ್ರದ ಕಡಗಗಳೂ, ಕಿವಿಗಳಲ್ಲಿ ಹೊಳೆಹೊಳೆವ ಕರ್ಣಾಭರಣಗಳೂ ಬೆಳಗುತ್ತಿದ್ದುವು ಜೀರೆಂದು ಶಬ್ದ ಮಾಡುವ ಪಾದರಕ್ಷೆಗಳನ್ನು ಮೆಟ್ಟಿ ತಾಂಬೂಲವನ್ನು ಜಗಿಯುತ್ತಾ ಕೈಯಲ್ಲಿ ಬೆತ್ತವನ್ನು ಹಿಡಿದುಕೊಂಡು, 'ಸುಳ್ಳೆ'ಂದು ಶೀಟಿಹಾಕುತ್ತಾ, ಆ ವೇಶ್ಯೆಯ ಭವನವನ್ನು ಸಮೀಪಿಸಿದನು ಜಾವೋತಿಯು ಗೃಹದ್ವಾರದಲ್ಲೇ ಇದಿರುಗೊಂಡು ಮರ್ಯಾದೆಯಿಂದ ತನ್ನ ಏಕಾಂತದ ಕೊಟಡಿಗೆ ಅವನನ್ನು ಕರೆದೊಯ್ದು—" ಈ ದಿನ ನಿನಗಾಗಿ ಒಬ್ಬ ಸ್ವರ್ಗಸುಂದರಿಯನ್ನು ತಂದಿರಿಸಿದ್ದೇನೆ. ಅವಳನ್ನು ವಲಿಸಿಕೊಂಡು ಈ ವರೆಗೆ ನೀನು ಎಂದೂ ಹೊಂದಿರಲಾರದಂತಹ ಸುಖಾನುಭವಪಡುವುದು ನಿನ್ನ ರಸಿಕತೆಯನ್ನು ಆಶ್ರಯಿಸಿದೆ" ಎಂದು ಮುಂತಾಗಿ ಉಚ್ಚರಿಸಿದಳು ಕಾಮಾಂಧನಾದ ಆ ತರುಣನು ಆ ವೇಶ್ಯೆಯ ವಚನ

ಗಳಿಂದ ಮರುಳನಾಗಿ ತನ್ನ ಹತ್ತಿರವಿದ್ದ ದ್ರವ್ಯವನ್ನೆಲ್ಲವನ್ನೂ ಅವಳ ಕೈಗಿತ್ತು, ಸುಂಗಾರದೆ ಮದನಬಾಣಪೀಡಿತನಾಗಿ ಆ ಸುಂದರಿಯನ್ನು ಎಂದಿಗೆ ಕಂಡೇನು, ಎಂದಿಗೆ ತನ್ನ ಮನೋಭಿಲಾಷೆಯು ಪೂರ್ಣವಾದೀತು ಎಂದು ಹಲುಬಿಕೊಳ್ಳುತ್ತಾ, "ಎಲ್ಲಿ, ಆ ಸುಂದರಿಯು ಎಲ್ಲಿದ್ದಾಳೆ- ತೋರಿಸು ತೋರಿಸು" ಎಂದು ಆತುರಗೊಳ್ಳುತ್ತಾ, ಜಾನೋತಿಯಿಂದ ತೋರಿಸಲ್ಪಟ್ಟ ಮಹಡಿಯ ಮೇಲಿನ ಕೊಟಡಿಯ ಕಡಗೆ ಬಹು ಸಡಗರದಿಂದ ನಡೆಯುತೊಡಗಿದನು.

ಲಾಲದಾಸನನ್ನು ವೀರಮತಿಯಿದ್ದ ಕೊಟಡಿಯ ಕಡೆಗೆ ಕಳುಹಿಸಿ ಘಾತುಕಳಾದ ಜಾಮೋತಿಯು ಕೃತಕೃತ್ಯಳಾದವಳಂತೆ ತನ್ನ ಶಯನಗೃಹಾಭಿಮುಖಳಾಗಿ ಹೊರಟುಹೋದಳು. ಇತ್ತ ವೀರಮತಿಯು ತನ್ನ ಕೊಟಡಿಯ ಕಡೆಗೆ ಯಾರೋ ನಡೆದುಬಂದಂತೆ ಆಗುತ್ತಿದ್ದ ಶಬ್ದವನ್ನು ಕೇಳಿ ತನ್ನ ಪತಿಯೇ ಬಂದನೆಂದು ಪರಮಸಂಭ್ರಮಗೊಂಡು ಎದ್ದುನಿಂತುಕೊಂಡು ಇದಿರುನೋಡುತ್ತಿದ್ದಳು. ಅಷ್ಟರಲ್ಲಿ ಬಾಗಿಲು ತೆರೆಯಿತು. ಲಾಲದಾಸನು ಒಳಕ್ಕೆ ಕಾಲಿಟ್ಟನು. ತನ್ನ ಪತಿಯು ಬಂದಿರಬಹುದೆಂದು ಭಾವಿಸಿದ್ದ ವೀರಮತಿಯು ಭಯಂಕರಾಕಾರನೂ ಮದ್ಯಪಾಯಿಯೂ ಕೇವಲ ಅಪರಿಚಿತನೂ ಆದ ಆ ವ್ಯಕ್ತಿಯನ್ನು ಕಂಡು ಅತಿಶಯಚಕಿತಳಾದಳು. ಕ್ಷಣಕಾಲ ಸ್ತಂಭಿತಳಾದಳು. ಆದರೆ ಅವಳು ಕ್ಷತ್ರಿಯವೀರಸ್ತ್ರೀಯಾಗಿರದಿದ್ದರೆ ಮಾತ್ರ ಚಿಟ್ಟನೆ ಚೀತ್ಕಾರಮಾಡಿ ಮೂರ್ಛೆಹೋಗಿಬಿಟ್ಟಿರಬಹುದಾಗಿತ್ತು. ಆದರೆ, ವೀರಮತಿಯು, ಅಂತಹ ಆಪತ್ಕಾಲದಲ್ಲೂ ಅಂಜದ ಧೈರ್ಯವನ್ನು ತಂದುಕೊಂಡು, ಪರಿಹಾರೋಪಾಯವನ್ನು ಚಿಂತಿಸುತ್ತಿದ್ದಳು.

ಲಾಲದಾಸನು ವೀರಮತಿಯ ಸ್ವರ್ಗೀಯಸೌಂದರ್ಯವನ್ನು ಕಂಡು ಮುಗ್ಧನಾದನು. ಆ ಸ್ತ್ರೀಶಿರೋಮಣಿಯ ಕಣ್ಣುಗಳು, ಮುಖ, ನಾಸಿಕ, ಕೇಶರಾಸಿ ಮುಂತಾದ ಒಂದೊಂದು ಅಂಗವೂ ಅವನ ಸಂಪೂರ್ಣದೃಷ್ಟಿಯನ್ನೂ ತಮ್ಮ ಕಡೆಗೆಳೆದುಕೊಂಡುಬಿಟ್ಟಿತು. ಅವನು ಕೇವಲ ಅಧೀರನಾಗಿ, ತನ್ನ ಪಂಚೇಂದ್ರಿಯಗಳ ಸಾಮರ್ಥ್ಯವನ್ನೂ ಆ ಸೌಂದರ್ಯಾಧಿದೇವತೆಯ ಪಾದಕಮಲಗಳಲ್ಲರ್ಪಿಸಿ ಚಿತ್ರಪ್ರತಿಮೆಯಂತೆ ನಿಂತುಬಿಟ್ಟನು. ಸ್ವಲ್ಪ ಹೊತ್ತಾಯಿತು. ಲಾಲದಾಸನು ದೀಪಕ್ಕೆರಗುವ ಶಲಭದಂತೆ, ಫಲವೆಂಬ ಭ್ರಾಂತಿಯಿಂದ ಬೆಂಕಿಯಕೆಂಡವನ್ನು ನುಂಗಲೆಳೆಸಿದ ಕಪಿಯಂತೆ, ಕಾಮಾಂಧನಾಗಿ

ವೀರಮತಿಯ ಹಸ್ತಗ್ರಹಣಮಾಡಬೇಕೆಂದು ಮುಂದಕ್ಕಡಿಯಿಟ್ಟನು ಆಗ ವೀರಮತಿಯು ಒಂದೆರಡಡಿಗಳನ್ನು ಹಿಂದಕ್ಕಿಟ್ಟು, "ಅಯ್ಯಾ, ನಾನು ಪರಸ್ತ್ರೀ, ಅಲ್ಲದೆ ದುರ್ದೈವವಶದಿಂದ ಮೋಸಹೋಗಿ ಈ ನೀಚಳ ಬಲೆಗೆಬಿದ್ದು ಪತಿಯನ್ನು ಕಾಣದ ತಪಿಸುತ್ತಿರುವ ಅನಾಥಳು ಇಂತಹ ನನ್ನನ್ನು ಈ ದುರಂತ ಕಷ್ಟದಿಂದ ಪಾರುಮಾಡದೆ, ನನ್ನ ವಿಷಯದಲ್ಲಿ ಪಾಪಕೃತ್ಯವನ್ನು ಯೋಚಿಸುವುದು ಧರ್ಮವಲ್ಲ ಪರಸ್ತ್ರೀ ಕಾಮುಕರಾರೂ ಹಿಂದೆ ಬಾಳಲಿಲ್ಲ ರಾವಣ, ಕೀಚಕಾದಿಗಳು ಪಡೆದ ಗತಿಯನ್ನು ಕೇಳಿಲ್ಲವೆ? ಬೇಡ. ನನ್ನ ಗೋಜಿಗೆ ಬಾರದಿರು" ಎಂದು ಬಹುಬಗೆಯಿಂದ ತಿಳಿವಳಿಕೆಯನ್ನು ಹೇಳಿದಳು ಕಾಲವು ತುಂಬಿ ಬಂದಿದ್ದ ಆ ನೀಚ ಲಾಲದಾಸನಿಗೆ ಆ ಮಾತುಗಳು ರುಚಿಸಲಿಲ್ಲ ಅವನ ಪಂಚೇಂದ್ರಿಯಗಳೂ ಪರವಶವಾಗಿ ಅವನು ಕೇವಲ ವೀರಮತಿಯ ಸೌಂದರ್ಯಪ್ರಭಾವದಿಂದ ಚಲಿಸುವ ಬೊಂಬೆಯೋ ಎಂಬಂತೆ ಆಗಿಹೋಗಿದ್ದನು. ಕೊನಕೊನಗೆ 'ಬೇಡ ಬೇಡ' ವೆಂದು ಎಷ್ಟು ಸಾರಿ ಹೇಳಿದರೂ ಲಕ್ಷ್ಯವಿಲ್ಲದ, ಆ ದುರುಳನು, ಆ ಮದೋನ್ಮತ್ತನು, ತನ್ನಾ ಪಾಪಹಸ್ತಗಳಿಂದ ಪತಿವ್ರತೆಯಾದ ಆ ಪುಣ್ಯಮೂರ್ತಿಯ ದೇಹವನ್ನು ಸ್ಪರ್ಶಿಸಬೇಕೆಂದು ಮುಂದಕ್ಕಡಿಯಿಟ್ಟನು. ವೀರಮತಿಗೆ ಮುಂದೆ ಮಾರ್ಗ ತೋರಲಿಲ್ಲ ಇನ್ನು ಒಂದು ಕ್ಷಣ ಸಾವಕಾಶಮಾಡಿದರೂ ಆ ನೀಚನು ಮಾನಹರಣಮಾಡದೆ ಬಿಡಲಾರನೆಂದು ತೋರಿತು ಅಂತಹ ಆಪತ್ಕಾಲದಲ್ಲಿ ಮಾಡತಕ್ಕುದೇನು! ಕ್ಷತ್ರಿಯ ರಮಣಿಯಾದ ವೀರಮತಿಯು ಆ ದುರುಳನ ಚರ್ಯಕ್ಕಾಗಿ ಹೇಸಿ ಕಟಕಟನೆಂದು ಹಲ್ಲುಗಳನ್ನು ಕಡಿಯುತ್ತಾ, ವಡ್ಯಾಣದ ಆಕಾರದ ಒರೆಯಲ್ಲಿ ಅಡಗಿ ತನ್ನ ನಡುವನ್ನು ಸುತ್ತುವರಿದಿದ್ದ ಗುಪ್ತಿಯೆಂಬ ಹರಿತವಾದ ಕತ್ತಿಯನ್ನು ಸರ್ರನೆ ಹೊರಕ್ಕೆಳೆದು, ಲಾಲದಾಸನು ಅದೇನೆಂದು ನೋಡಿ ತಿಳಿವುದರೊಳಗಾಗಿಯೇ "ನೀಚಾ, ನಿನ್ನ ಪಾಪಕಾರ್ಯಕ್ಕೆ ತಕ್ಕ ಫಲವನ್ನನುಭವಿಸು. ಸಾಯಿ" ಎಂದು ನುಡಿದು ಆ ಕತ್ತಿಯ ಒಂದೇ ಏಟಿನಿಂದ ಅವನ ದೇಹವನ್ನು ಎರಡು ತುಂಡಾಗಿ ಕತ್ತರಿಸಿಬಿಟ್ಟಳು. ರಕ್ತವು ಒಡನೆ ಚಿಲುಮೆಯಿಂದಲೋ ಎಂಬಂತೆ ಹಾರಿ ವೀರಮತಿಗೆ ಅಭಿಷೇಕವಾದಂತಾಯಿತು. ಪಶುತುಲ್ಯನಾದ ಆ ಪಾಪಿಯು ನೆಲಕ್ಕೆ ಕೂಲಿದನು

ಒಡನೆ ವೀರಮತಿಯು ಲೇಶವೂ ಸಾವಕಾಶಮಾಡದೆ, ಅವನ ದೇಹದ

ಎರಡು ಭಾಗಗಳನ್ನೂ ಅವನ ಬಟ್ಟೆಯಲ್ಲೇ ಸುತ್ತಿ ಅಲ್ಲೇ ಇದ್ದ ಗವಾಕ್ಷಿಯ ದ್ವಾರವಾಗಿ ಹೊರಗಿನ ರಸ್ತೆಗೆ ಎಸೆದುಬಿಟ್ಟು, ತನ್ನ ಚಿಕ್ಕಮನೆಯ ಬಾಗಿಲನ್ನು ಬಂಧಿಸಿ ಒಳಗಡೆ ಬಿಗಿದು ಚಿಲುಕವನ್ನು ಹಾಕಿಕೊಂಡು, ಮುಂದೇನಾಗುವುದೋ ನೋಡೋಣವೆಂದು ಕುಳಿತಳು. ಆ ಸಂದರ್ಭದಲ್ಲಿ ವೀರಮತಿಗುಂಟಾದ ಧೈರ್ಯವು ಅವರ್ಣನೀಯವು. ಹಾಗೆ ನಿಸ್ಸಹಾಯಳಾಗಿ ಸೆರೆಬಿದ್ದಿದ್ದ ಅವಳಲ್ಲಿ ಖಡ್ಗವೆಲ್ಲಿತ್ತೆಂಬ ಸಂದೇಹಉಂಟಾಗಬಹುದಲ್ಲವೆ? ಆ ಕಾಲದ ಕ್ಷತ್ರಿಯ ಸ್ತ್ರೀಯರು ತಮ್ಮ ಬಂಗಾರದ ವಡ್ಯಾಣವನ್ನು ಖಡ್ಗದ ಬರಿಯಂತೆ ಮಾಡಿಸಿ ಅದರ ಒಳಗಡೆಯಲ್ಲಿ ಬಗ್ಗಿಸಿದರೂ ಮುರಿಯದಂತಹ ಒಂದು ಬಗೆಯ ಉಕ್ಕಿನಿಂದ ತಯಾರಿಸಿದ ಖಡ್ಗವನ್ನು ಯಾವಾಗಲೂ ಧರಿಸಿರುತ್ತಿದ್ದರು. ಮಾನ ಪ್ರಾಣಗಳಿಗೆ ಅಪಾಯಬರುವ ಇಂತಹ ಸಂದರ್ಭಗಳಲ್ಲಿ ಅದನ್ನು ಉಪಯೋಗಿಸುತ್ತಿದ್ದರು. ಆ ಖಡ್ಗವನ್ನೇ ಸಂಕಟಸಮಯದಲ್ಲಿ ಉಪಯೋಗಿಸಿ ವೀರಮತಿಯು ಆ ಗಂಡದಿಂದ ಪಾರಾದಳು.—ಹೇ! ಪ್ರಿಯವಾಚಕವೃಂದ,—ಪ್ರಿಯ ಕರ್ಣಾಟಕ ಸಹೋದರೀವರ್ಗ—ಗಮನಿಸಬೇಕು.

**ಶ್ಲೋಕ:—** ಅರಕ್ಷಿತಾಗೃಹೇರುದ್ಧಾಃ ಪುರುಷೈರಾಪ್ತಕಾರಿಭಿಃ ||
ಆತ್ಮಾನಮಾತ್ಮನಾಯಾಸ್ತು ರಕ್ಷೇಯುಸ್ತಾಸ್ಸುರಕ್ಷಿತಾಃ ||

ಎಂದರೆ "ಆಪ್ತರಾದ ಪುರುಷರಿಂದ ಮನೆಯಲ್ಲಿ ನಿರ್ಬಂಧಿಸಲ್ಪಟ್ಟಿರುವ ಸ್ತ್ರೀಯರು ಸು-ರಕ್ಷಿತರಲ್ಲ. ಯಾವ ಸ್ತ್ರೀಯರು ತಮ್ಮ ಆತ್ಮ(ಮಾನ)ವನ್ನು ತಾವೇ ಕಾಪಾಡಿಕೊಳ್ಳುವರೋ ಅವರೇ ಸುರಕ್ಷಿತರು" ಎಂದು ಮನುವು ಹೇಳಿರುವಂತೆ, ನಿಶ್ಚಲಚಿತ್ತವೃತ್ತಿಯ ಪತಿವ್ರತೆಯರು, ಎಂತಹ ಆಪತ್ಕಾಲವು ಪ್ರಾಪ್ತವಾದರೂ,—ಎಂತಹ ಮೋಹಕವಸ್ತುಗಳ ಮಧ್ಯದಲ್ಲಿದ್ದರೂ ತಮ್ಮ ಧರ್ಮಕ್ಕೆ ಕುಂದು ತಂದುಕೊಳ್ಳದೆ, ತಮ್ಮ ಶೀಲವನ್ನು ಕಾಯ್ದುಕೊಳ್ಳುವರು. ಅಂತಹ ಸ್ತ್ರೀಯರಿಂದಲೇ ಅಲ್ಲವೆ ಲೋಕವು ಶೋಭಿಸುವುದು. ಅಂತಹ ಪತಿವ್ರತೆಯರಿಂದಲೇ ಅಲ್ಲದೆ ಭೂಮಿಯಲ್ಲಿ ಧರ್ಮವು ನಿಂತಿರುವುದು. ಅಂತಹ ಪಾವನೆಯರ ಪ್ರಭಾವದಿಂದಲೇ ಅಲ್ಲದ ಪ್ರಪಂಚದಲ್ಲಿ ಮಳೆಬೆಳೆಗಳು ನಡೆಯುವುವು! ಸ್ತ್ರೀಯರಿಗೆ ಪಾತಿವ್ರತ್ಯವೇ ರಕ್ಷಾಕವಚವು. ಅದೇ ಧರ್ಮರಕ್ಷಣೆಗೆ ಬೇಕಾದ ಧೈರ್ಯಸ್ಥೈರ್ಯಗಳನ್ನು ಪ್ರಸಾದಿಸುವುದು.



## ಅಧ್ಯಾಯ ೬ "ಸುಖಸಾಮ್ರಾಜ್ಯ"

ಮುಂದೆ ನಡೆದ ವೀರಮತಿಯ ಚರಿತ್ರೆಯನ್ನು ತಿಳಿಯಲು ವಾಚಕ ಮಹಾಶಯರು ಕುತೂಹಲಗೊಂಡಿರಬಹುದು! ವೀರಮತಿಯು, ರಕ್ತವು ಪ್ರವಾಹವಾಗಿ ಹರಿದು ಹೊಂಡವಾಗಿ ಕರೆಗಟ್ಟಿ ನಿಂತಿದ್ದ ಆ ಮನೆಯಲ್ಲಿ ಆ ಭೀಕರ ದೃಶ್ಯವನ್ನು ಕಣ್ಣಿನಿಂದ ನೋಡುತ್ತ, ರೋಷ-ವ್ಯಸನ-ಸಂತಾಪಾಗ್ನಿಗಳು ಹೃದಯವನ್ನು ದಹಿಸುತ್ತಿರಲು, ಯೋಚನಾಪರಳಾಗಿ ಕುಳಿತಿದ್ದಳು. ಅಷ್ಟರಲ್ಲಿ ಇತ್ತ ಬೀದಿಯಲ್ಲಿ ಬಿದ್ದ ಲಾಲದಾಸನ ಶವದ ಮೂಟೆಯು, ರಾತ್ರೆ ನಗರರಕ್ಷಕ ಭಟರ ದೃಷ್ಟಿಗೆ ಬಿತ್ತು. ಅವರು ಅದೇನೆಂದು ಬಿಚ್ಚಿನೋಡಲು, ತಮ್ಮ ನಗರಾಧಿಕಾರಿಯ ಮಗನ ದೇಹವು ಎರಡು ತುಂಡಾಗಿ ಕತ್ತರಿಸಲ್ಪಟ್ಟಿದ್ದುದನ್ನು ಕಂಡು ಮಹದಾತಂಕಗೊಂಡು ಒಡನೆ ಓಡಿ ಹೋಗಿ ಆತನಿಗೆ ಸಮಾಚಾರವನ್ನು ಕೊಟ್ಟರು. ಡುಂಗರಸಿಯು ಗಾಬರಿಯಿಂದ ಹೊರಬಂದು, ಜ್ಯಾಮೋತಿಯನ್ನು ತನ್ನ ಮಗನಲ್ಲೆಂದು ವಿಚಾರಿಸಲು, ಅವಳು "ಪ್ರಭುಗಳೇ ಏಕೆ ಗಾಬರಿಪಡುವಿರಿ? ತಮ್ಮ ಮಗನು ಈದಿನ ಸ್ವರ್ಗಸುಂದರಿಯರನ್ನು ಮೀರಿಸುವ ಒಬ್ಬ ರಂಭೆಯೊಂದಿಗೆ ಸುಖಸಲ್ಲಾಪಗೊಳ್ಳುತ್ತಿರುವನು" ಎಂದು ಹೇಳಿ, ಅವನನ್ನು ಕರೆತರುತ್ತೇನೆಂದು ವೀರಮತಿಯಿದ್ದ ಕೋಟಡಿಯ ಬಾಗಿಲಿಗೆ ಬಂದಳು. ಆದರೆ ಅದು ಬಲವಾಗಿ ಬಂಧಿಸಲ್ಪಟ್ಟಿದ್ದಿತು. ಜಾಮೋತಿಯ ಮನೆಯಲ್ಲಿ ಸರ್ವಸಾಧಾರಣವಾಗಿ ಸಂಭವಿಸುತ್ತಿದ್ದ ಘೋರಕೃತ್ಯಗಳೆಲ್ಲವೂ ಆ ಮನೆಯಲ್ಲೇ ನಡೆಯುತ್ತಿದ್ದುದರಿಂದ ಆ ಕೋಟಡಿಯೂ-ಬಾಗಿಲೂ ಬಹು ಭದ್ರವಾಗಿ ನಿರ್ಮಿಸಲ್ಪಟ್ಟಿದ್ದುವು. ದಂಡಾಧಿಕಾರಿಯೂ ಜಾಮೋತಿಯೂ ಆ ಕೋಟಡಿಯ ಬಾಗಿಲು ತೆಗೆಯಬೇಕೆಂದು ಮಾಡಿದ ಪ್ರಯತ್ನಗಳೆಲ್ಲವೂ ನಿಷ್ಫಲವಾದುವು —ಕೊನೆಗೆ ಆ ದಂಡಾಧಿಕಾರಿಯು ವೀರಮತಿಯಿದ್ದ ಕೋಟಡಿಯ ಮೇಲ್ಭಾಗದ ಕಿಟಕಿಗೆ ಬೀದಿಯ ಕಡೆಯಿಂದ ಏಣಿಯನ್ನು ಹಾಕಿಸಿ, ತನ್ನ ಕಡೆಯ ಭಟರನ್ನು ಮೇಲಕ್ಕೆ ಹತ್ತಿಸಿದನು. ಒಬ್ಬ ಸೇವಕನು, ಮೇಲಕ್ಕೆ ಹತ್ತಿ ವಾಕ್ಷಿಗೆ ಹಾಕಿದ್ದ ಕಂಬಿಯನ್ನು ಬಗ್ಗಿಸತೊಡಗಿದನು. ಒಳಗೆ ಕತ್ತಲೆಯಲ್ಲಿ ಕುಳಿತು, ಒಂದೊಂದು ಕ್ಷಣವೂ ಮುಂದೇನಾಗುವುದೋ ಎಂದು ಯೋಚಿಸುತ್ತಿದ್ದ ವೀರಮತಿಯು, ಮ

ಧ್ಯರಾತ್ರಿಯಲ್ಲಿ ಒಬ್ಬ ಪುರುಷಪ್ರಾಣಿಯು ಬಂದು ತಾನಿದ್ದ ಕೊಟಡಿಯ ಕಿಟಕಿಯ ಕಂಬಿಯನ್ನು ಬಗ್ಗಿಸುತ್ತಿದ್ದುದನ್ನು ಕಂಡು ಚಕಿತಳಾದಳು "ಆಹಾ, ಅದರಮೇಲೆ ಮತ್ತೊಂದು ದುಃಖವು ಪ್ರಾಪ್ತವಾಗಲಿದೆಯಲ್ಲಾ" ಎಂದುಕೊಂಡಳು ಆದರೂ ಒಂದುದ್ಲವೂ ಒಗಲೆಂದು ಹೃದಯವನ್ನು ಕಲ್ಲು ಮಾಡಿಕೊಂಡು ಎದ್ದು ಗವಾಕ್ಷಿಯ ಒಳಿಯಲ್ಲಿ, ವ ಎಂದೇನಾಗಲಿರುವುದೋ ನೋಡೋಣವೆಂದು- ಕೌತುಕಗೊಂಡು ನಿಂತುಕೊಂಡಳು.

ಆ ಸೇವಕನು ಸುಮಾರು ಅರ್ಧಗಂಟೆಯಹೊತ್ತು ಕಷ್ಟಪಟ್ಟು ಆ ಕಬ್ಬಿಣದ ಸರಳುಗಳನ್ನು ಬಗ್ಗಿಸಿ ತನ್ನ ತಲೆಯು ದೂರುವಷ್ಟು ಸ್ಥಳಮಾಡಿಕೊಂಡನು ಮತ್ತೂ ಸ್ವಲ್ಪಹೊತ್ತಿನ ಶ್ರಮದಿಂದ ಮಧ್ಯದ ಎರಡು ಕಂಬಿಗಳ ಮೇಲ್ಭಾಗಗಳನ್ನು ಕತ್ತರಿಸಿದನು ಒಬ್ಬ ಮನುಷ್ಯನ ದೇಹವು ಸುಲಭವಾಗಿ ದೂರುವಷ್ಟು ಸ್ಥಳವಾಯಿತು ಅದನ್ನು ಕಂಡು ವೀರಮತಿಯು ಭಯಗೊಳ್ಳಲಿಲ್ಲ. ಚೀರಿಕೊಳ್ಳಲಿಲ್ಲ ಕೈಯ್ಯಲ್ಲಿ ಮನುಷ್ಯರಕ್ತದ ರುಚಿಯನ್ನು ಕಂಡಿದ್ದ ಭಯಂಕರ ಕೃಪಾಣವನ್ನು ಹಿಡಿದು ಸಿದ್ಧಳಾಗಿಯೇ ನಿಂತಿದ್ದಳು ಸೇವಕನು ಗವಾಕ್ಷಿಯಿಂದ ಒಳಕ್ಕೆ ತಲೆಯಿಟ್ಟುದೊಂದೇ ಸಾವಕಾಶವು! ತನ್ನ ಕತ್ತಿಯನ್ನು ಬೀಸಿ ಅವನ ಕತ್ತಿನಮೇಲೆ ಪ್ರಯೋಗಿಸಿದಳು ರುಂಡವು ಮುಂಡದಿಂದ ಬೇರೆಯಾಗಿ ಕೊಟಡಿಯಲ್ಲಿ ಹಾರಿಬಿದ್ದಿತು ಮುಂಡವು ದೊಪ್ಪೆಂದು ಬೀದಿಯಲ್ಲಿ ಬಿದ್ದು ಒ ದಾಡಿತು ಅಲ್ಲೇ ನಿಂತು ನೋಡುತ್ತಿದ್ದ ದಂಡಾಧಿಕಾರಿಯೂ ಅವನ ಇತರ ಸೇವಕರೂ ಆಶ್ಚರ್ಯ ಭಯಗಳಿಂದ ಮಂಗಾಣದಂತಾದರು ಒಡನೆ ಮತ್ತೊಬ್ಬ ಸೇವಕನು, ಭಯಗೊಳ್ಳದೆ, ಕೊಟಡಿಯಲ್ಲೇನಿರುವುದೆಂಬುದನ್ನು ತಿಳಿಯುತ್ತೇನೆಂದು ರೋಷಗೊಂಡು ಮೇಲಕ್ಕೇರಿದನು ಕಿಟಕಿಯ ದ್ವಾರಾ ಕೊಟಡಿಯೊಳಕ್ಕೆ ತಲೆಯನ್ನು ದೂರಿಸಿದನು ವೀರಮತಿಯು ಸಿದ್ಧಳಾಗಿಯೇ ಇದ್ದಳಲ್ಲವೆ! ತಲೆಯು ದೇಹದಿಂದ ಪ್ರತ್ಯೇಕಿಸಲ್ಪಟ್ಟಿತು ರುಂಡವು ಅವರೆಗೇ ಚೆಲ್ಲಿದ್ದ ರಕ್ತದಲ್ಲಿ ಹೊರಳಾಡಿತು ದೇಹವು ಬೀದಿಯಲ್ಲಿ ಬಿದ್ದಿತು

ಅದನ್ನು ನೋಡಿದಮೇಲಂತೂ ಹೊರಗಿದ ವರ ಕೌತುಕವು ಅತಿಶಯವಾಯಿತು ಮದ್ಯಪಾನದಿಂದ ಮತ್ತರಾಗಿದ್ದ ಅವರು ರಕ್ತಸಿಕ್ತವಾಗಿ ಬೀಳುತ್ತಿದ್ದ ಆ ದೇಹಗಳನ್ನು ನೋಡಿ ಭಯಗೊಳ್ಳುತ್ತಿದ್ದರೂ-ಅದರ ಕಾರಣವನ್ನು

ಕಂಡುಹಿಡಿಯಬೇಕೆಂಬ ಕುತೂಹಲದಿಂದ, ಒಬ್ಬನಾದಮೇಲೊಬ್ಬನಂತೆ, ಮೂರು-ನಾಲ್ಕು, ಐದು-ಆರು, ಏಳು ಎಂಟು ಒಂಬತ್ತು ಹತ್ತು ಜನಗಳು ಹತ್ತಿ ಕೊಟಡಿಯಲ್ಲಿರುವವರು ಯಾರೆಂದು ತಿಳಿವ ಪ್ರಯತ್ನದಲ್ಲಿ ತಮ್ಮ ದೇಹಗಳನ್ನು ವೀರಮತಿಯು ಕರಾಳಕೃಪಾಣಕ್ಕೆ ಬಲಿಯಿತ್ತರು. ಹನ್ನೊಂದನೆಯವನೂ ಹತ್ತಿದನು ಅವನ ಗತಿಯೂ ಹಿಂದಿನವರಂತೆಯೇ ಆಯಿತು ವೀರಮತಿಯು ಹನ್ನೊಂದು ರುಂಡಗಳನ್ನು ಏಕಾಂಗಿಯಾದ ತನ್ನೆದುರಿನಲ್ಲಿ ಕಂಡು ಭಯಂಕರಳಾದ ಕಾಳಿಯಂತೆ, ರಕ್ತದಿಂದ ನೆನೆದ ಬಟ್ಟೆಯಿಂದ ನೋಟಕ್ಕೆ ಬೀಕರಳಾಗಿ ನಿಂತಿದ್ದಳು —ಹನ್ನೊಂದುಮಂದಿ ಸೇವಕರು ಹತರಾದುದನ್ನು ಕಂಡೂ ಮುಂದೆ ತಲೆಯನ್ನು ತೆರಲು ಯಾವನೂ ಸಿದ್ಧನಾಗಲಿಲ್ಲ ಅಷ್ಟರಲ್ಲಿ ಪ್ರಾತಃಕಾಲವೂ ಆಯಿತು

ಜಾಮೋತಿಯ ಮನೆಯ ಬಳಿಯಲ್ಲಿ ಏಕಕಾಲದಲ್ಲಿ ಹನ್ನೆರಡು ಶವಗಳು ಬಿದ್ದಿದ್ದ ಆ ದೃಶ್ಯವು, ಸಹಸ್ರಾರುಜನಗಳನ್ನು ಆಕರ್ಷಿಸಿತು ಜನಗಳು ಪರಷೆಗೋ ಎಂಬಂತೆ ಗುಂಪುಗುಂಪಾಗಿ ಬಂದು ನೆರೆದರು ಎಲ್ಲರೂ ಪರಮಾಶ್ಚರ್ಯದಿಂದ, ಕಿಟಕಿಯಕಡೆಗೂ, ರಕ್ತವರ್ಣರಂಜಿತವಾಗಿದ್ದ ಗೋಡೆಯಕಡೆಗೂ ಶವಗಳಕಡೆಗೂ ನೋಡುತ್ತಾ ತಮ್ಮ ತಮ್ಮ ಮನಬಂದಂತೆ ಮಾತನಾಡಿಕೊಳ್ಳುತ್ತಿದ್ದರು. ಅಷ್ಟರಲ್ಲಿ ಆ ವಾರ್ತೆಯು ರಾಜನಕಿವಿಗೂ ತಲುಪಿತು. ಹನ್ನೆರಡುಮಂದಿ ಏಕಕಾಲದಲ್ಲಿ ಹತರಾದರೆಂಬುದನ್ನು ಕೇಳಿ ಕಾರಣವನ್ನು ತಿಳಿಯಲೋಸುಗ ಆತನೇ ಬಂದು, ಜಾಮೋತಿಯಿಂದಲೂ, ದಂಡಾಧಿಕಾರಿಯಿಂದಲೂ ಸಂಗತಿಯನ್ನು ತಿಳಿದು, ಏಣಿಯನ್ನು ಹತ್ತಿ—''ಓ ಅಸಮಾನಶೌರ್ಯಶಾಲಿನಿಯಾದ ಸ್ತ್ರೀಯೇ, ನೀನಾರು! ಹೀಗೇಕೆ, ನನ್ನ ಪ್ರಜೆಗಳನ್ನು ಕೊಲ್ಲುತ್ತಿರುವೆ? ನಿನಗಾರಾದರೂ ಅಪರಾಧ ಮಾಡಿದ್ದರೆ ನನಗೆ ಹೇಳು! ನಾನು ಈ ಊರಿನ ರಾಜನು ಅಂತಹ ತಪ್ಪಿತಸ್ಥರನ್ನು ಶಿಕ್ಷಿಸುವೆನು'' ಎಂದು ಹೇಳಿದನು ಅದನ್ನು ಕೇಳಿ, ವೀರಮತಿಯು ಧೈರ್ಯಗೊಂಡು, ''ಮಹಾರಾಜಾ, ನಾನು ಚಾವಡಾಕುಲೋತ್ಪನ್ನರಾದ ಜರಜಮಹಾರಾಜರ ತಂಗಿಯು ಧಾರಾನಗರದ ಅಧಿಪತಿಯಾದ ಉದಯಾದಿತ್ಯಮಹಾರಾಜನ ಸೊಸೆಯು ನನ್ನ ಹೆಸರು ವೀರಮತಿ'' ಎಂದೂ, ತನ್ನನ್ನು ಜಾಮೋತಿಯು ಮೋಸಗೊಳಿಸಿ ಕರೆತಂದ ಸಂಗತಿಯೆಲ್ಲವನ್ನೂ ಆದ್ಯಂತವಾಗಿ ತಿಳಿಸಿ ''ನನ್ನ ಪಾತಿವ್ರತ್ಯರಕ್ಷಣೆಗಾ

ಗಿ ನಾನು ಆ ನೀಚನನ್ನು ಸಂಹರಿಸಿದೆನು ನನ್ನನ್ನು ಹಿಡಿಯಲು ಬಂದ ಈ ಹ ನ್ನೊಂದು ಜನಗಳನ್ನೂ ಆ ಕಾರಣಕ್ಕಾಗಿಯೇ ಕೊಂದುದು. ನಾನು ಕ್ಷತ್ರಿಯ ಕನ್ಯೆಯು. ನನ್ನ ಈ ದೇಹದಲ್ಲಿ ಪ್ರಾಣಗಳಿರುವವರೆಗೂ ನನ್ನನ್ನು ಯಾರೂ ಮುಟ್ಟಗೂಡಲಾರನು'' ಎಂದಳು ಅದನ್ನು ಕೇಳಿದ ರಾಜನು ಪರಮಸಂತೋಷಪಟ್ಟು—''ಅಮ್ಮಾ ನೀನು ರಾಜಪುತ್ರ ಸ್ತ್ರೀಯರಿಗೆ ತಕ್ಕ ಕಾರ್ಯವನ್ನೇ ಮಾಡಿರುವೆ. ನೀನು ಹೊರಕ್ಕೆ ಬಾ ನಿನ್ನನ್ನು ನನ್ನ ಮಗಳಂತೆ ಕಾಪಾಡುತ್ತೇನೆ. ಅಲ್ಲದೆ ನಿನ್ನ ಪತಿಯನ್ನೂ ಹುಡುಕಿಸುವೆನು'' ಎಂದು ನುಡಿದನು ಆ ಮಾತಿಗೂ ವೀರಮತಿಯು ಬಾಗಿಲು ತೆರೆಯಲಿಲ್ಲ ''ತಮ್ಮ ಆಜ್ಞೆಯನ್ನು ಮನ್ನಿಸುವೆನಾದರೂ ನನ್ನ ಪತಿಯು ಬಂದು ಎದುರಿಗೆ ನಿಂತಲ್ಲದೆ, ನನ್ನ ಪ್ರಾಣಗಳನ್ನಾದರೂ ಇಲ್ಲಯೇ ಬಿಡುವೆನೇಹೊರತಾಗಿ ಬಾಗಿಲನ್ನು ತೆರೆಯಲಾರೆನು'' ಎಂದು ಹೇಳಿಬಿಟ್ಟಳು ರಾಜನು ಜಗದೇವನೆಲ್ಲೆಂದು ಹುಡುಕಿಸಿದನು. ಅವನು ಜಾಮೋತಿಯ ದುರ್ಮಂತ್ರಲಂಚಗಳಿಗೊಳಪಟ್ಟ ರಾಜಭಟರಿಂದ ಬಂಧಿಸಲ್ಪಟ್ಟು ಸೆರೆಮನೆಯಲ್ಲಿದ್ದುದಾಗಿ ತಿಳಿಯಬಂತು. ಅಲ್ಲಿಂದ ಆತನನ್ನು ಕರೆಸಿ, ಏಣಿಯಮೇಲೆ ಹತ್ತಿಸಿ, ವೀರಮತಿಯನ್ನು ಬಾಗಿಲು ತೆರೆಯಹೇಳೆಂದರು ಜಗದೇವನು ಗವಾಕ್ಷಿಯ ಸಮೀಪದಲ್ಲಿ ಬಂದು ನಿಂತನು ವೀರಮತಿಯು ತನ್ನ ಪ್ರಿಯಭರ್ತನ ಮುಖವನ್ನು ನೋಡಿ ಧೈರ್ಯಗೊಂಡು ಬಾಗಿಲು ತೆರೆದು ಪತಿಯ ಪಾದಗಳನ್ನಪ್ಪಿಕೊಂಡಳು ರಾಜನು ಅವರಿಗೆ ಆ ದುರ್ದೆಸೆಯು ಪ್ರಾಪ್ತವಾದುದಕ್ಕೆ, ಜಾಮೋತಿಯೇ ಕಾರಣಳೆಂದು, ಅವಳ ಆಸ್ತಿಯನ್ನೆಲ್ಲಾ ರಾಜ್ಯದ ಭಾಂಡಾರಕ್ಕೆ ಸೇರಿಸಿಕೊಂಡು, ಅವಳನ್ನು ವಿರೂಪಪಡಿಸಿ, ನಗರದಿಂದ ಗಡೀಪಾರು ಮಾಡಿಸಿದನು. ಜಗದೇವ ವೀರಮತಿಯರನ್ನು ತನ್ನೊಂದಿಗೆ ರಥದಮೇಲೆ ಕೂರಿಸಿಕೊಂಡು ಅರಮನೆಗೆ ಬಂದನು ಮಾರ್ಗದಲ್ಲಿ, ಮಹತ್ಸಂಕಟಕ್ಕೆ ಸಿಕ್ಕಿ ಪಾರಾದ ಆ ದಂಪತಿಗಳನ್ನು ಕಂಡು ಪಟ್ಟಣಿಗರೆಲ್ಲರೂ ಮಹದಾನಂದದಿಂದ, ನೀಚರಾದ ಲಾಲದಾಸ ಜಾಮೋತಿಯರನ್ನು ಶಿಕ್ಷಿಸಿ ಆ ಪಟ್ಟಣದ ಸಾಧ್ವಿಯರ ಪಾತಿವ್ರತ್ಯವನ್ನು ಕಾಪಾಡಿದ ಮಹಾಪತಿವ್ರತೆಯೆಂದು ವೀರಮತಿಗೆ ಕೈಗಳನ್ನೆತ್ತಿ ಮುಗಿದರು.

ಮಹಾರಾಜನು ಹಿಂದಿದ್ದ ದಂಡಾಧಿಕಾರಿಯ ದುಶ್ಚೇಷ್ಟೆಗಳನ್ನು ತಿಳಿ

ದು ಅವನನ್ನು ಕೆಲಸದಿಂದ ತಪ್ಪಿಸಿ ಆ ಕೆಲಸಕ್ಕೆ, ವಿದ್ಯಾ-ಬುದ್ಧಿ ಶೌರ್ಯಧೈರ್ಯಾದಿಗಳಿಂದ ಯೋಗ್ಯನಾಗಿದ್ದ ಜಗದೇವನನ್ನೇ ನಿಯಮಿಸಿದನು ಜಗದೇವನು ಅಧಿಕಾರಸೂತ್ರಗಳನ್ನು ಕೈಗೆ ತೆಗೆದುಕೊಂಡು, ರಾಜ್ಯದಲ್ಲಿನ ಅನ್ಯಾಯ ಅವ್ಯವಸ್ಥೆಗಳನ್ನೆಲ್ಲಾ ನೀಗಿಸಿ, ಸತ್ಯಧರ್ಮ ನ್ಯಾಯಗಳನ್ನು ಸ್ಥಾಪಿಸಿದನು ಕೆಲವು ದಿನಗಳಲ್ಲೇ ವೀರಮತಿಯು ಉದರದಲ್ಲಿ ಒಬ್ಬ ಪುತ್ರನು ಜನಿಸಿದನು ಅವನಿಗೆ ಜಗದೇವನು ಜಾತಕರ್ಮ ನಾಮಕರಣಾದಿ ಮಹೋತ್ಸವಗಳನ್ನು ಅತ್ಯಂತ ವೈಭವದಿಂದ ನಡೆಯಿಸಿ, ಜಗದ್ಧವಲನೆಂದು ಹೆಸರಿಟ್ಟು ಕರೆದನು ಎಲ್ಲರೂ ಪರಮಸಂತೋಷದಿಂದ ಕೆಲಕಾಲವಿದ್ದರು

ಜಗದೇವನು ದಂಡನಾಧಿಕಾರಿಯಾಗಿದ್ದ ಆ ಕಾಲದಲ್ಲೇ ಮತ್ತೊಂದು ವಿಚಿತ್ರಸಂಗತಿ ನಡೆಯಿತು ಆದರಿಂದ ಜಗದೇವನ ಕುಟುಂಬವೇ ನಿರ್ಮೂಲವಾಗಿ ನಾಶವಾಗುವ ಸ್ಥಿತಿಯೊದಗಿದ್ದಿತು. ಅಣಹಿತಪುರದಲ್ಲಿ ಕಾಲರಾರೋಗವು ಪ್ರಾಪ್ತವಾಗಿ ಅಸಂಖ್ಯಪ್ರಜಾನಾಶವುಂಟಾಗತೊಡಗಿತು· ಏನುಪಾಯದಿಂದ ಅದನ್ನು ಕೊನೆಗಾಣಿಸಬೇಕೆಂದು, ರಾಜನೂ ರಾಜ್ಯಾಧಿಕಾರಿಗಳೂ ಯೋಚಿಸತೊಡಗಿದರು ರಾಜನು ಯಂತ್ರ ಮಂತ್ರ ತಂತ್ರಗಳೂ, ಪೂಜಾದಿಗಳು, ಹವನಹೋಮಾದಿಗಳು ಮುಂತಾಗಿ ಯಾರು ಏನು ಹೇಳಿದರೂ ಮಾಡಿಸುತ್ತಿದ್ದನು ಮತ್ತು ಊರಮುಂದಿನ ಕಾಳಿಕಾಲಯಕ್ಕೂ ಪ್ರತಿದಿನವೂ ಏಕಾಂಗಿಯಾಗಿ ಪಾದಚಾರಿಯಾಗಿ ಹೋಗಿಬರುತ್ತಾ ಭಕ್ತಿಯುಕ್ತನಾಗಿ ಸೇವಿಸುತ್ತಿದ್ದನು ಜಗದೇವನ ದರ್ಪಯುಕ್ತ ಶಾಸನದಿಂದ ಪೀಡಿತರಾಗಿ, ಅವನನ್ನು ದ್ವೇಷಿಸುತ್ತಿದ್ದ ಕೆಲಮಂದಿ ದುಷ್ಟರು. ಈ ಸಂಧಿಯನ್ನು ಸಾಧಿಸಿ, ಅವನನ್ನು ನಾಶಗೊಳಿಸಬೇಕೆಂದೆಣಿಸಿದರು ಒಂದಾನೊಂದುದಿನ ಅವರಲ್ಲೊಬ್ಬನು, ಕಾಳಿಕೆಯಹಿಂದೆ ಅವಿತುಕೊಂಡಿದ್ದು "ಮಹಾರಾಜನೇ, ನಿನ್ನ ಭಕ್ತಿಗೆ ಮೆಚ್ಚಿದೆನು ಈ ರೋಗವು ನಾಶವಾಗಲು ಒಂದುಪಾಯವುಂಟು ಸರ್ವಸದ್ಗುಣಸಂಪನ್ನನಾದ ಒಬ್ಬ ರಾಜಪುತ್ರನನ್ನು ನನಗೆ ಬಲಿಕೊಟರೆ, ಈ ರೋಗವು ಶಾಂತವಾಗುವುದು ನಿನ ಪ್ರಜೆಗಳೂ ಸುಖವಾಗಿರುವರು ನೀನೂ ನೂರುವರ್ಷ ಸುಖವಾಗಿ ರಾಜ್ಯವಾಳುವೆ" ಎಂದು ನುಡಿದನು ಈ ಅಶರೀರವಾಣಿಯನ್ನು ಕೇಳಿ ರಾಜನು—"ತಾಯೇ ಅಂತಹ ರಾಜಪುತ್ರನನ್ನು ಎಲ್ಲಿಂದ ತರಲಿ?" ಎಂದು ಪ್ರಾರ್ಥಿಸಿದನು ಅದಕ್ಕೆ "ರಾಜಾ ಯೋಚಿ

ಸಬೇಕು ನಿನ್ನ ಸೇವೆಯಲ್ಲಿರುವ ಜಗದೇವನು ಸರ್ವಸದ್ಗುಣಯುತನು ರಾಜ್ಯದ ಕ್ಷೇಮಕ್ಕಾಗಿ ಅವನನ್ನು ಬಲಿಯಾಗಿ ಅರ್ಪಿಸು ' ಎಂದು ಪ್ರತ್ಯುತ್ತರ ಬಂತು ರಾಜನು ಏನು ಮಾಡಲೂ ತೋರದೆ ಮಹದಾತಂಕಯುಕ್ತನಾಗಿ ಅರಮನೆಗೆ ಹೋಗಿ ಮುಸುಗಿಟ್ಟು ಮಲಗಿದನು.

ರಾಜನು ಚಿಂತಾಯುಕ್ತನಾಗಿದ್ದುದರ ಕಾರಣವು ಜಗದೇವನಿಗೆ ತಿಳಿಯಿತು. ಒಡನೆ ಆ ರಾಜಭಕ್ತನು ಮಹಾರಾಜನಲ್ಲಿಗೆ ಹೋಗಿ ತಾನು ಪ್ರಜೆಗಳ ಕ್ಷೇಮಕ್ಕಾಗಿ ತನ್ನ ತನುವನ್ನು ಬಲಿಕೊಡಲು ಸಿದ್ಧನಾಗಿದ್ದೇನೆಂದೂ, ಅದಕ್ಕೆ ಸಮ್ಮತಿಸಬೇಕೆಂದೂ ಬೇಡಿಕೊಂಡು, ತನ್ನ ಪತ್ನಿ ವೀರಮತಿಯೊಂದಿಗೆ ಆ ಸಂಗತಿಯನ್ನು ತಿಳಿಸಿದನು ಪರೋಪಕಾರಧುರೀಣಳಾದ ಆ ಸಾಧ್ವೀರತ್ನವನ್ನು ಕೇಳುವುದೇನು! "ರಮಣಾ, ನೀವು ಈ ಊರಿನ ಪುರುಷರ ಕ್ಷೇಮಕ್ಕಾಗಿ ನಿಮ್ಮ ದೇಹವನ್ನು ಬಲಿ ಕೊಡುವುದಿದ್ದರೆ, ನಾನು ಈ ದೇಶದ ಸ್ತ್ರೀಯರ ಕ್ಷೇಮಕ್ಕಾಗಿ ನನ್ನ ದೇಹವನ್ನು ಬಲಿ ಕೊಡುತ್ತೇನೆ ಇದಕ್ಕೆ ಸಮ್ಮತಿಸಬೇಕು" ಎಂದಳು ಇದನ್ನು ಕೇಳಿದ ಮಗನಾದ ಜಗದ್ಧವಲನು, ತನ್ನ ಪಾವನ ಚರಿತ್ರರಾದ ಆ ತಂದೆತಾಯಿಗಳಿಗೆ ವಂದಿಸಿ "ಓ ಪೂಜ್ಯರಾದ ಮಾತಾಪಿತೃಗಳೇ ನೀವಿಬ್ಬರೂ ಈ ದೇಶದ ಸ್ತ್ರೀಪುರುಷರಿಗಾಗಿ ನಿಮ್ಮ ದೇಹಗಳನ್ನು ಬಲಿಕೊಡುವುದಿದ್ದರೆ, ನಾನೂ ನನ್ನೀ ದೇಹವನ್ನು ಈ ದೇಶದ ಬಾಲಕಬಾಲಿಕೆಯರ ಕ್ಷೇಮಕ್ಕಾಗಿ ಬಲಿ ಕೊಡುತ್ತೇನೆ ಅದಕ್ಕೂ ಸಮ್ಮತಿಸಿರಿ" ಎಂದು ಬೇಡಿಕೊಂಡನು. ಜಗದೇವನಿಗೆ ಪರಮಾಶ್ಚರ್ಯವಾಯಿತು. ಅವನು ಹೆಂಡತಿಮಕ್ಕಳಿಬ್ಬರಲ್ಲಿ ಯಾರನ್ನೂ ನಿವಾರಿಸಲಾರದಾದನು. ಒಡನೆ ಆ ದಂಪತಿಗಳು ನಿರ್ಮಲಮನಸ್ಕತೆಯಿಂದ ತಮ್ಮ ಸಮಸ್ತ ಆಸ್ತಿಯನ್ನೂ ಈಶ್ವರಾರ್ಪಣವಾಗಲೆಂದು ಬಡಬಗ್ಗರಿಗೆ ಹಂಚಿಕೊಟ್ಟು, ಅರಸನ ವಸ್ತ್ರಗಳನ್ನಿಟ್ಟು ತಮ್ಮ ಮಗನೊಂದಿಗೆ ಕಾಳಿಕಾದೇವಾಲಯದ ಸಮೀಪವನ್ನು ಸೇರಿದರು ಆ ವಿಚಿತ್ರವನ್ನು ನೋಡಲು ಸಹಸ್ರಾರು ಜನರು ನೆರೆದರು ಜಗದೇವನು ಕುಟುಂಬಸಮೇತನಾಗಿ ಬಲಿಗೆ ಸಿದ್ಧನಾಗಿದ್ದಾನೆಂಬ ವರ್ತಮಾನವು ರಾಜನಿಗೆ ಮುಟ್ಟಿತು. ಮಹಾರಾಜನು ಗಾಬರಿಯಾಗಿ ಅಲ್ಲಿಗೆ ಓಡಿಬಂದು, ಜಗದೇವನನ್ನು ಕುರಿತು, ಬೇಡ ಬೇಡ ವೆಂದು ನಿವಾರಿಸತೊಡಗಿದನು. ಆಗ ಪುನಃ ಆ ದುಷ್ಟರು ಕಾಳಿಕೆಯ ಹಿಂದಿದ್ದು "ರಾಜಾ ಅವನನ್ನು ನಿರ್ಬಂ

ಧಪಡಿಸದಿರು ಈ ಬಲಿಯಿಂದ ನಿನ್ನ ರಾಜ್ಯಕ್ಕೆ ಕ್ಷೇಮವಾಗುವುದು" ಎಂದು ನುಡಿದರು ರಾಜನು ಮೇಲೆ ಮೇಲೆ ಆಗುತ್ತಿದ್ದ ಇಂತಹ ಸಲಹೆಗಳಿಂದ ಸಂದೇಹಗೊಂಡು, ವಿಗ್ರಹದ ಹಿಂಭಾಗಕ್ಕೆ ಹೋಗಿ ಪರೀಕ್ಷಿಸಲು ಅಲ್ಲೊಬ್ಬನು ಅಡಗಿದ್ದುದು ಕಣ್ಣಿಗೆ ಬಿದ್ದಿತು ಒಡನೆ ಮಹಾರಾಜನು, ಆ ದುಷ್ಟರನ್ನು ಹಿಡಿಸಿ ತಕ್ಕಂತೆ ಶಿಕ್ಷಿಸಿ, ಕಾಳಿಕಾಮಾತೆಯನ್ನು ಇತರ ಸೌಮ್ಯಪೂಜಾದಿಗಳಿಂದ ವಿಶೇಷವಾಗಿ ಪೂಜಿಸಿದನು. ಮತ್ತು ಲೋಕಹಿತಾರ್ಥವಾಗಿ ತನ್ನ ಪ್ರಾಣವನ್ನೂ ತೃಣವಾಗೆಣಿಸಿ ತನ್ನ ರಾಜ್ಯಕ್ಕೆ ಕ್ಷೇಮವನ್ನುಂಟುಮಾಡಬೇಕೆಂದು ಸಿದ್ಧನಾದ ಜಗದೇವ ವೀರಮತಿಯರನ್ನು ವಿಶೇಷರೀತಿಯಿಂದ ಅಭಿನಂದಿಸಿ, ಜಗದೇವನಿಗೆ ತನ್ನ ಮಗಳು ಪ್ರಭಾವತಿಯೆಂಬ ಕನ್ಯಾರತ್ನವನ್ನು ಕೊಟ್ಟು ವಿವಾಹಮಾಡಿ ಅನೇಕಬಗೆಯಿಂದ ಆದರಿಸಿದನು

ಅತ್ತ ಧಾರಾನಗರದಲ್ಲಿ ಉದಯಾದಿತ್ಯನು ವಾಘೇಲಿಯ ಮೋಹಜಾಲದಲ್ಲಿ ಸಿಲುಕಿ ರಾಜ್ಯವಿಚಾರದಲ್ಲಿ ಆಲಸನಾಗಿರುತ್ತಿರಲು, ದೇಶದಲ್ಲಿ ಅನ್ಯಾಯ ಅನೀತಿ ದುರಾಚಾರಾದಿಗಳು ಹೆಚ್ಚಿ ಪರರಾಯರು ಬಂದು ರಾಜ್ಯವನ್ನು ಆಕ್ರಮಿಸಿ ರಾಜನನ್ನು ಸೆರೆಮನೆಗೆ ಹಾಕಿದರು. ಆ ಸಂಗತಿಯು ತಿಳಿದೊಡನೆಯೇ ಜಗದೇವನು ವೀರಮತಿಯೊಂದಿಗೆ ಹೊರಟುಬಂದು, ಶತ್ರುಗಳೊಂದಿಗೆ ಯುದ್ಧಮಾಡಿ ಓಡಿಸಿ ತಂದೆಯನ್ನು ಪುನಃ ಸಿಂಹಾಸನಾಸೀನನನ್ನಾಗಿ ಮಾಡಿದನು.

ಆಗ ಧೀರಸಿಂಹಮಂತ್ರಿಯು ಜಗದೇವನನ್ನು ರಾಜ್ಯಭ್ರಷ್ಟನನ್ನು ಮಾಡುವುದಕ್ಕಾಗಿ ವಾಘೇಲಿಯು ಮಾಡಿದ ಕುತಂತ್ರಗಳನ್ನೆಲ್ಲಾ ರಾಜನಿಗೆ ತಿಳಿಸಿದನು ಉದಯಾದಿತ್ಯನು ಅದನ್ನು ತಿಳಿದು ಅಂದಿನಿಂದ ಅವಳ ದುರ್ನಡತೆಗಾಗಿ ಹೇಸಿ, ಅವಳನ್ನು ದೂರೀಕರಿಸಿ, ಸೋಳಂಕೀರಾಣಿಯನ್ನೂ ಜಗದೇವನನ್ನೂ ತನ್ನ ಅಪರಾಧವನ್ನು ಮರೆತು ಬಿಡಬೇಕೆಂದು ಕೇಳಿಕೊಂಡು, ವಿಶೇಷರೀತಿಯಿಂದ ಪ್ರೀತಿಸುತ್ತಿದ್ದನು. ಆದರೂ ಸದ್ಗುಣಮಣಿಯಾದ ಸೋಳಂಕಿಯು ಜ್ಯೇಷ್ಠಪತ್ನಿಯಾದ ವಾಘೇಲಿಯನ್ನು ದೂರೀಕರಿಸಬಾರದಾಗಿ ರಾಜನನ್ನು ಪ್ರಾರ್ಥಿಸಿಕೊಂಡಳು ಮುಂದೆ ಉದಯಾದಿತ್ಯನು ತನ್ನ ಇಬ್ಬರು ಪತ್ನಿಯರೊಂದಿಗೂ, ಜಗದೇವನು ಪತ್ನೀಪುತ್ರರೊಂದಿಗೂ ಸುಖಸಾಮ್ರಾಜ್ಯಗೊಂಡು ವಾಸಿಸುತ್ತಿದ್ದರು



# ಉಪಸಂಹಾರ



ಇದು ಕಲ್ಪಿತಕಥೆಯಲ್ಲ! ಅಥವಾ ಕಾದಂಬರಿಯಲ್ಲ. ಇದು ನಡೆದ ಗೊತ್ತಾದ ಕಾಲವು ತಿಳಿಯದಿದ್ದರೂ ಮೂಲಗ್ರಂಥದಲ್ಲಿ ಇದು ನಡೆದುದು ಶಾಲಿವಾಹನಶಕದ ಎರಡನೆಯ ಅಥವ ಮೂರನೆಯ ಶತಾಬ್ದಗಳಲ್ಲಿ ಎಂಬುದಾಗಿ ಉದಾಹೃತವಾಗಿದೆ. ಅದು ಹೇಗಿದ್ದರೂ, ಜಗದೇವ ವೀರಮತಿಯರು ತಮ್ಮ ಜೀವಿತದಿಂದ ಲೋಕಕ್ಕೆ ಎಂತಹ ಉದಾಹರಣೆಯನ್ನು ತೋರಿಸಿಕೊಟ್ಟರೆಂಬುದನ್ನು ಗಮನಿಸುವುದಕ್ಕೆ ಶಂಕೆಯೇನು! ಜಗದೇವನು ರಾಜಸೇವೆಯಲ್ಲೇ ಇದ್ದವನು. ಆದರೂ ಆತನ ಕರ್ತವ್ಯನಿಷ್ಠೆ, ಪರೋಪಕಾರಪರಾಯಣತೆ, ನಿಸ್ಪೃಹತೆ, ನಿರಲಸಿಕೆಗಳಿಗೆ ಕುಂದಕಬರಲಿಲ್ಲವಷ್ಟೆ! ಸರ್ವವಿಷಯದಲ್ಲೂ ತಾನು ಮಾಡುತ್ತಿರುವ ಕಾರ್ಯವು ಸರ್ವೇಶನೂ ಸರ್ವಾತ್ಮನೂ ಆದ ಲೋಕೇಶ್ವರನ ಸೇವೆಯೆಂಬ ದೃಢಭಾವನೆಯು ನೆಲೆಗೊಂಡಿತಾಯಿತು. ಅದಕ್ಕೆ ಜಗದೇವನ ಸೇವಾಪದ್ಧತಿಯು ಉತ್ತಮ ಉದಾಹರಣೆಯಲ್ಲವೆ! ಅಲ್ಲದೆ, ಗ್ರಂಥಾದಿಯಲ್ಲಿ ವಿಜ್ಞಾಪಿಸಿಕೊಂಡಂತೆ ಹೀಗೆ ಏಕಾಭಿಪ್ರಾಯ, ಏಕಮನೋಭಾವದಿಂದ ನಡೆದು ಲೋಕೋಪಕಾರ ಕಾರ್ಯದಲ್ಲಿ ತೊಡಗುವ ದಂಪತಿಗಳಿಂದಲೇ ಪ್ರಪಂಚದಲ್ಲಿ ಸಮಸ್ತ ಶುಭಕಾರ್ಯಗಳೂ ಸಿದ್ಧಿಸುವುವಲ್ಲವೆ? ಇಂತಹ ಉತ್ತಮ ಕುಟುಂಬಗಳು ಹುಟ್ಟುತ್ತಾ ಹೋಗಲಿ! ವೀರಮತಿಯಂತೆ, ಪತಿಯನ್ನು ಪರದೈವವೆಂದು ಭಾವಿಸಿ, ಮಹತ್ಸಂಕಟದ ವೇಳೆಯಲ್ಲೂ ಧೈರ್ಯವನ್ನು ಬಿಡದೆ, ತಮ್ಮ ಪಾತಿವ್ರತ್ಯವೆಂಬ ರತ್ನದ ಆಭರಣವನ್ನು ಕಾಪಾಡಿಕೊಳ್ಳುವ ಸಾಧ್ವೀಸ್ತ್ರೀಯರು ನಮ್ಮ ಸಹೋದರೀವರ್ಗಕ್ಕೆ ಲಭ್ಯವಾಗಲಿ! ಇಂತಹ ಆದರ್ಶಗಳನ್ನು ಅನುಸರಿಸಿ ಭಾರತೀಯ ಸ್ತ್ರೀಯರು ದಿನದಿನಕ್ಕೆ ಉನ್ನತಿಯ ಮಾರ್ಗವನ್ನು ಹತ್ತುವಂತೆ ಸರ್ವೇಶ್ವರನು ವರದಾನವನ್ನು ಪ್ರಸಾದಿಸಲಿ!

ತಥಾಸ್ತು



-+ ಶ್ರೀರಾಮಸಹಾಯಂ +-

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

**ಮುನ್ನುಡಿ:—**

ಭಾರತದೇಶದ ಸೇವೆಗಾಗಿ ಆಧುನಿಕ ಕಾಲದಲ್ಲಿ ಶ್ರಮಿಸಿದ ಮಹಾಪುರುಷರಲ್ಲಿ, ದೇಶೀಯ ಸಂಸ್ಥಾನಗಳಲ್ಲಿ ಮಂತ್ರಿಪದವನ್ನು ವಹಿಸಿ ಕೆಲಸ ಮಾಡಿದವರೂ ಒಂದು ಉತ್ತಮ ಸ್ಥಾನವನ್ನು ಹೊಂದಲು ಅರ್ಹರಾಗಿರುವರು, ದೇಶೀಯ ಮಹಾರಾಜರ ಆಳ್ವಿಕೆಗೊಳಪಡದೆ, ನೇರವಾಗಿ ಬ್ರಿಟಿಷ್ ಪ್ರಭುತ್ವದವರ ಆಳ್ವಿಕೆಯಲ್ಲೇ ಇರುವ ಹಿಂದೂಸ್ಥಾನದ ಇತರ ಭಾಗಗಳಲ್ಲಿ ವಸಿಸಿ ದೇಶೋದ್ಧಾರಕ್ಕಾಗಿ ಶ್ರಮಿಸತಕ್ಕ ದೇಶಭಕ್ತನಿಗೆ ಆವಶ್ಯಕವಾಗಿ ಇರಬೇಕಾದುವೆಂದು ನಾವು ತಿಳಿದುಕೊಂಡಿರುವ ಸ್ವಜನಾಭಿಮಾನ ಸ್ವದೇಶಾಭಿಮಾನ ಸ್ವಭಾಷಾಭಿಮಾನಗಳೂ, ನಿಸ್ಪೃಹತೆ ನಿಷ್ಪಕ್ಷಪಾತತೆಗಳೂ, ಧೈರ್ಯೌದಾರ್ಯಾದಿಗಳೂ, ದೇಶೀಯ ರಾಜಾಶ್ರಯದಲ್ಲಿದ್ದು ಆಯಾ ಸಂಸ್ಥಾನದ ಅಭಿವೃದ್ಧಿಗಾಗಿ ಶ್ರಮಿಸತೊಡಗುವ ಮಹನೀಯರಲ್ಲೂ ಇರಬೇಕಾದುದು ಅತ್ಯಾವಶ್ಯಕವು ರಾಜ್ಯಭಾರವೆಂಬ ಶಕಟದ ರಾಜ-ಪ್ರಜೆಗಳೆಂಬೆರಡು ಚಕ್ರಗಳಲ್ಲಿ ಒಂದನ್ನು ಏರಿಗೂ ಮತ್ತೊಂದನ್ನು ನೀರಿಗೂ ತಳ್ಳದೆ, ಉತ್ತಮ ಮಾರ್ಗದಲ್ಲಿ ನಡೆಯಿಸಿಕೊಂಡೊಯ್ದು ಗಮ್ಯಸ್ಥಾನವನ್ನು ಸುರಕ್ಷಿತವಾಗಿ ತಲುಪಿಸಲು ಶಕ್ತರಾದ ಮಂತ್ರಿವರ್ಯರೆಂಬ ಜಾತ್ಯಶ್ವಗಳು ಸರ್ವಸಾಧಾರಣವಾಗಿ ಎಲ್ಲೆಲ್ಲೂ ಸಿಕ್ಕುವುದಿಲ್ಲ ಭಾರತದೇಶದ ಅನೇಕ ಸಂಸ್ಥಾನಗಳಲ್ಲಿ ಆದಿಯಿಂದಲೂ ಕೆಲಸಮಾಡುತ್ತಾ ಬಂದ ಬಹುಮಂದಿ ಮಂತ್ರಿಗಳಲ್ಲಿ, ತಮ್ಮ ಉದ್ಯೋಗಧರ್ಮವೇನು, ತಮ್ಮ ಕರ್ತವ್ಯವೇನು, ದೇಶದ ಸ್ಥಿತಿಗತಿಗಳೇನು, ದೇಶದ ಮತ್ತು ದೇಶೀಯರ ಅಭಿವೃದ್ಧಿಗೆ ಆವಶ್ಯಕಗಳಾದ ಕಾರ್ಯಗಳಾವುವು ಎಂಬಿವನ್ನು ಸಾವಧಾನದಿಂದ ಯೋಚಿಸಿ, ಅಹರ್ನಿಶಯೂ ತದೇಕಾಯತ್ತಚಿತ್ತರಾಗಿ ಕರ್ಮಯೋಗಿಗಳೋ ಎಂಬಂತೆ ಸೇವಾತತ್ಪರರಾಗಿದ್ದು ಕೀರ್ತಿಶೇಷರಾದವರು, ಎಲ್ಲೋ ಸ್ವಲ್ಪ ಮಂದಿ ಮಾತ್ರ ದೊರೆಯುವರು. ಮಿಕ್ಕವರಲ್ಲಿ ಆ ಮಹಾರಥವನ್ನು ಯೋಗ್ಯರೀತಿಯಿಂದ ಎಳೆಯಲಾರದೆ ಎಡಹಿ ಮುಗ್ಗರಿಸಿ, ಚಕ್ರಗಳನ್ನು ಏರುತಗ್ಗುಗಳಿಗೆಳೆದು ತಮ್ಮ ಕಾಲವನ್ನು ಕಳೆದುಕೊಂಡು ನಾಮಾವಶೇಷವಾದವರು ಕೆಲವರು ತಿಂಗಳಿಗೆ ನಾಲ್ಕೈದು ಸಹ

ಸ್ವದ್ರವ್ಯದ ವೇತನವನ್ನು ಹೊಂದಿ, ಕಣ್ಣುಕಾಣದೆ ಸುಖಭೋಗಗಳಲ್ಲಿ ಮುಳುಗಿ ರಾಜಪ್ರಜೆಗಳಿಬ್ಬರಿಗೂ ದ್ರೋಹಮಾಡಿ ಒಂದುದಿನ ಕಣ್ಣುಮುಚ್ಚಿಕೊಂಡವರು ಕೆಲವರು. ಒಂದೆರಡು ದಿನ ಆ ಅಧಿಕಾರಪದವಿಗಳ ಮದದಿಂದ ಮುಂಗಾಣದೆ ಮೆರೆದು ಪ್ರಜೆಗಳನ್ನು ಬಹುವಿಧ ಕಿರುಕುಳಗಳಿಗೆ ಒಳಪಡಿಸಿ ಅವರ ಶಾಪ-ಕೋಪ ತಾಪಗಳ ಫಲಗಳನ್ನು ಮಡಲಲ್ಲಿ ಕಟ್ಟಿಕೊಂಡು ಕಾಡಿಗೆ ಕಾಲುಚಾಚಿದವರು ಮತ್ತೆ ಕೆಲವರು!

ಪ್ರಕೃತ ನಮ್ಮ ಚರಿತ್ರನಾಯಕನಾದ ಸಾಲಾರಜಂಗ್ ಬಹಾದೂರನು ದೇಶೀಯ ಸಂಸ್ಥಾನಗಳ ಮಂತ್ರಿವರ್ಗದಲ್ಲಿ ಉತ್ತಮ ತರಗತಿಗೆ ಸೇರಿದವನು. ಈತನ ಕಾಲದಲ್ಲಿ ಹೈದರಾಬಾದು ಸಂಸ್ಥಾನವು ಅತಿಶಯ ಅಭಿವೃದ್ಧಿಸ್ಥಿತಿಗೆ ಬಂದು ಸಂಪನ್ನರು ಮರ್ಯಾದೆಯಿಂದ ಸುರಕ್ಷಿತವಾಗಿ ವಾಸಿಸಲು ಯೋಗ್ಯವಾಯಿತು ಸಾಲಾರಜಂಗನಲ್ಲದೆ, ಜಳ್ಳಿದೆಯ ಮತ್ರಾತ್ಯವನಾದರೂ ಆಗಿದ್ದರೆ, ಹೈದರಾಬಾದಿನಲ್ಲಿ ಆತನ ಆಳ್ವಿಕೆಯ ಪ್ರಾರಂಭದಲ್ಲಿದ್ದ ಕಷ್ಟ ನಿಷ್ಠುರಗಳಿಗೆ ಎದೆಯೊಡ್ಡಲು ಸಾಧ್ಯವಿರುತ್ತಿರಲಿಲ್ಲ. ಸಂಸ್ಥಾನದಲ್ಲಿ ಹೆಚ್ಚಿಹೋಗಿದ್ದ ಅರಬ್ಬಿಯವರ ಪ್ರಾಬಲ್ಯವನ್ನು ಅಡಗಿಸಿದುದೂ, ಮೂರು ನಾಲ್ಕು ಕೋಟಿ ರೂಪಾಯಿಗಳ ಋಣಭಾರವನ್ನು ಹೊತ್ತು ಹೆಣಗುತ್ತಿದ್ದ ದೇಶದ ಆರ್ಥಿಕ ಸ್ಥಿತಿಯನ್ನು ರೂಢಿಸಿದುದೂ, ದೇಶದ ಆದಾಯ ವ್ಯಯಗಳನ್ನು ನಿಶ್ಚಯಸ್ವರೂಪಕ್ಕೆ ತಂದು ಸಂಸ್ಥಾನವನ್ನು ಬದುಕಿಸಿದುದೂ, ಎಲ್ಲಕ್ಕೂ ಹೆಚ್ಚಾಗಿ ೧೮೫೭ ರಲ್ಲಿ ನಡೆದ ಶಿಪಾಯಿದಂಗೆಗೆ ಸಂಸ್ಥಾನವು ಒಳಪಡದಂತೆ, ಬ್ರಿಟಿಷ್ ಪ್ರಭುವರ್ಗದವರಿಗೆ ಮಹಾಭಯವನ್ನುಂಟುಮಾಡುತ್ತಿದ್ದ ಪ್ರಜಾವರ್ಗದವರ ಮನಸ್ಸಮುದ್ರದ ಮೇರೆ ಮೀರದಂತೆ-ಅವರ ಆಶಯವೆಂಬ ಕೆರೆಯ ಒಡ್ಡು ಒಡೆಯದಂತೆ, ಮಹಾ ಧೈರ್ಯದಿಂದ ತಡೆಗಟ್ಟಿದುದೂ, ಸಾಲಾರಜಂಗನ ರಾಜನೀತಿ ನೈಪುಣ್ಯವನ್ನೂ, ಆತನ ಕರ್ತವ್ಯನಿಷ್ಠೆಯನ್ನೂ, ಧೈರ್ಯಸಾಹಸಗಳನ್ನೂ, ರಾಜಭಕ್ತಿ-ಪ್ರಜಾಸೇವೆಗಳಲ್ಲಿದ್ದ ಆತನ ಅನನ್ಯಪರತೆಯನ್ನೂ ವ್ಯಕ್ತಗೊಳಿಸುತ್ತವೆ—ಇಂತಹ ಮಂತ್ರಿಶ್ರೇಷ್ಠರು ರಾಜ್ಯಪಾಲನೆಗೆ ಏರ್ಪಟ್ಟರೆ ಪ್ರಜೆಗಳ ಭಾಗ್ಯತರುವು ಫಲಿಸಿದಂತಿರುವುದು; ಇಂತಹ ಸೇವಾಧುರೀಣರು ಮಂತ್ರಿಪದಕ್ಕೆ ಬಂದರೆ ದೇಶೀಯರು ಸುಖಸಂತೋಷಗಳನ್ನು ಹೊಂದಿ ಕ್ಷೇಮದಿಂದಿರುವರು, ಇಂತಹ ನಿಸ್ಪೃಹ ಕಾರ್ಯಸಾಧಕರು ಪ್ರಭುತ್ವವನ್ನು ಪಡೆದರೇಯೇ, ಪ್ರಜೆಗಳು ತಾಯಿಯ ತೊಡೆಯಮೇಲೆ ಮಲಗಿ-ಮೇಲ್ಮಸುಕಿನ ಆಶ್ರಯದಲ್ಲಡಗಿ ನಿರ್ಭೀತಿಯಿಂದ ಅಮೃತಪಾನಮಾಡುತ್ತಿರುವ ಮಗುವಿನಂತೆ ನಿರಾತಂಕವಾಗಿದ್ದು ಶಾಂತರಾಗಿ ಪುಷ್ಟರಾಗಿ ತುಷ್ಟರಾಗಿ ಜೀವಿಸುವರು.—ಅಲ್ಲವೆ?

ಬೆಂಗಳೂರು ಸಿಟಿ
೧೦—೫—೧೯೨೬

ಇತಿ ಸುಜನ ವಿಧೇಯ,
ಯಂ. ರಾಮರಾವ್.

ಸುಬೋಧ ಕುಸುಮಾಂಜಲಿ ಗ್ರಂಥಮಾಲಾ ನೇ ೧೯೨೬



ಹೈದರಾಬಾದಿನ ಮಂತ್ರಿಶ್ರೇಷ್ಠರಾದ

**ಸರ್ ಸಾಲಾರ್ ಜಂಗ್ ಬಹಾದುರ್ ಜಿ. ಸಿ. ಎಸ್. ಐ.**

ಶ್ರೀರಾಮ ಸಹಾಯಂ

ಹೈದರಾಬಾದಿನ ಮಂತ್ರಿಶ್ರೇಷ್ಠರಾದ

# ಸರ್ ಸಾಲಾರ್ ಜಂಗ್



## ಅಧ್ಯಾಯ ೧ "ಜನನ-ಬಾಲ್ಯ"

ಸರ್ವಸಂಪತ್ಸಮೃದ್ಧವಾದ ಈ ಭಾರತದೇಶವನ್ನು ನಮ್ಮ ಮಾತೃಭೂಮಿಯೆಂದು ಅಡಿಗಡಿಗೆ ಹೇಳಿಕೊಂಡಿರಬೇಕಾದ ಆವಶ್ಯಕತೆ ಏನೆಂದು ಕೆಲವರಿಗೆ ತೋರಬಹುದು! ಮತ್ತೆ ಕೆಲವರು ಬೇಸರಪಟ್ಟುಕೊಳ್ಳಬಹುದು! ಆದರೇನು? ಮಾತೃನಾಮೋಚ್ಚಾರಣೆಯು ಬೇಸರವನ್ನುಂಟುಮಾಡಕೂಡದುದೂ, ಸಾಕೆಂದು ನಿಲ್ಲಿಸಕೂಡದುದೂ ಆಗಿರುವುದು ಮನುಷ್ಯನಿಗೆ ಬಂಧುಬಾಂಧವರಲ್ಲಿ ಮತ್ತಾರಾದರೂ ಭಾರವಾಗಿ ತೋರಬಹುದು ಮತ್ತಾರಾದರೊಬ್ಬರ ಇರುವಿಕೆಯು ಬೇಸರವೆನ್ನಿಸಬಹುದು. ಹೆತ್ತತಾಯಿಯ ವಿಷಯವು ಭಾರವಾಗಿ-ಬೇಸರವಾಗಿ ತೋರಿತೆಂದರೆ, ಅದು ಅವನ ವಿನಾಶಕಾಲವನ್ನು ಸೂಚಿಸತಕ್ಕ ಚಿಹ್ನೆಯಾಗಿರುವುದು ಒಂಬತ್ತು ತಿಂಗಳಕಾಲ ಹೊತ್ತು, ಹೆತ್ತು-ಹೊರದ, ಪರಮಪೂಜ್ಯವೆಸ್ತುವಾದ ತಾಯಿಯನ್ನು ಹತ್ತುಹಣಕ್ಕಾಗಿ ಬಂದ ಹಗರಣದ ಹಂಡತಿಗಾಗಿ ಮರೆತು-ತುಚ್ಛೀಕರಿಸಿ-ನಿಂದಿಸಿ-ತ್ಯಜಿಸಲೆತ್ತಿಸುವ ನೀಚನಿಗೆ ಮಾತ್ರವಲ್ಲದೆ ಮತ್ತಾವನಿಗೂ, ಎಷ್ಟು ಕಾಲವಾದರೂ-ಆ ತಾಯಿಯು ಎಷ್ಟು ದುರ್ಬಲಳಾದರೂ, ಎಷ್ಟು ವೃದ್ಧಳಾದರೂ, ಎಷ್ಟು ಕುರೂಪಿಯಾಗಿದ್ದರೂ, ದೀನಳಾಗಿದ್ದರೂ ಆಕೆಯ ವಿಷಯದಲ್ಲಿ ಬೇಸರವುಂಟಾಗಲಾರದು. ಹಾಗೆಯೇ ದೇಶಮಾತೆಯ ವಿಷಯವಾದರೂ! ಯಾವನು ಹೆರವರ ಹತ್ತುಹಣದ ಆಸೆಗೆ ಬಾಯ್ತೆರದು ಸ್ವಾರ್ಥಕ್ಕೆ ದಾಸನಾಗಿ, ತನ್ನವರ ಕುತ್ತಿಗೆಯನ್ನೊತ್ತಿ ಬದುಕಲೆತ್ತಿಸುವನೋ ಅಂಥವನಿಗೊಬ್ಬನಲ್ಲದೆ ಮ

ತ್ತಾರಿಗೂ ದೇಶವಿಷಯದಲ್ಲಿ ಎಂದೆಂದಿಗೂ ತುಚ್ಛ ಭಾವನೆಯು ತೋರದು ಅಸತ್ಯವು ಉದಯಿಸದು. ದುರ್ದೈವದಿಂದ ನಮ್ಮ ಮಾತೃಭೂಮಿಯು ಬಡತನ ಸ್ಥಿತಿಗೊಳಪಟ್ಟಿರಬಹುದು ದಾರಿದ್ರ್ಯದಿಂದ ದೇಶದ ಸ್ಥಿತಿಗತಿಗಳ ರೂಪು ಕೆಟ್ಟಿರಬಹುದು ದೇಶಬಾಂಧವರು ಅಶಕ್ತರಾಗಿ ಕುರೂಪಿಗಳಾಗಿ ದೀನರಾಗಿ ತೋರಬಹುದು ಆದ ಮಾತ್ರಕ್ಕೆ ದೇಶ-ದೇಶೀಯರನ್ನು ಪ್ರೀತಿಸದಿರಬೇಕಾದ ಕಾರಣವೇನು! ಮಾತೆಗೆ ಬಂದ ದೀನತೆಯ ವೇಳೆಯಲ್ಲಿ, ಆಕೆಯ ಪಾದವನ್ನು ಹಿಡಿದು ಕುಳಿತು, ಸೇವಿಸಿ, ಸಾಧ್ಯವಿದ್ದುದನ್ನೆಲ್ಲಾ ಮಾಡಿ, ಸಕಲ ಉಪಾಯಗಳಿಂದಲೂ ಆ ದೀನಸ್ಥಿತಿಯಿಂದ ತಪಿಸಿ ಸುಸ್ಥಿತಿಯನ್ನುಂಟುಮಾಡಲೆತ್ನಿಸುವವನೇ ಪುತ್ರನೆನಿಸಿಕೊಳ್ಳಲು ಅರ್ಹನು! ಮಾತೆಯ ವಿಷಯದಲ್ಲಿ ಬೇಸರನಡಕೂಡದು. ಮಾತೃವೆಂಬ ವಸ್ತುವು ಅತ್ಯಪೂರ್ವವಾದುದು ಧನಕನಕ-ಭೂಮಿಕಾಣಿಗಳೂ, ಪತ್ನೀಪುತ್ರಾದಿಗಳೂ ನಷ್ಟವಾದರೆ ಮನುಷ್ಯನು ಪುನಃ ಸಂಪಾದಿಸಬಹುದು ಮಾತಾ-ಪಿತೃಗಳು ನಷ್ಟವಾದರೆ ಪುನಃ ಸಂಪಾದಿಸಲು ಸಾಧ್ಯವೇ ಎಷ್ಟು ಕೋಟಿ ದ್ರವ್ಯವನ್ನು ಕೊಟ್ಟು ಹೆತ್ತತಾಯಿಯನ್ನು ಪಡೆಯಲು ಸಾಧ್ಯವಿರುವುದು? ಹಾಗೆಯೇ ದೇಶಮಾತೆಯೂ! ಜನನಿಗೂ ಜನ್ಮಭೂಮಿಗೂ ವ್ಯತ್ಯಾಸವಿಲ್ಲ!—

ಭಗವಂತನಲ್ಲಿ ಭಕ್ತಿಯು ಉದಯಿಸಬೇಕಾದರೆ, ಭಗವತ್ಕಥಾಶ್ರವಣ, ಭಗವದ್ಗುಣಕೀರ್ತನ, ಭಗವಚ್ಚರಣಸ್ಮರಣಗಳು ಪ್ರಥಮಸೋಪಾನಗಳಾಗಿರುವವಷ್ಟೆ! ಹಾಗೆಯೇ ಜನ್ಮಭೂಮಿಯ ವಿಷಯದಲ್ಲಿ ಭಕ್ತಿಯುಂಟಾಗಬೇಕಾಗಿದ್ದರೂ, ಮೊದಲು ದೇಶದ ಪೂರ್ವೋನ್ನತಿಯ ವಿಷಯದ ಚರಿತ್ರಶ್ರವಣ ಅಥವಾ ಪಠನವಾಗಬೇಕು ಅದರ ಉತ್ಕೃಷ್ಟತೆಯ ಕೀರ್ತನೆಯು ನಡೆಯಬೇಕು ಅಂತೆಯೇ ಅದರ ಸ್ಮರಣೆಯಾದರೂ ಅವಿಚ್ಛಿನ್ನವಾಗಿ ದೃಷ್ಟಿಪಥಕ್ಕೆ ಬರುತ್ತಿರಬೇಕು ಹಿಮವತ್-ವಿಂಧ್ಯಾಚಲಾದಿ ಪರ್ವತರಾಜಗಳೂ ಗಂಗಾಸಿಂಧು ಬ್ರಹ್ಮಪುತ್ರ-ಕೃಷ್ಣ ಗೋದಾವರಿ ಕಾವೇರಿ ಮುಂತಾದ ಮಹಾ ನದಿಗಳೂ ದಿವ್ಯಕ್ಷೇತ್ರಗಳೂ, ಸುಪ್ರಸಿದ್ಧರಾಗಿದ್ದ ಆರ್ಯರಾಜರ, ಮತ್ತು ಧರ್ಮಸ್ಥಾಪಕರ ದಿಗ್ವಿಜಯಗಳಿಂದ ಪವಿತ್ರವೆನಿಸಿದ ಕಾರ್ಯಕ್ಷೇತ್ರಗಳೂ ಅವರ ಅಪೂರ್ವ-ಅಮೃತ ಚರಿತ್ರೆಗಳೂ ದೇಶದ ಸಕಲ ಭಾಗಗಳಲ್ಲೂ ತುಂಬಿರುತ್ತಿರಲಾಗಿ ದೇಶದ ಕಥೆಯ ಶ್ರವಣ-ಕೀರ್ತನ-ಸ್ಮರಣೆಗಳಿಗೆ ಸಾಧ

ನಗಳು ಸಿಕ್ಕಲಾರವೆ? ಅವುಗಳನ್ನು ಧಾರ್ಮಿಕ ಮನೋಭಾವನೆಯಿಂದ ಸಂಗ್ರಹಿಸಿ ಹೇಳಿ, ಅವುಗಳ ವಿಷಯದಲ್ಲಿ ಸರ್ವರಿಗೂ ಭಕ್ತಿಯೂ ಪೂಜ್ಯಭಾವನೆಯೂ ಉಂಟಾಗುವಂತೆ ಮಾಡತಕ್ಕದು ವಿದ್ಯಾವಂತರಾದವರ-ಅಕ್ಷರಸ್ಥರಾದವರ ಕರ್ತವ್ಯರಾಗಿರುವುದು

ಅನೇಕರಿಗೆ ಒಂದು ಸಂದೇಹವಿದೆ! ಒಬ್ಬನು ದೇಶಭಕ್ತನಾಗಿರಬೇಕಾದರೆ ಪರಕೀಯರಿಗ ವಿರೋಧಿಯಾಗಿರಬೇಕೆಂದು ಕಲವರು ಎಣಿಸಬಹುದು! ಹಾಗಲ್ಲ ಪರರನ್ನು ದ್ವೇಷಿಸದೆಯೇ ನಮ್ಮ ತಾಯಿಯರಿಗೆ ನಾವು ಭಕ್ತರಾಗಿರಲು, ಸಾಧ್ಯವಿಲ್ಲವೆ? ಹಾಗೆಯೇ, ನಾವು ನಮ್ಮ ದೇಶ ಮತ್ತು ದೇಶೀಯರ ವಿಷಯದಲ್ಲಿ ಭಕ್ತಿಶ್ರದ್ಧಾಭಿಮಾನಗಳನ್ನು ವಹಿಸಿರಬೇಕೆಂದರೆ ಮಾತ್ರಾರನ್ನೂ ದ್ವೇಷಿಸಬೇಕಾಗಿಲ್ಲ. ಮತ್ತೆ ಕಲವರಿಗೆ ಇನ್ನೊಂದು ಸಂಶಯವಿರಬಹುದು ದೇಶಭಕ್ತರಾಗಬೇಕೆಂದರೆ, ಸಕಲ ಬಂಧುಬಾಂಧವರನ್ನೂ-ತನ್ನದೆನಿಸಿಕೊಳ್ಳುವ ಸಕಲವನ್ನೂ ತ್ಯಜಿಸಿ ಖಡ್ಗಹಸ್ತನಾಗಿ ರಣರಂಗಕ್ಕೆ ನಡೆದು ತಲೆಯನ್ನು ತೆರಬೇಕಾಗಬಹುದೆಂದೂ ಅದೇ ದೇಶಭಕ್ತಿಯೆಂದೂ ಅವರು ತಿಳಿದಿರಬಹುದು ಹಾಗೂ ಅಲ್ಲ. ದೇಶಭಕ್ತಿಯನ್ನು ತೋರಿಸಲು ಪ್ರಾಣಬಿಡತಕ್ಕುದೇ ಮುಖ್ಯವಲ್ಲ ಇದ್ದು ಕೆಲಸಮಾಡಬೇಕಾದುದು ಅವಶ್ಯಕವು ಮಡಿದುಮಣ್ಣು ಕೂಡತಕ್ಕದಲ್ಲ-ಬದುಕಿಬಾಳಲೀಸುವುದು ಅಗತ್ಯವಾದುದು. ದೇಶದ ಮತ್ತು ದೇಶೀಯರ ಬಾಹ್ಯಚಿಹ್ನಗಳಿಂದ ಅಥವ ಬಾಹ್ಯವೇಷ ಭೂಷಣಗಳಿಂದ ಅವರ ವಿಷಯದಲ್ಲಿ ಸ್ನೇಹ ಅಥವ ದ್ವೇಷಗಳನ್ನು ವಹಿಸದೆ, ಆತ್ಮೀಭಾವವುದಯಿಸಿ, ಸಕಲರೂ ನಮ್ಮವರು, ನಮ್ಮ ದೇಶೀಯರು, ನಮ್ಮ ಬಾಂಧವರು ಎಂಬ ಅಭಿಮಾನವನ್ನು ವಹಿಸಬೇಕು ದೇಶೀಯರ ವಿಷಯದಲ್ಲಿ ಉತ್ಪನ್ನವಾದ ಅಭಿಮಾನವು, ದೇಶಿಯ ವಸ್ತುಗಳ ವಿಷಯದಲ್ಲೂ ಅಭಿಮಾನವನ್ನು ಹುಟ್ಟಿಸುವುದು ತರುವಾಯ ತಾನು ತನ್ನ ದೇಶದವರನ್ನು ಹೇಗೆ ಪ್ರೀತಿಸುವನೋ ಹಾಗೆಯೇ ತನ್ನ ದೇಶದ ವಸ್ತುಗಳನ್ನೇ ಪ್ರೀತಿಯಿಂದ ಉಪಯೋಗಿಸತೊಡಗುವನು ಅವುಗಳ ರೂಪುಬಣ್ಣಗಳೂ-ನಯ ಒರಟು ತನಗಳೂ ಅವನಿಗೆ ವಿಷಯಗಳಾಗಿರುವುದಿಲ್ಲ ಅವುಗಳು ತನ್ನ ದೇಶದವು ಎಂಬ ಸಂಗತಿಯೇ ಆ ವಸ್ತುಗಳಲ್ಲಿ ಅವನಿಗೆ ಅತಿಶಯ ಸೌಂದರ್ಯವನ್ನು ತೋರಿಸಿಕೊಡುವುವು ಹೀಗೆ ಭಕ್ತಿಭಾವನೆಯಿಂದ ತನ್ನ ಸ್ವದೇಶ

ವಸ್ತುಗಳನ್ನು ಉಪಯೋಗಿಸತೊಡಗುವವನಲ್ಲಿ ದಾಂಭಿಕವಿರುವುದಿಲ್ಲ. ಅವನು ಅದರಿಂದ ಅಹಂಕಾರಪಡುವುದಿಲ್ಲ ಅದನ್ನು ಬೇರೆಯವರ ಮೇಲಿನ ದ್ವೇಷಕ್ಕಾಗಿಯಲ್ಲ, ತನ್ನವರ ಮೇಲಿನ ಪ್ರೇಮಕ್ಕಾಗಿ ಉಪಯೋಗಿಸುತ್ತಿರುವನು. ಹೀಗೆ ಖಡ್ಗವನ್ನು ಹಿಡಿದು ದೇಶಕ್ಕಾಗಿ ಹೋರಾಡುವುದಕ್ಕಿಂತಲೂ ಇತರ ಅನೇಕ ವಿಧಗಳಿಂದ ದೇಶಭಕ್ತಿಯನ್ನು ತೋರಿಸಲು ಸಾಧ್ಯವಿರುವುದು. ನಮ್ಮ ಪೂರ್ವಿಕ ಮಹನೀಯರಲ್ಲನೇಕರು, ಹೀಗೆ ವಿವಿಧ ಮಾರ್ಗಗಳಿಂದ ದೇಶಸೇವೆ ಮಾಡಿರುವರು ದೀನರಿಗೂ ಅಂಗಹೀನರಿಗೂ ಮಾಡುವ ಅನ್ನದಾನ ವಸ್ತ್ರದಾನಗಳು, ಬಡವರಿಗೆ ಉಚಿತವಾಗಿ ಮಾಡಿಸುವ ವಿದ್ಯಾದಾನ ಮುಂತಾದುವೆಲ್ಲಾ ದೇಶಸೇವೆಗಳೇ! ದೇಶದಲ್ಲಿನ ವ್ಯಾಪಾರ ವ್ಯವಸಾಯ ಉದ್ಯೋಗ ಪಶುಪಾಲನೆ ಮುಂತಾದ ಯಾವ ವಿಚಾರದಲ್ಲಿ ಮಾಡುವ ಪರಿಶ್ರಮೆಯೂ ದೇಶಸೇವೆಗೇ ಸಂಬಂಧಪಡುವುದು ರೋಗಾದ್ಯುಪದ್ರವಗಳು ಹರಡದಂತೆ ಪ್ರಯತ್ನಿಸುವುದು, ಅವು ಪ್ರಾಪ್ತವಾದಾಗ ಅವುಗಳ ಉಲ್ಬಣತೆಯನ್ನು ಕಡಮೆಮಾಡುವುದಕ್ಕಾಗಿ ಪ್ರಯತ್ನಿಸುವುದು, ಅವುಗಳ ಬಾಧೆಗೆ ಸಿಕ್ಕು ತೊಂದರೆಪಡುವವರಿಗೆ ಬೇಕಾದ ಸಹಾಯವನ್ನೊದಗಿಸುವುದು, ವಿವಿಧ ರೋಗಬಾಧೆಗಳಿಗೊಳಗಾಗದಂತೆ ತಪ್ಪಿಸಿಕೊಳ್ಳುವ ಮಾರ್ಗವನ್ನು ಬೋಧಿಸುವುದು, ಶೋಧನನಡಿಸುವುದು, ಬರೆಯುವುದು, ಹೀಗ ಎಷ್ಟೋ ಕಾರ್ಯಗಳಿವೆ! ಅವುಗಳನ್ನು ಕೈಕೊಂಡು ನಡೆಯಿಸುವುದೂ ದೇಶಸೇವೆಯೇ ಆಗುವುದು ಅದನ್ನು ಸ್ವಾರ್ಥಸಾಧನೆಗಾಗಿ ಉಪಯೋಗಿಸಿಕೊಂಡು ಮತ್ತೊಬ್ಬನನ್ನು ಮುಣುಗಿಸಲೆತ್ನಿಸದೆ, ದೇಶಹಿತದೃಷ್ಟಿಯಿಂದ ಕೈಕೊಂಡರ ತೀರಿತು. ಹೀಗೆ ಯಾವ ಯಾವ ವಿಧಗಳಿಂದ ದೇಶಸೇವೆಮಾಡಬಹುದೆಂಬುದನ್ನು ಮಹನೀಯರ ಚರಿತ್ರಶ್ರವಣದಿಂದ ತಿಳಿಯಬಹುದು ನಮ್ಮ ಕಥಾನಾಯಕನೂ, ಕೇವಲ ಅವ್ಯವಸ್ಥಿತವಾಗಿದ್ದ ತನ್ನ ಮಾತೃದೇಶವನ್ನು, ರಾಜಸೇವೆಗೆ ನಿಂತು ಎಷ್ಟು ಬಗೆಯಿಂದ ಊರ್ಜಿತಸ್ಥಿತಿಗೆ ತಂದನೆಂಬುದನ್ನು ಆತನ ಈ ಚರಿತ್ರೆಯಿಂದ ಕಾಣಬಹುದು ದೇಶಭಕ್ತಿಯಿಂದ ಪ್ರೇರಿತನಾಗದಿದ್ದರೆ, ಅದು ಆತನಿಗೆ ಸಿದ್ಧಿಸುತ್ತಿರಲಿಲ್ಲವಲ್ಲವೆ! ಹೀಗೆ ರಾಜಸೇವೆಯಲ್ಲಿದ್ದರೂ ದೇಶಕ್ಕೆ ಅನೇಕ ಬಗೆಯಿಂದ ಪ್ರಯೋಜನಗಳನ್ನುಂಟುಮಾಡಲು ಸಾಧ್ಯವೆಂಬುದನ್ನು ತಿಳಿದು ನಿಸ್ಪೃಹತೆಯಿಂದ ಕೆಲಸಮಾಡುವ ಭಾವನೆಯು ನಮ್ಮವರಲ್ಲಿ ಪ್ರಾಪ್ತವಾಗಲು

ಈ ಮಹನೀಯನ ಚರಿತ್ರೆಯು ತಿಲಾಂಶವಾದರೂ ಸಹಕಾರಿಯಾದರೆ ನಮ್ಮ ಶ್ರಮವು ಸಾರ್ಥಕವಾಯಿತೆಂದುಕೊಳ್ಳುವೆವು.—

ಹಿಂದೂಸ್ಥಾನದಲ್ಲಿ ಅನೇಕ ರಾಜವಾಡೆಗಳಿವೆ. ಅವುಗಳಲ್ಲಿ ಕೆಲವನ್ನು ಹಿಂದೂರಾಜರೂ ಮತ್ತೆ ಕೆಲವನ್ನು ಮಹಮ್ಮದೀಯ ನವಾಬರೂ ಪಾಲಿಸುತ್ತಿದ್ದಾರೆ. ಅಂತಹ ರಾಜವಾಡೆಗಳಲ್ಲೆಲ್ಲಾ ಹೈದರಾಬಾದು ಸಂಸ್ಥಾನವೇ ಬಹು ದೊಡ್ಡದು. ವಿಸ್ತೀರ್ಣ ಜನಸಂಖ್ಯೆಗಳಲ್ಲಿ ಅದು ನಮ್ಮ ಮೈಸೂರು ಸಂಸ್ಥಾನದ ಮೂರರಷ್ಟಿದೆ. ಈ ದೇಶವು ದಕ್ಷಿಣ ಇಂಡಿಯಾ ಪರ್ಯಾಯದ್ವೀಪದ ಮಧ್ಯಭಾಗದಲ್ಲಿ ಪೂರ್ವ ಪಶ್ಚಿಮ ಸಮುದ್ರಗಳಿಗೆ ಸಮದೂರದಲ್ಲಿ ವಿರಾಜಿಸುತ್ತಿದೆ. ಕೃಷ್ಣಾ ಗೋದಾವರೀ ನದಿಗಳೂ ಅವುಗಳ ಮುಖ್ಯ ಉಪನದಿಗಳಾದ ಪೈನಗಂಗ, ವೇಣುಗಂಗ, ಮಂಜೀರ, ತುಂಗಭದ್ರಾ ಮುಂತಾದುವೂ ಪ್ರವಹಿಸುತ್ತಿರುವುದರಿಂದ ಸಂವತ್ಸರದ ಸಕಲ ಕಾಲದಲ್ಲೂ ದೇಶದಲ್ಲಿ ನೀರಾಸರೆಗೆ ಅಭಾವವುಂಟಾಗುವುದಿಲ್ಲ. ಭೂಮಿಯು ಫಲವತ್ತಾದ ಎರೇನೆಲವಾಗಿ ಜತ್ತ, ಗೋಧಿ, ಹತ್ತಿ, ಕಡಲೆ, ಜೋಳ, ಉದ್ದು ಹೆಸರು ಮುಂತಾದ ಸಮಸ್ತ ಧಾನ್ಯಗಳ ಬೆಳೆವಣಿಗೆಗೂ ಉತ್ಕೃಷ್ಟವಾದುದಾಗಿವೆ. ದೇಶದ ಪೂರ್ವಭಾಗದಲ್ಲಿ ವಜ್ರ ಕಲ್ಲಿದ್ದಲುಗಳೂ, ಈಶಾನ್ಯಭಾಗದಲ್ಲಿ ಕಬ್ಬಿಣವೂ ಸಿಕ್ಕುವುವು. ನಿಸರ್ಗಸೌಂದರ್ಯಕ್ಕೆ ಭಾರತದೇಶವೇ ತೌರೂರಾದಮೇಲೆ, ದಿವ್ಯನದೀ ಗಿರಿವನ ಪ್ರದೇಶಗಳಿಂದ ಮನೋಹರವಾದ ಈ ದೇಶದ ಅಂದವನ್ನು ಕೇಳುವುದೇನು?—

ಕ್ರಿಸ್ತಶಕದ ಹದಿನೆಂಟನೆಯ ಶತಮಾನದ ಆದಿಭಾಗದಲ್ಲಿ ದೆಹಲಿಯ ಚಕ್ರವರ್ತಿಯಾಗಿದ್ದ ಫರುಕ್ಸಿಯರ್ ಎಂಬುವನಿಂದ ದಖ್ಖನಿನ ಸುಬೇದಾರಿಗಾಗಿ ನಿಯಮಿತನಾದ ನಿಸಾಮಲ್ ಮುಲ್ಕ್ ಆಸಫ್ ಜಾ ಎಂಬಾತನೇ ಮುಂದೆ ಪ್ರಸಿದ್ಧನಾಗಿ ದಖ್ಖನಿನಲ್ಲಿ ತನ್ನ ಆಳ್ವಿಕೆಯನ್ನು ಬಲಪಡಿಸಿಕೊಂಡನು. ಆದರೆ ಆಸಫ್ ಜಾನ ಮರಣಾನಂತರ ರಾಜ್ಯಕ್ಕಾಗಿ ಜ್ಞಾತಿಗಳಲ್ಲಿ ಒಳಕದನಹುಟ್ಟಿತು. ಹಾಗಾಗಿ ಹೀಗಾಗಿ ಕೊನೆಗೆ ನಿಸಾಮಲ್ಲಿಯು ಸಿಂಹಾಸನಕ್ಕೆ ಬಂದ ವೇಳೆಯಲ್ಲಿ ಬ್ರಿಟಿಷ್ ಪ್ರಭುಗಳೊಂದಿಗೆ ಕರಾರು ಮಾಡಿಕೊಂಡು ಮತ್ತೆ ಬೇರೆಯವರಿಂದ ತೊಂದರೆಯಿಲ್ಲದಂತೆ ಮಾಡಿಕೊಂಡನು. "ಸಬ್ ಸಿಡಿಯರಿಪದ್ಧತಿ" ಎಂಬ ಈ ಕರಾರಿನ ಷರತ್ತುಗಳನ್ನನುಸರಿಸಿಯೇ, ನಿಸಾಮನ

ರಾಜ್ಯದಲ್ಲಿ, ದೇಶದ ರಕ್ಷಣೆಗಾಗಿ ಬ್ರಿಟಿಷ್ ಸೈನ್ಯದ ತುಕಡಿಯೊಂದು ಇರಬೇಕೆಂದು ಏರ್ಪಾಟಾಯಿತು, ಮತ್ತು ಅದರ ಖರ್ಚನ್ನು ನಿಸಾಮನೇ ಭರಿಸಬೇಕಾಯಿತು ಈ ಸೈನ್ಯದ ಖರ್ಚು ವರ್ಷವೊಂದಕ್ಕೆ ನಾಲ್ವತ್ತುಲಕ್ಷ ರೂಪಾಯಿಗಳಾಗುತ್ತಿದ್ದುದರಿಂದ ಕಾಲಾನುಕಾಲದಲ್ಲಿ ಅದನ್ನು ಕ್ರಮವಾಗಿ ಸಲ್ಲಿಸಿಕೊಂಡು ಬರುವುದು ಕಷ್ಟವಾಯಿತು ಆದುದರಿಂದ ಆ ಸೈನ್ಯದ ಖರ್ಚಿಗೆ ಪ್ರತಿಯಾಗಿ ಬೇರಾರು ಪ್ರಾಂತ್ಯವು ಬ್ರಿಟಿಸರ ಸ್ವಾಧೀನಕ್ಕೆ ಹೋಯಿತು.

ಹೈದರಾಬಾದಿನ ನವಾಬವುನೆತನವು ಆ ದೇಶದ ಪಾಲನೆಯಲ್ಲಿ ಹೇಗೆ ಸುಪ್ರಸಿದ್ಧವಾದುದೋ, ನಮ್ಮ ಚರಿತ್ರನಾಯಕನ ಮನೆತನವಾದರೂ ಹಾಗೆಯೇ ಆ ದೇಶದ ಮಂತ್ರಿಪದವನ್ನು ವಹಿಸಿ ಬಹುದಿನಗಳಿಂದಲೂ ಪ್ರಸಿದ್ಧವಾದುದು ಬಹಮನೀರಾಜ್ಯವು ದಖನಿನಲ್ಲಿ ನಾಶವಾದಾಗಿನಿಂದಲೂ ನಮ್ಮ ಚರಿತ್ರನಾಯಕನಾದ ಸಾಲಾರಜಂಗನ ವಂಶದ ಪೂರ್ವಿಕರು ಅದಿಲ್‌ಷಾಹಿ ರಾಜರ ಸಮೀಪದಲ್ಲೂ, ತರುವಾಯ ಮೊಗಲ್ ಚಕ್ರವರ್ತಿಗಳ ಅಧೀನದಲ್ಲೂ, ಕೊನೆಗೆ ನಿಸಾಮನ ಅಧೀನದಲ್ಲೂ ಮಂತ್ರಿಪದವನ್ನು ವಹಿಸಿ ಆ ದೇಶವನ್ನು ಸೇವಿಸಿದರು ನಿಸಾಮ ಸಲಾಬತ್ ಜಂಗನ ಕಾಲದಲ್ಲಿ ಮಂತ್ರಿಪದವನ್ನು ವಹಿಸಿದ್ದ ಷಂಷುದ್ದೀನ್ ಎಂಬಾತನ ಪ್ರತಾಪವು ಇತರರಿಗಿಂತಲೂ ಅತಿಶಯವಾಯಿತು ಈತನು ಏಳುಸಾವಿರ ಅಶ್ವಸೈನ್ಯ ಮತ್ತು ಏಳುಸಾವಿರ ಪದಾತಿಸೈನ್ಯಕ್ಕೆ ಅಧಿಪತಿಯಾಗಿದ್ದು ನವಾಬ್ ಮುನೀರ್ ಉಲ್ ಮುಲ್ಕ್ ಎಂಬ ಬಿರುದನ್ನು ಪಡೆದನು ಈತನ ಮೊಮ್ಮಗನಾದ ಎರಡನೇ ಮುನೀರ್ ಉಲ್‌ಮುಲ್ಕನು ಆಗ ಮುಖ್ಯ ಮಂತ್ರಿಯಾಗಿದ್ದ ಮೀರ್ ಆಲಮನ ಮಗಳನ್ನು ಮದುವೆಯಾದನು. ಮೀರ್ ಆಲಮನು ೧೮೦೮ರಲ್ಲಿ ಮೃತನಾಗಲು ಅಳಿಯನಾದ ಮುನೀರ್ ಉಲ್‌ಮುಲ್ಕನೇ ಮುಖ್ಯ ಮಂತ್ರಿಯಾದನು ಈತನಿಗೆ ಇಬ್ಬರು ಮಕ್ಕಳಿದ್ದರು ಹಿರಿಯವನ ಮಗನೇ ನಮ್ಮ ಚರಿತ್ರನಾಯಕನ ತಂದೆಯು ಕಿರಿಯವನಿಗೆ ಸಿರಾಜ್‌ಉಲ್‌ಮುಲ್ಕ್ ಎಂದು ಹೆಸರು. ಈತನು ತನ್ನ ತಂದೆಯ ತರುವಾಯ ಕೆಲವುಕಾಲದಮೇಲೆ ಎಂದರೆ ೧೮೫೧ರಿಂದ ೧೮೫೩ರವರೆಗೆ ಮಂತ್ರಿಪದವನ್ನು ಅಲಂಕರಿಸಿದ್ದನು ಇವನು ೧೮೫೩ರಲ್ಲಿ ಮೃತನಾದನಂತರವೇ ಸಾಲಾರಜಂಗನು ಮಂತ್ರಿಪದಕ್ಕೆ ಏರಿದನು.

ಸಾಲಾರ್‌ಜಂಗನು ೧೮೨೯ ನೆಯ ಇಸ್ವಿ ಜನವರಿ ೨ ನೇ ತಾರೀಖಿನಲ್ಲಿ ಹುಟ್ಟಿದನು. ಮಗುವು ಹುಟ್ಟಿದ ಕೆಲವು ದಿನಗಳಲ್ಲಿಯೇ ತಂದೆಯನ್ನು ಕಳೆದುಕೊಂಡುದರಿಂದ ಎರಡನೇ ಮುನೀರ್ ಉಲ್ ಮುಲ್ಕನು ಮಗುವನ್ನು ತನ್ನ ಎರಡನೆಯ ಮಗನಾದ ಸಿರಾಜ್ ಉಲ್ ಮುಲ್ಕನ ಪಾಲನೆಗೆ ಒಳಪಡಿಸಿದನು. ಚಿಕ್ಕಂದಿನಲ್ಲೇ ಪಿತೃವಿಹೀನನಾದ ಆ ಮಗುವನ್ನು ಆತನು ಅತಿಶಯ ಪ್ರೇಮದಿಂದ ಪಾಲಿಸುತ್ತಿದ್ದನಾದರೂ ಮಗುವು ಅನೇಕ ರೋಗಗಳಿಗೆ ಒಳಗಾಗಿ ಬಹುಬಾಧೆಪಟ್ಟಿತು. ಇನ್ನೂ ಮೂರುವರ್ಷ ವಯಸ್ಸಿನಲ್ಲಿ ಮಗುವಿಗೆ ವಿಷಮಶೀತಜ್ವರವು ಪ್ರಾಪ್ತವಾಗಲು ಸಾಲಾರನು ಚಿಕ್ಕಪ್ಪನಿಗೂ, ತಾತನಿಗೂ ಬಹು ವ್ಯಸನಕ್ಕೆ ಕಾರಣನಾದನು. ಬಹುದಿನಗಳವರೆಗೂ ಜ್ವರವು ಬಿಡಲೇ ಇಲ್ಲ, ಏಳು ಹಗಲು ಏಳು ರಾತ್ರಿಗಳು ಮಗುವಿಗೆ ಜ್ಞಾನವೇ ಇಲ್ಲದಂತಾಗಿ, ಸತ್ತು ಹೋಗುವುದೆಂದೇ ಎಲ್ಲರೂ ಭಾವಿಸಿದರು. ಆಗ ವೃದ್ಧನಾದ ಮುನೀರ್ ಉಲ್ ಮುಲ್ಕನು ತನ್ನ ಪ್ರೀತಿಗೆ ಪಾತ್ರನಾದ ಆ ಮಗುವಿನ ಪ್ರಾಣರಕ್ಷಣೆಗಾಗಿ ತನ್ನ ಪ್ರಾಣವನ್ನು ಕೊಡುವುದಕ್ಕೆ ಸಿದ್ಧನಾದನು. ಮುಸಲ್ಮಾನರಲ್ಲಿ ತಾಸ್ದಖ್ ಎಂಬ ಒಂದು ಶಾಸ್ತ್ರೋಕ್ತಿಯಾದ ಕ್ರಿಯೆಯು ಆಚರಣೆಯಲ್ಲಿದೆ. ಹಿಂದೆ ಮೊಗಲ್ ಚಕ್ರವರ್ತಿಯಾಗಿದ್ದ ಬಾಬರನೂ ತನ್ನ ಮಗನಾದ ಹುಮಾಯೂನನು ರೋಗಗ್ರಸ್ತನಾಗಿದ್ದಾಗ ಈ ತಾಸ್ದಖ್ ಪ್ರಕ್ರಿಯೆಯಿಂದಲೇ ಅವನಿಗಾಗಿ ತನ್ನ ಪ್ರಾಣವನ್ನು ಕೊಟ್ಟು ಅವನನ್ನು ಬದುಕಿಸಿದ್ದನು. ಹಾಗೆಯೇ ಈಗಲೂ ವೃದ್ಧನಾದ ಮುನೀರ್ ಉಲ್ ಮುಲ್ಕನು ರೋಗಪೀಡಿತನಾಗಿದ್ದ ಆ ಮಗುವಿನ ಹಾಸಿಗೆಯ ಸುತ್ತಲೂ ಮೂರುಸಾರಿ ಪ್ರದಕ್ಷಿಣೆಯನ್ನು ಮಾಡಿ, ಆ ರೋಗವು ತನಗೆ ಬಂದು, ಮಗುವಿಗೆ ಗುಣವಾಗಲೆಂದು ಪ್ರಾರ್ಥಿಸಿಕೊಂಡನು. ಆತನ ದೃಢಭಕ್ತಿ ಎಂತಹುದೋ! ಮಗುವಿಗೆ ಮುಂದೆ ದಿನದಿನಕ್ಕೆ ರೋಗವು ಗುಣವಾಯಿತು. ವೃದ್ಧಮಂತ್ರಿಗೆ ಅದೇ ರೋಗವು ಪ್ರಾಪ್ತವಾಗಿ ದಿನದಿನಕ್ಕೆ ಪ್ರಬಲಿಸಿತು. ಮುನೀರ್ ಉಲ್ ಮುಲ್ಕನು ಕೊನೆಗೆ ೧೮೩೨ರಲ್ಲಿ ಆ ರೋಗದಲ್ಲೇ ಮೃತನಾದನು. ಮುಂದೆ ಮಗುವು ಆರೋಗ್ಯವನ್ನು ಪಡೆದು ತನ್ನ ಬಾಲಲೀಲೆಗಳಿಂದ ಚಿಕ್ಕಪ್ಪನಾದ ಸಿರಾಜ್ ಉಲ್ ಮುಲ್ಕನಿಗೆ ಆನಂದವನ್ನುಂಟುಮಾಡುತ್ತಾ ಬೆಳೆಯುತ್ತೊಡಗಿದನು.



ಅಧ್ಯಾಯ ೨ "ವಿದ್ಯಾಭ್ಯಾಸ–ಉದ್ಯೋಗ"

ನವಾಬ್ ಮೀರ್ ತುರಾಬ್ ಅಲ್ಲಿಖಾನ್ ಸಾಲಾರ್‌ಜಂಗ್ ಸಿರಾಜ್ ಉದ್ ಡೌಲಾ, ಮುಖ್ತ್ಯಾರ್-ಉಲ್-ಮುಲ್ಕ್ ಎಂಬುದು ಸಾಲಾರಜಂಗನ ಸಂಪೂರ್ಣ ಹೆಸರು ಮುಂದೆ ವಯಸ್ಕನಾದ ಮೇಲೆ ಒಂದು ದೊಡ್ಡ ಸಂಸ್ಥಾನದ ಮಂತ್ರಿಪದಕ್ಕೆ ಏರಿದನಾದರೂ ಚಿಕ್ಕಂದಿನಲ್ಲಿ ತುರಾಬ್ ಅಲ್ಲಿಯು ಬಹು ಕಷ್ಟಗಳಿಗೆ ಒಳಗಾಗಿದ್ದನು, ಹಿಂದೆ ಹೇಳಿದಂತೆ, ಕಾಹಿಲೆಯು ಬಹುದಿನಗಳವರೆಗೂ ಬಾಧಿಸಿತಲ್ಲವೆ! ತಾತನಾದ ಮುನೀರ್ ಉಲ್ ಮುಲ್ಕನು ಮೃತನಾದ ತರುವಾಯ ಬೇರೊಂದು ಬಗೆಯ ಕಷ್ಟವು ಪ್ರಾಪ್ತವಾಯಿತು ಮುನೀರ್ ಉಲ್ ಮುಲ್ಕನಿಗೆ ಇಪ್ಪತ್ತೈದು ಲಕ್ಷ ರೂಪಾಯಿಗಳ ಸಾಲವಿತ್ತು. ಈ ಸಾಲವನ್ನು ಆತನು ಮನೆತನದ ಆಸ್ತಿಯ ಅಭಿವೃದ್ಧಿಗಾಗಲೀ ಅಥವ ದುಂದು ಖರ್ಚುಗಳಿಗಾಗಲೀ ಮಾಡಿರಲಿಲ್ಲ ಅದು, ತಾನು ಮುಖ್ಯಮಂತ್ರಿಯಾಗಿದ್ದ ಕಾಲದಲ್ಲಿ ಮಂತ್ರಿಪದದ ತನ್ನ ಗೌರವವನ್ನೂ, ಕೆಲಕೆಲ ಸಂದರ್ಭಗಳಲ್ಲಿ ಸಂಸ್ಥಾನಾಧಿಪತಿಯಾಗಿದ್ದ ನವಾಬನ ಗೌರವವನ್ನೂ ಕಾಪಾಡಿಕೊಂಡು ದರ್ಬಾರಿನ ಖರ್ಚುಗಳಿಗೆ ಒದಗಿಸಲಿಕ್ಕಾಗಿ ಮಾಡಿದುದಾಗಿದ್ದಿತು. ವೃದ್ಧ ಮುನೀರ್ ಉಲ್ ಮುಲ್ಕನು ತೀರಿಕೊಂಡನಂತರ ಆ ಸಾಲದ ಭಾರವು, ಆತನ ವಂಶೀಯರ ಮೇಲೆ ಬಿತ್ತು ಪಿತ್ರಾರ್ಜಿತವಾದ ಆಸ್ತಿಯೆಲ್ಲವೂ ಋಣಭಾರಕ್ಕಾಗಿ ಹೋಗಿ ಬಿಡುವುದೇನೋ ಎಂದು ಎಲ್ಲರೂ ಚಿಂತಿಸತೊಡಗಿದರು. ಆದರೆ ಆಗ ನಿಸ್ಸಾಮನಾಗಿದ್ದ ನಸ್ಸೀರ್ ಉದ್ ದೌಲಾನು, ತನ್ನ ಮಂತ್ರಿಯ ಇಪ್ಪತ್ತೈದು ಲಕ್ಷ ರೂಪಾಯಿಗಳ ಸಾಲವನ್ನೂ ತೀರಿಸುವ ಭಾರವನ್ನು ವಹಿಸಿದನು ಆದರೇನು? ಪಿತ್ರಾರ್ಜಿತವಾದ ಆಸ್ತಿಯ ಬಹು ಭಾಗವು, ಆತನಿಗೆ ಅಧಾರವಾಗಿ ಹೋಯಿತು. ಅಲ್ಲದೆ. ಹೆಂಗಸರು ಧರಿಸುತ್ತಿದ್ದ ನಗನಾಣ್ಯಗಳೂ ಆತನ ಸ್ವಾಧೀನವಾದುವು ಈ ಕಷ್ಟಕಾಲದಲ್ಲಿ ಸಾಲಾರ್‌ಜಂಗನು, ತನ್ನ ಅಜ್ಜಿಯ ಪೋಷಣೆಯಲ್ಲಿದ್ದು ಬೆಳೆದನು ಕಷ್ಟದಲ್ಲಿ ಸಿಕ್ಕಿಕೊಂಡ ಇವರಿಗೆ ಸಿರಾಜ್ ಉಲ್ ಮುಲ್ಕನಿಂದ ಯಾವ ಹೆಚ್ಚು ಸಹಾಯವೂ ದೊರೆಯಲಿಲ್ಲ.

ತುರಾಬ್ ಅಲ್ಲಿಗೆ ಏಳನೇ ವಯಸ್ಸಿನಲ್ಲಿ ಅವರ ಶಾಸ್ತ್ರಪ್ರಕಾರ ಬಿಸ್ಮಿಲ್ಲಾ ವಿಧಿಯು ನೆರವೇರಿತು. ಚಿಕ್ಕಂದಿನಲ್ಲಿ ಅವನ ವಿದ್ಯಾಭ್ಯಾಸವು, ಮುಂದ ಅವನು ಅಲಂಕರಿಸಿದ್ದ ಆ ಅತ್ಯುನ್ನತಪದವಿಗೆ ತಕ್ಕುದಾಗಿ ನಡೆಯಲಿಲ್ಲ. ಹು

ಡುಗನು ಮೊದಲೇ ರೋಗಗ್ರಸ್ತನು. ಸಾಲದುದಕ್ಕೆ ಮೇಲೆ ಆಸ್ತಿಪಾಸ್ತಿಗಳು ಪರಾಧೀನವಾಗಿ ಉಂಟಾದ ತೊಂದರೆ, ಇವುಗಳಿಂದ ಬಾಲ್ಯದಲ್ಲಿ ಕ್ರಮ ವಿದ್ಯಾಭ್ಯಾಸವು ನಡೆಯಲೇ ಇಲ್ಲ ಪ್ರಾರಂಭದಲ್ಲಿ ಅವನಿಗೆ ಅರಬ್ಬೀ ಮತ್ತು ಪಾರಸೀ ಭಾಷೆಗಳನ್ನು ಕಲಿಸಲು ಒಬ್ಬ ಉಪಾಧ್ಯಾಯನನ್ನು ನಿಯಮಿಸಿದರು ಸಾಲಾರನು ಈ ಉಪಾಧ್ಯಾಯನ ಹತ್ತಿರ ಏಳುವರ್ಷಗಳ ಕಾಲ ವಿದ್ಯಾಭ್ಯಾಸ ಮಾಡಿ, ಆ ಎರಡು ಭಾಷೆಗಳಲ್ಲೂ ತಕ್ಕಷ್ಟು ಮಟ್ಟಿಗೆ ವ್ಯುತ್ಪತ್ತಿಯನ್ನು ಸಂಪಾದಿಸಿದನು ಆಗ ಹೈದರಾಬಾದು ಸಂಸ್ಥಾನದಲ್ಲಿ ಇಂಗ್ಲೀಷ್ ಭಾಷಾಭ್ಯಾಸವು ಅಷ್ಟು ವಿಶೇಷವಾಗಿರಲಿಲ್ಲ ಮುಂದೆ ನಾಲ್ಕೈದು ವರ್ಷ ಕಾಲ ಅರಬ್ಬೀ ಪಾರಸೀ ಗ್ರಂಥಗಳಲ್ಲಿ ಕೈಗೆ ಸಿಕ್ಕುವನ್ನು ಓದಿಕೊಳ್ಳುತ್ತಾ, ವಿವಿಧ ವಿಚಾರಗಳಲ್ಲಿ ಅನುಭವವನ್ನು ಸಂಪಾದಿಸಿಕೊಳ್ಳುತ್ತಿದ್ದನು ಸಾಲಾರನು ಇಂಗ್ಲಿಷ್ ವಿದ್ಯಾಭ್ಯಾಸಕ್ಕೆ ಪ್ರಾರಂಭಿಸಿದ್ದು ತನ್ನ ಹತ್ತೊಂಬತ್ತನೆಯ ವಯಸ್ಸಿನಲ್ಲಿ! ಅದಕ್ಕೂ ಮನೆಯಲ್ಲಿ ಬಂದು ಕಲಿಸತಕ್ಕ ಒಬ್ಬ ಉಪಾಧ್ಯಾಯನನ್ನೇ ನಿಯಮಿಸಿದ್ದರು ಸಾಲಾರ್‌ಜಂಗನು ಪ್ರಾರಂಭದಲ್ಲಿ ದಿನಕ್ಕೆ ಅರ್ಧ ಗಂಟೆಯಕಾಲ ಮಾತ್ರ ಆ ಭಾಷೆಯನ್ನು ಅಭ್ಯಾಸಮಾಡುತ್ತಿದ್ದು, ಸ್ವಲ್ಪಮಟ್ಟಿನ ಭಾಷಾಪರಿಚಯವನ್ನು ಹೊಂದಿದನು ಮುಂದೆ, ಅದಕ್ಕಾಗಿ ಹೆಚ್ಚು ಪರಿಶ್ರಮ ಮಾಡಿ, ದಿನದ ಹೆಚ್ಚು ಭಾಗವನ್ನು ಆ ಭಾಷೆಯ ಅಭ್ಯಾಸಕ್ಕಾಗಿಯೇ ವಿನಿಯೋಗಿಸಿ ಶೀಘ್ರಕಾಲದಲ್ಲೇ ತನ್ನ ಮಾತೃಭಾಷೆಯಲ್ಲಿ ಹೇಗೋಹಾಗೆ ಅದರಲ್ಲೂ ಅಷ್ಟುಮಟ್ಟಿನ ಉಪಯೋಗ ಸ್ವಾತಂತ್ರ್ಯವನ್ನು ಹೊಂದಿದನು. ಸಾಲಾರಜಂಗನಿಗ ಇಂಗ್ಲೀಷ್ ಭಾಷೆಯಲ್ಲ ಸಂಭಾಷಣೆ ಮಾಡುವುದರಲ್ಲಿದ್ದ ಸಾಮರ್ಥ್ಯವನ್ನೂ ಆ ಭಾಷೆಯು ಆತನಿಗೆ ಎಷ್ಟುಮಟ್ಟಿಗೆ ಸ್ವಾಧೀನವಾಗಿತ್ತು ಎಂಬುದನ್ನೂ ಕುರಿತು, ಸರ್ ಮಾನಿಯರ್ ವಿಲಿಯಮ್ಸ್ ಎಂಬೊಬ್ಬ ಆಂಗ್ಲೇಯನು ಈ ರೀತಿ ಅಭಿಪ್ರಾಯ ಪಟ್ಟಿದ್ದಾನೆ "ನಾನು ಮಹಾಮಂತ್ರಿಗಳೆಂದು ಪ್ರಸಿದ್ಧರಾದ ಸರ್ ಸಾಲಾರ್ ಜಂಗ್ ಮತ್ತು ಸರ್ ಟಿ ಮಾಧವರಾವ್ ಈ ಇಬ್ಬರೊಂದಿಗೂ ಅವರವರ ಮನೆಗಳಲ್ಲೇ ಕಂಡು ಸಂಭಾಷಣೆ ನಡಿಸಿರುತ್ತೇನೆ ಈ ಇಬ್ಬರೂ ನನ್ನ ಭಾಷೆಯಷ್ಟೇ ಶುದ್ಧವಾದ ಇಂಗ್ಲಿಷ್ ಭಾಷೆಯಲ್ಲಿ ಎಲ್ಲಾ ವಿಚಾರಗಳಲ್ಲೂ ಉತ್ತಮೋತ್ತರವಾಗಿ ಸಂಭಾಷಿಸಲು ಶಕ್ತರಾಗಿದ್ದಾರೆ"

ತುರಾಬ್ ಅಲ್ಲಿಯು ಪ್ರಾರಂಭದಿಂದಲೂ ಗಣಿತ ಲೆಕ್ಕಾಚಾರಗಳನ್ನು ಮೆಚ್ಚಿದನಷ್ಟೆ. ಆದರೆ ಅವನ ಅಜ್ಜಿಯು ಬಹು ಬುದ್ಧಿಶಾಲಿನಿ. ಚಿಕ್ಕವನೇ ಸಂರಕ್ಷಣೆಯ ಭಾರವನ್ನು ವಹಿಸಿದ್ದರೂ ಮನೆಯಲ್ಲಿ ಬಾಲಕರ ಪೋಷಣೆಯು ಮುಖ್ಯವಾಗಿ ಸ್ತ್ರೀಯರಿಂದಲೇ ನಡೆಯುವ ಕ್ರಮವೇ. ಮನೆಯಲ್ಲಿ ತುರಾಬ್ ಅಲ್ಲಿಯ ಮೇಲ್ವಿಚಾರಣೆಯು ಆ ಮುದುಕಿಗೆ ಸೇರಿತು. ಅವನೂ ಆಕೆಗೆ ಸಕಲ ಬಗೆಯಿಂದಲೂ ವಿಧೇಯನಾಗಿ ನಡೆದುಕೊಳ್ಳುತ್ತಿದ್ದನು. ಆಕೆಯು ಅವನಿಗೆ ದೈವಭಕ್ತಿ, ಗುರುಹಿರಿಯರಲ್ಲಿ ವಿಧೇಯತೆ, ನಯ ನಡೆ, ದಯೆ ದಾಕ್ಷಿಣ್ಯ ಎಗಳಲ್ಲಿ ಉತ್ತಮ ಪಾಠವನ್ನು ಕೊಟ್ಟಳು. ಸಾಲರನು ತನ್ನ ಅಜ್ಜಿಯ ಮಾತಿಗೆ ಎಂದೂ ವಿರೋಧವಾಗಿ ನಡೆಯಲಿಲ್ಲ. ಎಂದೂ ಆಕೆಯ ಮನಸಿಗೆ ವ್ಯಸನವನ್ನುಂಟುಮಾಡುವ ಕೆಲಸಗಳನ್ನು ಮಾಡಲಿಲ್ಲ. ಸಿರಾಜ್ ಉಲ್ ಮುಲ್ಕನು ಆ ಕಾಲಕ್ಕೆ ಸಂಸ್ಥಾನದ ಮಂತ್ರಿಯ ಪದವಿಯನ್ನು ಏರಲು, ಜಹಗೀರುಗಳ ವಿಷಯದ ಮೇಲ್ವಿಚಾರಣೆಯನ್ನು ಅನುಭವಶಾಲಿನಿಯಾದ ಸಾಲಾರನ ಅಜ್ಜಿಯೇ ನಡೆಸುತ್ತಿದ್ದಳು. ಅದರ ಸಂಬಂಧ ಹಣಕಾಸುಗಳ ಲೆಕ್ಕಾಚಾರವನ್ನು, ಗುಮಾಸ್ತರಿಂದ ತಿಳಿದು ತನಗೆ ಹೇಳಬೇಕೆಂದು ಆಕೆಯು ಸಾಲಾರನಿಗೆ ನಿಯಮಿಸಿದಳು. ಸಾಲಾರನು, ತನ್ನ ಅಜ್ಜಿಯ ಆ ಮಾತನ್ನು ಮೀರಲಾರದವನೆ, ಲೆಕ್ಕಪತ್ರಗಳನ್ನು ಗಮನವಿಟ್ಟು ಪರೀಕ್ಷಿಸಬೇಕಾಯಿತು. ಇದರಿಂದ ಅವನ ತಲೆಗೆ ಹಣಕಾಸುಗಳ ಲೆಕ್ಕಾಚಾರವೆಂದರೇನೆಂಬುದು ಏರಲು ಸ್ವಲ್ಪ ಸಹಾಯವಾಯಿತು. ಅಲ್ಲದೆ, ಆ ಮುದುಕಿಗೆ ಎಲ್ಲಾ ವಿಚಾರಗಳಲ್ಲೂ ಪೂರ್ಣಪರಿಶ್ರಮವಿದ್ದ ಕಾರಣ, ಆಕೆಗೆ ಸಮರ್ಪಕವಾಗಿ ಲೆಕ್ಕವನ್ನು ಒಪ್ಪಿಸುವುದು ಅವನಿಗೆ ಸುಲಭಸಾಧ್ಯವಾದ ಕೆಲಸವಾಗಿರಲಿಲ್ಲ. ಹೀಗಾಗಿ ಕಾಲಕ್ರಮದಲ್ಲಿ ಆತನಿಗೆ ಲೆಕ್ಕಪತ್ರಗಳಲ್ಲಿ ಅತಿಶಯ ಪ್ರಾವೀಣ್ಯತೆಯುಂಟಾಯಿತು.

ಬಾಲಕನಾದ ಸಾಲಾರ್ ಜಂಗನಿಗೆ ಇತರ ವ್ಯಾಯಾಮಗಳಿಗಿಂತಲೂ ಕುದುರೆಯ ಸವಾರಿಯಲ್ಲಿ ಹೆಚ್ಚು ಅಭಿಲಾಷೆಯಿತ್ತು. ಮಿತಿಮೀರಿದ ಉತ್ಸಾಹದಿಂದ ಸವಾರಿ ಮಾಡುತ್ತಿದ್ದು ಅನೇಕ ಸಂದರ್ಭಗಳಲ್ಲಿ ಆಗಾಗ ಅಪಾಯಕ್ಕೊಳಪಡುತ್ತಿದ್ದನು. ಸಿರಾಜ್ ಉಲ್ ಮುಲ್ಕನ ಸಮೀಪದಲ್ಲಿ ಒಂದು ಜಿರಾಫೆ ಇತ್ತು. ಅದನ್ನು ಏರಿ ಸವಾರಿ ಮಾಡುವುದು ಯಾರಿಂದಲೂ ಸಾ

ಧ ವಿರಲಿಲ್ಲ. ಇದರೆ ಸಾಲಾರನು ಎಲ್ಲರೂ ಭಯಾಶ್ಚರ್ಯಗಳಿಂದ ಚಕಿತರಾಗುವಂತೆ ಅದನ್ನು ಏರಿ ಸವಾರಿ ಮಾಡುವುದಾದರೆ ಬಹು ಇಷ್ಟಪಡುತ್ತಿದ್ದರು.

ಇದುವರೆಗೆ ಗೊತ್ತಾದ ಸಂಗತಿಗಳಿಂದ ಸಾಲಾರನಿಗೆ ಆತನು ಕೊನೆಗೆ ಅಲಂಕರಿಸಿದ ಮಹೋನ್ನತ್ಯಪದವಿಗೆ ಯೋಗ್ಯವಾದ ವಿದ್ಯಾಭ್ಯಾಸವು ನಡೆಯಲಿಲ್ಲವೆಂಬುದು ತಿಳಿಯದೆಯಿಲ್ಲವೆ! ಹಾಗಿದ್ದರೂ ಸಹ! ಆಗ ಹೈದರಾಬಾದಿನಲ್ಲಿ ಶ್ರೀಮಂತರ ಮಕ್ಕಳಿಗೆ ಉದ್ಯೋಗವಾಗುವುದಕ್ಕೆ ವಿದ್ಯಾಭ್ಯಾಸವೇ ಅಷ್ಟು ಮುಖ್ಯವಾದ ಯೋಗ್ಯತೆಯಾಗಿರಲಿಲ್ಲ. ಅದೆಂತಯೂ ಸಾಲಾರಜಂಗನಿಗೂ ಅವನ ಹದಿನಾರನೆಯ ವಯಸ್ಸಿನಲ್ಲೇ ಉದ್ಯೋಗವಾಯಿತು. ಪ್ರಾರಂಭಕ್ಕೆ ಆತನು ತೆಲಿಂಗನ ಮಂಡಲಕ್ಕೆ ಸೇರಿದ ಒಂದಾನೊಂದು ಭಾಗಕ್ಕೆ ತಾಲ್ಲೂಕುದಾರನಾಗಿ ನಿಯಾಮಿಸಲ್ಪಟ್ಟನು. ಆವರೆಗೆ ಆ ಪ್ರಾಂತ್ಯವನ್ನು ವಿಲ್ಡಮ್ಸ್ ಎಂಬೊಬ್ಬ ಆಂಗ್ಲೇಯಾಧಿಕಾರಿಯು ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದನು. ತನ್ನ ಜಹಗೀರಿಯ ಸಂಬಂಧ ಲೆಕ್ಕ ಪತ್ರಗಳನ್ನಿಡುವುದರಲ್ಲಿ ಸ್ವಲ್ಪ ಮಟ್ಟಿಗೆ ನುರಿತಿದ್ದ ಸೂಕ್ಷ್ಮಮತಿಯವನಾದ ಸಾಲಾರ್‌ಜಂಗನಿಗೆ ಆ ತಾಲ್ಲೂಕಿನ ರೆವಿನ್ಯೂ (ಭೂಕಂದಾಯ ಸಂಬಂಧ ವಿಲಾಖೆ) ಮುಂತಾದ ಬಾಬುಗಳ ವಿಚಾರ ನಡೆಸುವುದು ಅಷ್ಟು ಕಷ್ಟವಾಗಿ ತೋರಲಿಲ್ಲ. ಆತನು ಆ ಉದ್ಯೋಗದಲ್ಲಿದ್ದುದು ಎಂಟುತಿಂಗಳ ಕಾಲ ಮಾತ್ರವೇ ಆದರೂ, ಅಷ್ಟರಲ್ಲೇ ಬಹು ಉತ್ತಮೋತ್ತಮವಾಗಿ ಕೆಲಸಮಾಡಿ ಸಮರ್ಥನಾದ ಅಧಿಕಾರಿ ಎನ್ನಿಸಿಕೊಂಡನು. ಆತನ ಆಡಳಿತವು ಕೇವಲ ಪ್ರಾಮಾಣಿಕವಾದುದಲ್ಲೇ ಆದರೂ ಒಂದು ಭಾಗದಲ್ಲಿ ಪ್ರಜೆಗಳಿಗೂ ಮತ್ತೊಂದು ಭಾಗದಲ್ಲಿ ಪ್ರಭುಗಳಿಗೂ ತೃಪ್ತಿಕರವಾಗಿದ್ದಿತು.

ಮುಸೀರ್ ಉಲ್ ಮುಲ್ಕನ ಮರಣಾನಂತರ ಆತನಿಗಿದ್ದ ಸಾಲಕ್ಕಾಗಿ ನಿಜಾಮನಿಗೆ ಆಧಾರವಾಗಿದ್ದ ಆತನ ಭೂಮಿಕಾಣಿಗಳು ಸುಲ್ತಾನನಿಂದ, ಪುನಃ ವಾಪಸುಕೊಡಲ್ಪಟ್ಟುವು. ಸಿರಾಜ್ ಉಲ್ ಮುಲ್ಕನು ಅವುಗಳ ಮೇಲ್ವಿಚಾರಣೆಗಾಗಿ ಹೊರಗಿನವರನ್ನು ತರಲು ಇಚ್ಛೆಯಿಲ್ಲದ, ತಾಲ್ಲೂಕುದಾರಿ ಉದ್ಯೋಗದಲ್ಲಿದ್ದ ತನ್ನ ಅಣ್ಣನ ಮಗನನ್ನೇ, ಆ ಉದ್ಯೋಗವನ್ನು ಬಿಡಿಸಿ, ಜಹಗೀರಿನ ಸಂಪೂರ್ಣ ಮೇಲ್ವಿಚಾರಣೆಗೆ ಇರಿಸಬೇಕೆಂದು ಬಯಸಿದನು. ಮುಂದೆ ಕೆಲವು ದಿನಗಳಲ್ಲೇ ಸಾಲಾರ್‌ಜಂಗನು ತಾಲ್ಲೂಕುದಾರಿ ಉದ್ಯೋಗವನ್ನು ಬಿಟ್ಟು ತನ್ನ ಸ್ವಂತ ಜಹಗೀರಿಯ ಆಡಳಿತಗಳನ್ನೇ ನೋಡಿಕೊಳ್ಳ ತೊಡಗಿದನು. ಹೀಗೆ

ಐದು ವರ್ಷಕಾಲ ಜಹಗೀರಿಯ ಆಡಳಿತದಲ್ಲಿದ್ದ ಕುಂದುಕೊರತೆಗಳನ್ನೆಲ್ಲಾ ನೀಗಿಸುವುದರಲ್ಲೂ ಅದರ ಭೂಕಂದಾಯದ ಉತ್ಪತ್ತಿಯನ್ನು ಅಭಿವೃದ್ಧಿಪಡಿಸುವುದರಲ್ಲೂ ಮಗ್ನನಾಗಿ ಶ್ರದ್ಧೆ, ಉತ್ಸಾಹಗಳಿಂದ ಕೆಲಸಮಾಡಿದನು. ಇದರಿಂದ ಎರಡು ಬಗೆಯ ಪ್ರಯೋಜನವುಂಟಾಯಿತು. ಸಾಲಾರ್‌ಜಂಗನೇ ತಮ್ಮ ಸ್ವಂತದ್ದಾದ ಆ ಜಹಗೀರಿಯನ್ನು ನೋಡಿಕೊಂಡುದರಿಂದ ಅದರ ಸ್ಥಿತಿಯು ಉತ್ತಮಗೊಂಡದ್ದು ಮಾತ್ರವಲ್ಲ, ಆತನು ಮುಂದೆ ಸಂಸ್ಥಾನದ ಆಡಳಿತವನ್ನೇ ಕೈಕೊಂಡು, ಪ್ರಭುತ್ವಸೂತ್ರ ಚಾಲಕನಾದಾಗ ಅತ್ಯಾವಶ್ಯಕವಾಗಿದ್ದ ಅನುಭವವೂ ಇದರಿಂದ ಆತನಿಗೆ ಚೆನ್ನಾಗಿ ಆಯಿತು. ಹೀಗೆ ಸಾಲಾರನು ಪ್ರಾರಂಭದಿಂದಲೂ ಕ್ರಮಪಾರವಾಗಿ ವಿದ್ಯಾಭ್ಯಾಸವು ನಡೆಯದಿದ್ದರೂ, ಅನುಭವವೆಂಬ ಪಾಠಶಾಲೆಯಲ್ಲಿ ನುರಿತನಾದುದರಿಂದ ನೆಪಮಾತ್ರವಾಗಿದ್ದ ಆ ಉದ್ಯೋಗದಿಂದಲೇ ಅತಿಶಯ ಅನುಭವವನ್ನು ಹೊಂದಿ ಆತನು ತನ್ನ ಜೀವಿತಕಾರ್ಯಕ್ಕೆ ಸಿದ್ಧನಾದನು.



## ಅಧ್ಯಾಯ ೩ "ಮಂತ್ರಿಪದಪ್ರಾಪ್ತಿ"

ತ್ರುರಾಬ್ ಅಲ್ಲೀಖಾನ್ ಸಾಲಾರ್‌ಜಂಗನು ಹೈದರಾಬಾದು ಸಂಸ್ಥಾನಕ್ಕೆ ಮಂತ್ರಿಯಾಗಿ ಎಂತಹ ಪ್ರಯೋಜನವನ್ನು ಉಂಟುಮಾಡಿದನೆಂಬುದರ ನಿಶ್ಚಯಸ್ವರೂಪವನ್ನು ತಿಳಿಯಬೇಕಾಗಿದರೆ, ಆತನು ರಾಜ್ಯಸೂತ್ರಗಳನ್ನು ತನ್ನ ಕೈಗೆ ತೆಗೆದುಕೊಳ್ಳುವಾಗ ದೇಶದ ಸ್ಥಿತಿಯು ಹೇಗಿದ್ದಿತೆಂಬುದನ್ನು ಮೊದಲು ತಿಳಿಯಬೇಕು. ಯಾವನೊಬ್ಬ ಮತಸ್ಥಾಪಕನಾಗಲಿ, ಧಾರ್ಮಿಕವ್ಯಕ್ತಿಯಾಗಲಿ, ಅಥವ ದೇಶಭಕ್ತನಾಗಲಿ ಮತಕ್ಕೆ ಧನಾಭಿವೃದ್ಧಿಗೆ ಅಥವ ದೇಶಕ್ಕೆ ಮಾಡಿದ ಪ್ರಯೋಜನದ ನಿಶ್ಚಯಸ್ವರೂಪವನ್ನು ತಿಳಿಯಬೇಕಾಗಿದ್ದರೂ, ಅದನ್ನು ಆತನು ಕಾರ್ಯರಂಗವನ್ನು ಪ್ರವೇಶಿಸುವುದಕ್ಕೆ ಮುಂಚೆ ಇದ್ದ ಸ್ಥಿತಿಯೊಂದಿಗೆ ಹೋಲಿಸದಿದ್ದರೆ ಆತನ ಕಾರ್ಯಗಳಿಂದುಂಟಾದ ಫಲವು ಇಂಥದೇ ಎಂಬುದು ತಿಳಿಯಲಾರದು. ಸಾಲಾರ್‌ಜಂಗನ ಕಾಲಕ್ಕೆ ಹೈದರಾಬಾದು ಸಂ

ಸ್ಥಾನವು, ಅರಬ್ಬಿ ತುರ್ಕೀ ಮುಂತಾದ ದೇಶಗಳಿಂದ ಜೀವನಾರ್ಥವಾಗಿ ಬಂದು ಸೇರಿ, ಕ್ರಮವಾಗಿ ಅದನ್ನೇ ಸ್ವಸ್ಥಳವನ್ನಾಗಿ ಮಾಡಿಕೊಂಡು ಬಿಟ್ಟಿದ್ದ ಪರಟರಾದ ಪುಂಡುಜನಗಳಿಂದ ತುಂಬಿ ಹೋಗಿತ್ತು. ಆ ಸ್ಥಾನವನ್ನು ಬಹು ದಿನಗಳಿಂದ ಓಲೈಸಿಕೊಂಡಿದ್ದ ನವಾಬವಂಶದ ಸಾಮಾಜಿಕರು ಸ್ವಕಾರ್ಯಧುರಂಧರರಾಗಿ ರಾಜನೆಲ್ಲಾದರೂ ಹೋಗಲಿ ರಾಜ್ಯವೆಲ್ಲಾದರೂ ಹೋಗಲಿ ತಮ್ಮ ಬೇಳೆ ಬೆಂದರೆ ತೀರಿತೆಂದು ಸ್ವಾರ್ಥಸಾಧನೋದ್ದೇಶದಲ್ಲಿ ನಿರತರಾಗಿದ್ದರು. ಭೂಮಿಕಾಣಿಗಳಿಂದ ರಾಜ ಬೊಕ್ಕಸಕ್ಕೆ ಬಂದು ಸೇರುತ್ತಿದ್ದ ದ್ರವ್ಯವೂ ಯುಕ್ತದಕ್ಷತೆಗೆ ಒಳಪಡದಿದ್ದುದರಿಂದ ಬಂದುದು ಬಂದಂತೆಯೇ ಲುಪ್ತವಾಗುತ್ತಿತ್ತು. ಈ ಕಾರಣದಿಂದ ಯಾವಾಗಲೂ ಭಂಡಾರದ ತಳವು ಕಾಣಿಸುತ್ತಿತ್ತು. ವಿತರಣೆಯಿಲ್ಲದ ಹೆಚ್ಚು ಖರ್ಚುಗಳಿಗಾಗಿ ದಿನ ಬೆಳಗಾದರೆ ನಾಲಕ್ಕೆ ಹೊರಡಬೇಕಾಗುತ್ತಿತ್ತು. ಸಾಹುಕಾರರ ತಗಾದೆಯೂ, ಬಡ್ಡಿಯ ಹಣವೂ ಕ್ಷಣಕ್ಷಣಕ್ಕೆ ಬೆಳೆಯುತ್ತಿದ್ದುವು. ವಿವೇಕಶಾಲಿಗಳಾಗಿದ್ದ ಮುನೀರ್ ಉಲ್ ಮುಲ್ಕನಂಥ ಮಂತ್ರಿಗಳ ಮಂತ್ರಸಹಾಯವು ನಿಜಾಮನಿಗೆ ದೂರವಾಗಿತ್ತು. ಇಷ್ಟರ ಮಧ್ಯೆ ಪರದೇಶೀಯರಾಗಿ ವಾಣಿಜ್ಯವೃತ್ತಿಯಿಂದ ನಮ್ಮ ದೇಶದಲ್ಲಿ ಪ್ರಬಲರಾಗಿ ರಾಜ್ಯಾಧಿಪತ್ಯವನ್ನೇ ಸ್ಥಾಪಿಸಿದ್ದ ಇಂಗ್ಲೀಷರಾದರೋ ಸರ್ವಭಾಗದಲ್ಲೂ ಆಪ್ತರಂತೆ ಕಂಡು ಬರುತ್ತಿದರೂ ರಾಜತಂತ್ರ ನಿಪುಣನಾದ ಲಾರ್ಡ್ ಡಾಲ್ ಹೌಸ್ಸಿಯು ಯಾವ ಸಂದರ್ಭದಲ್ಲಿ ಯಾವ ಕಾರಣವನ್ನು ಮುಂದು ಮಾಡಿ ದೇಶವನ್ನು ಆಕ್ರಮಿಸುವನೋ ಎಂಬ ಭಯವು ಸರ್ವದಾ ಇದ್ದೇ ಇತ್ತು. ಮುಂದೆ ಕೆಲವು ದಿನಗಳೊಳಗಾಗಿಯೇ ದೂರದೃಷ್ಟಿಯಿಲ್ಲದಿದ್ದ ಸಿರಾಜ್ ಉಲ್ ಮುಲ್ಕನ ಮಂತ್ರಿತ್ವದಲ್ಲಿ, ಸೈನ್ಯರಕ್ಷಣೆಯ ಖರ್ಚೆಗೆಂಬ ನೆಪದಿಂದ ಬೇರಾರು ರಾಯಚೂರುದೊ‌ಅಬ್ ಮತ್ತು ಮಾಲ್ದುರ್ಗ ಪ್ರಾಂತಗಳನ್ನು ಈಸ್ಟ್ ಇಂಡಿಯಾ ಕಂಪೆನಿಯವರು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡು ಬಿಟ್ಟರು. ನಿಜಾಮನ ಬಂಧುಗಳಿಗೆ ಸಲ್ಲಬೇಕಾದ ರಾಜವೇತನವನ್ನು ಕೊಡುವುದಕ್ಕೆ ಸಹ ಭಂಡಾರದಲ್ಲಿ ಹಣವಿಲ್ಲವಾಯಿತು. ನಿಜಾಮನ ಅರಮನೆಯ ಆಭರಣಗಳು ಕೂಡ ಒತ್ತೆಯಿಡಲಟ್ಟು ಇಂಗ್ಲೆಂಡಿಗೆ ಸಾಗಿಹೋದುವು. ಈ ಅವ್ಯವಸ್ಥೆಗಳನ್ನು ಸರಿಪಡಿಸಬೇಕೆಂದು ತೆಗೆದ ಸಂಸ್ಥಾನಿಕ ಋಣವು ಮೂರುಕೋಟಿಯಾಯಿತು!

ಸಿರಾಜ್ ಉಲ್ ಮುಲ್ಕನು, ಜಹಗೀರು ಮುಂತಾದ ಪ್ರಾಂತಗಳು ತನ್ನ ಕಾಲದಲ್ಲಿ ಸಂಸ್ಥಾನದ ಸ್ವಾಧೀನ ತಪ್ಪಿ ತನ್ನ ಮೇಲೆ ಅಪಕೀರ್ತಿಯು ಶಾಶ್ವತವಾಗಿ ನಿಂತು ಬಿಟ್ಟಿತಲ್ಲಾ ಎಂಬ ಕೊರಗಿನಿಂದಲೇ ಮುಂದೆ ಆರು ತಿಂಗಳೊಳಗಾಗಿ ಎಂದರೆ ೧೮೫೩ ನೆಯ ಸಾಲಿನ ಜೂನ್ ಮಾಸದಲ್ಲಿ ಕಾಲಾಧೀನನಾದನು. ನಿಜಾಮನು ಅರಮನೆಯಲ್ಲಿ ಮಹಡಿಯನ್ನು ಬಿಟ್ಟು ಕೆಳಕ್ಕಿಳಿಯದೆ ಆಂಗ್ಲೇಯರೊಂದಿಗೆ ವಿಶ್ವಾಸದಿಂದಾಗಲೀ ಮಾತನಾಡದೆ, ರಾಜ್ಯವಿಚಾರದಲ್ಲಿ ಯಾವ ಸ್ವಾತಂತ್ರ್ಯವೂ ತಿಳಿಯದೆ, ಸುತ್ತಲೂ ಸ್ವಾರ್ಥಿಗಳೂ ಅಲ್ಪಮತಿಗಳೂ ಸುತ್ತಿಕೊಂಡು, ಕಿವಿಗಿಂಪಾದ ಸ್ತೋತ್ರಪಾಠಗಳಿಂದ ಹೊಗಳುತ್ತಿರಲು ಕೇವಲ ಆಹಾರಸ್ವಾದಿಗಳಲ್ಲಿಯೂ ವಿಷಯಭೋಗಗಳಲ್ಲಿಯೂ ಮಗ್ನನಾಗಿ, ಅರಮನೆಯಿಂದ ಹೊರಕ್ಕೆ ಪ್ರಪಂಚವಿರುವುದೆಂಬ ಯೋಚನೆಯೇ ಇಲ್ಲದೆ ಇರುತ್ತಿರಲು ದಪ್ತರ ಹಳೆ ಕೇಳುವವನಿಲ್ಲದಂತೆ ಆಗಿಹೋಗಿದ್ದಿತು. ಇಂತಹ ಸಂದರ್ಭದಲ್ಲಿ ರಾಜ್ಯಾಧಿಪತ್ಯಕ್ಕೆ ಬರುವ ಅಧಿಕಾರಿಯು ಕಾರ್ಯಪಥವು ಎಷ್ಟು ಸುಗಮವಾದುದೆಂಬುದನ್ನು ಹೇಳಬೇಕಾದುದಿಲ್ಲವಷ್ಟೆ! ಸಾಲಾರಜಂಗನು ಇಂತಹ ಸ್ಥಿತಿಯಲ್ಲಿ ಹೈದರಾಬಾದು ಸಂಸ್ಥಾನಕ್ಕೆ ಮಂತ್ರಿಯಾದನು.

ಸಾಲಾರ್ ಜಂಗನು ರಾಜ್ಯದ ಇಂತಹ ಸ್ಥಿತಿಯಲ್ಲಿ ಮಂತ್ರಿಯಾದುದಕ್ಕೂ ಕೆಲವು ಕಾರಣಗಳಿದ್ದುವು. ರಾಜ್ಯದಲ್ಲಿ ಪೂರ್ವದ ವಜೀರರ ಕಾಲದಲ್ಲಿ, ಅವರಲ್ಲಿ ಆಶ್ರಯಹೊಂದಿ, ಮುಖಸ್ತುತಿ ಪರದೂಷಣೆಗಳಿಂದ ಸ್ವಪ್ರಯೋಜನನಿರತರಾದ ಕೆಲವರು ಸಾಮಾನ್ಯಾಧಿಕಾರಿಗಳು ಇದ್ದರು. ಅವರು, ಅನನುಭವಿಯೂ ಅಲ್ಪವಯಸ್ಕನೂ ಆದ ಇಂತಹ ಅಧಿಕಾರಿಯೊಬ್ಬನು ಮಂತ್ರಿಪದಕ್ಕೆ ಬಂದರೆ, ಎಂದಿನಂತೆ ಅವನನ್ನು ಮೂಲಮೂರ್ತಿಯನ್ನಾಗಿಟ್ಟು, ನಿಜಾಮನ ಮನಸ್ಸನ್ನು ಎಂದಿನಂತೆ ತಮ್ಮ ವಶಪಡಿಸಿಕೊಂಡು ಸ್ವಾರ್ಥವನ್ನು ಗಳಿಸಿಕೊಳ್ಳಬಹುದೆಂದು ಎಣಿಸಿದ್ದರು. ಸಿರಾಜ್ ಉಲ್ ಮುಲ್ಕನ ಮರಣಾನಂತರ, ರಾಜ್ಯಾಡಳಿತಕ್ಕೆ ಯೋಗ್ಯನಾದ ಮಂತ್ರಿಯೊಬ್ಬನನ್ನು ತರಬೇಕೆಂಬ ಯೋಚನೆಯಲ್ಲಿ ನಿಜಾಮನು ನಿರತನಾದನು. ಮಂತ್ರಿಪದಕ್ಕೆ ಆಗ ಯೋಗ್ಯರೆಂದು ಎಣಿಸಲ್ಪಟ್ಟಿದ್ದ ವ್ಯಕ್ತಿಗಳಲ್ಲಿ ಮುಖ್ಯನಾಗಿದ್ದವನು ಸಾಲಾರ್ ಜಂಗನು. ಆದರೆ ಸಾಲಾರನು ಸಿರಾಜ್ ಉಲ್ ಮುಲ್ಕನ ಅಣ್ಣನ ಮಗನಾ

ದುದರಿಂದಲೂ, ಬೀರಾರು ಕೈಬಿಟ್ಟು ಹೋಗುವುದಕ್ಕೆ ಸಿರಾಜನೇ ಮೂಲ ಕಾರಣನೆಂಬ ಸಂದೇಹವು ನಿಸ್ಸಾಮನಿಗಿದ್ದುದರಿಂದಲೂ, ಇನ್ನೂ ಇಪ್ಪತ್ತಾಲ್ಕುವರುಷದ-ಅಲ್ಪಪ್ರಾಯದ ಸಾಲಾರ್‌ಜಂಗನನ್ನು ಆ ಜವಾಬುದಾರಿಯ ಉದ್ಯೋಗಕ್ಕೆ ಏರಿಸಲು ನಿಸ್ಸಾಮನಿಗೆ ಇಷ್ಟವಿರಲಿಲ್ಲ. ಆದರೂ ನಿಸ್ಸಾಮನ ಸುತ್ತಲೂ ಮುತ್ತಿದ್ದ ಪರಿವಾರದವರು ಮಾಡುತ್ತಿದ್ದ ಸಂವಿಧಾನದ ಪರಿಣಾಮವು ಅವನ ಮನಸ್ಸಿನ ಮೇಲೆ ಆಗದಿರಲಿಲ್ಲ. ಅಂತಹ ಪರಿವಾರದವರಿಗೆ ಲಾಲಬಹದರನೆಂಬ ಸಂಸ್ಥಾನದ ದಫ್ತರದಾರನು ಮುಖ್ಯಸ್ಥನಾಗಿದ್ದನು. ಅವನು ಈವರೆಗೂ ನಿಸ್ಸಾಮನಲ್ಲಿ ಹೆಚ್ಚು ಬಳಕೆಯಿಂದ ಇದ್ದವನು. ಮುಂದೆ ಶಕ್ತನಾದ ಮಂತ್ರಿಯು ಬಂದು ಬಿಟ್ಟರೆ, ತನಗೆ ಕೈಕಾಲುಗಳನ್ನಾಡಿಸಲು ಮಾರ್ಗವಿರುವುದಿಲ್ಲವೆಂಬುದು ಅವನ ಮನಸ್ಸಿಗೆ ಬಂತು. ಒಡನೆ ಆ ಪರಿವಾರವು ನಿಸ್ಸಾಮನನ್ನು ಕುರಿತು "ಮಹಾಪ್ರಭೂ, ರಾಜ್ಯಕ್ಕೆ ಮಂತ್ರಿಯಿಂದ ಆಗಬೇಕಾದುದೇನು! ತಮ್ಮ ಸನ್ನಿಧಾನದ ಶಕ್ತಿಯೇ ರಾಜ್ಯಾಡಳಿತವನ್ನು ನಡೆಯಿಸುವುದಲ್ಲದೆ, ರಾಜ್ಯದಲ್ಲಿ ಮಂತ್ರಿಯಾರಿದ್ದರೇನು? ಸಿರಾಜ್ ಉಲ್ ಮುಲ್ಕನು ಮಂತ್ರಿಯಾಗಿದ್ದಾಗ ರಾಜ್ಯದಾಡಳಿತಗಳನ್ನು ನಡಿಸುತ್ತಿದ್ದವರಾರು! ಆ ಲಾಲಬಹದ್ದರನೇ ಈಗಲೂ ಸಾಲಾರ್‌ಜಂಗನಿಗೆ ಸಹಾಯಕನಾಗಿದ್ದು ಮಂತ್ರಿತ್ವದ ಕಾರ್ಯಗಳನ್ನು ಜರುಗಿಸುತ್ತಾನೆ. ಈ ವಿಷಯದಲ್ಲಿ ಯೋಚನೆಯೇಕೆ?" ಎಂಬದಾಗಿ ಬೋಧಿಸಿದರು ಬೋಧನೆಯು ವ್ಯರ್ಥವಾಗಲಿಲ್ಲ. ನಿಸ್ಸಾಮನು ಅವರ ಮಾತಿಗೆ ಒಪ್ಪಿದನು. ೧೮೫೩ ನೆಯ ಸಂವತ್ಸರದ ಮೇ ತಿಂಗಳು ೩೧ ನೆಯ ದಿನದಲ್ಲಿ, ನಿಸ್ಸಾಮನು ಒಂದು ದೊಡ್ಡ ಸಭೆಯನ್ನು ನಡೆಯಿಸಿದನು. ಅದಕ್ಕೆ ಬ್ರಿಟಿಷ್ ರೆಸಿಡೆಂಟನೂ, ದೇಶದಲ್ಲಿ ಪ್ರಸಿದ್ಧರಾಗಿದ್ದ ಅನೇಕ ಶ್ರೀಮಂತರೂ ಮುಖ್ಯ ಮುಖ್ಯ ಅಧಿಕಾರಿಗಳೂ ಬಂದು ಉಚಿತಾಸನಗಳನ್ನು ಅಲಂಕರಿಸಿದ್ದರು ಆ ದೊಡ್ಡ ಸಭೆಯಲ್ಲಿ ನಿಸ್ಸಾಮನು ವಿಸಾರ್ ತುರಾಬ್ ಅಲ್ಲೀಖಾನ್ ಸಾಲಾರ್‌ಜಂಗ್ ಸಿರಾಜು ದ್ದೌಲಾ ಮುಖ್ತಿಯಾರ್ ಉಲ್ ಮುಲ್ಕನನ್ನು ಹೈದರಾಬಾದು ಸಂಸ್ಥಾನಕ್ಕೆ ಮುಖ್ಯ ವಜೀರನನ್ನಾಗಿ ನಿಯಮಿಸಿ ಖಿಲ್ಲತ್ತುಗಳನ್ನು ಕೊಟ್ಟು, ಗೌರವಿಸಿದನು. ಸಾಲಾರ್‌ಜಂಗನೂ, ಪ್ರಧಾನಶಸ್ತ್ರವನ್ನು ಸ್ವೀಕರಿಸಿ ಸಂಸ್ಥಾನದ ಎಲ್ಲಾ ಅಧಿಕಾರಿಗಳ ಪರಿಚಯಗೊಂಡನು. ಲಾಲಬಹದರ ಮುಂತಾದವರು ಯಾವ ಉ

ದ್ವೇಶದಿಂದಲಾದರೂ ನಿಸ್ಸಾಮನಿಗೆ ಬೋಧಿಸಿರಲಿ! ಎಂತೂ ಸಾಲಾರ್‌ಜಂಗನಿ ಗಂತೂ ತಾಲ್ಲೂಕುದಾರೀ ಉದ್ಯೋಗದಿಂದ ಒಂದೇ ಬಾರಿಗೆ ಮಂತ್ರಿಪದವೇ ಪ್ರಾಪ್ತವಾಯಿತು.



ಅಧ್ಯಾಯ ೪ "ಸಂಶಯ-ಅಸಮಾಧಾನಗಳು"

ಪ್ರತಿಯೊಬ್ಬನೂ ಯಾವ ಉದ್ಯೋಗದಲ್ಲಿರಲಿ, ತನ್ನ ಯೋಗ್ಯತೆಯೇನು, ಆ ಉದ್ಯೋಗದ ಧರ್ಮವೇನು, ಮತ್ತು ಆ ಉದ್ಯೋಗದ ಗೌರವವನ್ನು ಉಳಿಸಬೇಕಾದರೆ ತನ್ನ ಮೇಲಿರುವ ಜವಾಬುದಾರಿ ಎಷ್ಟರಮಟ್ಟಿನದು ಎಂಬುದನ್ನು ನಿಷ್ಪಕ್ಷಪಾತ ದೃಷ್ಟಿಯಿಂದ ತನಗೆ ತಾನೇ ವಿಚಾರಮಾಡಿಕೊಂಡರಲ್ಲದೆ, ಅವನಿಂದ ಉತ್ತಮ ರೀತಿಯಿಂದ ಕೆಲಸ ನಡೆಯಲಾರದು. ಸಾಲಾರಜಂಗನು ತನ್ನ ಮೇಲೆ ಹೊತ್ತ ಮಂತ್ರಿಪದವಿಯ ಜವಾಬುದಾರಿಯೂ ಅದನ್ನು ಉತ್ತಮ ರೀತಿಯಿಂದ ನಡೆಯಿಸುವುದರಲ್ಲಿ ಇರುವ ಕಷ್ಟವೂ ಎಷ್ಟೆಂಬುದನ್ನೂ, ಮತ್ತು ತನ್ನ ಅಶಕ್ತತೆಯು ಎಷ್ಟುಮಟ್ಟಿನದೆಂಬುದನ್ನೂ ಚೆನ್ನಾಗಿ ತಿಳಿದಿದ್ದನು. ಈ ವಿಷಯವು ಆತನು ತನಗೆ ಮಂತ್ರಿಪದವು ಪ್ರಾಪ್ತವಾದ ಸಂದರ್ಭದಲ್ಲಿ ಇಂಗ್ಲೆಂಡಿನಲ್ಲಿದ್ದ ತನ್ನೊಬ್ಬ ಆಂಗ್ಲೇಯ ಮಿತ್ರನಿಗೆ ಬರೆದ ಪತ್ರದಿಂದ ವಿಶದವಾಗುತ್ತದೆ "ನಾನಾಗಲೀ ನನ್ನ ಅಜ್ಜಿಯಾಗಲೀ ಎಷ್ಟುಮಾತ್ರವೂ ಪ್ರಯತ್ನಿಸದಿದ್ದರೂ, ನಿಸ್ಸಾಮರವರನ್ನು ಪ್ರಾರ್ಥಿಸದಿದ್ದರೂ ಪ್ರಭುಗಳವರು, ಈ ಸಂಸ್ಥಾನದ ದಿವಾನಗಿರಿಗೆ ಮೊನ್ನೆ (ತಾ|| ೩೧-೫-೧೮೫೩) ನಡೆದ ದೊಡ್ಡ ದರ್ಬಾರಿನಲ್ಲಿ ನನ್ನನ್ನು ನಿಯಮಿಸಿದ್ದಾರೆ. ಈ ದೇಶವು ಸದ್ಯಃ ಇರುವ ಅವ್ಯವಸ್ಥೆಯ ಸ್ಥಿತಿಯಲ್ಲಿ ಈ ಜವಾಬುದಾರಿಯ ಉದ್ಯೋಗವನ್ನು ವಹಿಸಿಕೊಳ್ಳುವುದಕ್ಕಿಂತಲೂ, ನನ್ನ ಚಿಕ್ಕಪ್ಪನ ಜಹಗೀರಿಗಳ ಮೇಲ್ವಿಚಾರಣೆಯನ್ನು ನೋಡಿಕೊಂಡಿದ್ದಿದ್ದರೇ ನಾನು ಎಷ್ಟೋಮಟ್ಟಿಗೆ ತೃಪ್ತನಾಗಿರುತ್ತಿದ್ದೆನು. ಆದರೆ, ಅನೇಕ ಮಂದಿ ದೇಶೀಯ ಮತ್ತು ಪರದೇಶೀಯ ನನ್ನ ಸ್ನೇಹಿತರು. ಪ್ರಭುಗಳವರಿಂದ ಅಪ್ರಾರ್ಥಿತವಾಗಿ ಅನುಗ್ರಹಿಸಲ್ಪಟ್ಟಿರುವ ಈ ಪದವಿಯನ್ನು ನಿರಾಕರಿಸುವುದು ನಾನೇ ಕೇವಲ ನಿಸ್ಪೃಹ ಎಂಬ ಅಹಂಕಾ

ರವನ್ನು ಪ್ರದರ್ಶಿಸಿದಂತೆ ಇರುವುದೆಂದೂ ಅದರಿಂದ ನನಗೂ ಮತ್ತು ನನ್ನ ಕುಟುಂಬಕ್ಕೂ ಒಂದು ಬಗೆಯಿಂದ ಕೇಡುಂಟಾದರೂ ಆಗಬಹುದೆಂದೂ ನನಗೆ ತಿಳಿವಳಿಕೆಕೊಟ್ಟರು........ಆದುದರಿಂದ ನಾನು, ಈ ದುರ್ದೈವಿ ದೇಶದಲ್ಲಿ ಸ್ವಲ್ಪಮಟ್ಟಿಗಾದರೂ ಸುಸ್ಥಿತಿಯನ್ನುಂಟುಮಾಡಲು ನನ್ನಿಂದ ಸಾಧ್ಯವಿರುವುದನ್ನೆಲ್ಲಾ ಮಾಡುತ್ತೇನೆ. ನನಗೆ ಭಗವತ್ಸಹಾಯವೊಂದಿರಲಿ! ಸರ್ಕಾರವು ಈಗಿರುವ ತಾಪತ್ರಯಗಳ ಬಾಧೆಯಿಂದ ಮುಕ್ತವಾಗುವಂತೆ ಮಾಡಲು ನನ್ನ ಯೋಗ್ಯತಾನುಸಾರ ಪ್ರಯತ್ನಿಸುತ್ತೇನೆ''

ದಿವಾನಗಿರಿ ಪದವಿಗೆ ಬಂದ ಕೆಲವು ದಿನಗಳೊಳಗಾಗಿಯೇ ಸಾಲಾರ್ ಜಂಗನು ತನ್ನ ಕೈಕೆಳಗಿನ ನೌಕರರ ಮತ್ತು ನಿಸ್ಥಾಮನ ಅಸಮಾಧಾನಕ್ಕೆ ಕಾರಣನಾಗಬೇಕಾಯಿತು! ಹಿಂದಿನ ಸಿರಾಜ್ ಉಲ್ ಮುಲ್ಕನ ಕಾಲದಿಂದಲೂ ಲಾಲಬಹದರನು ಆಸ್ಥಾನದಲ್ಲಿ ಪ್ರಬಲನಾಗಿದ್ದನೆಂಬುದು ತಿಳಿದಿದೆಯಷ್ಟೆ! ಅನನುಭವಿಯಾದ ಚಿಕ್ಕವಯಸ್ಸಿನ ಈ ವಜೀರನೂ ಹಿಂದಿನವರಂತೆಯೇ ತನ್ನ ಸಲಹೆಗೆ ಕಿವಿಗೊಟ್ಟು, ತಾನೆಳೆವ ದಾರಿಗೆ ಬರುವನೆಂದು ಅವನು ತಿಳಿದಿದ್ದನು. ಆದರೆ ಹಾಗಾಗಲಿಲ್ಲ ಒಂದಾನೊಂದುದಿನ ಲಾಲಬಹದರನುರಾಜ್ಯವಿಚಾರಕ್ಕೆ ಸಂಬಂಧಿಸಿದ ಕೆಲವು ಕಾಗದಗಳನ್ನು ಬರೆದು ತಂದು ಸಾಲಾರಜಂಗನ ಮುಂದಿಟ್ಟು, ಅವುಗಳಿಗೆ ರುಜುಮಾಡಿಕೊಡೆಂದನು. ಆದರೆ ನಿಸ್ಪೃಹಿಯೂ, ರಾಜ್ಯಸೇವೆಯ ವಿಷಯದಲ್ಲಿ ನಿರ್ದಾಕ್ಷಿಣ್ಯಪರನೂ ಆಗಿದ್ದ ದಿವಾನನು, ಆ ಕಾಗದಗಳಲ್ಲಿ ಏನು ಬರೆದಿದೆ ಯೆಂಬುದನ್ನು ಓದಿ ನೋಡದೆ ಅವು ಸಮಂಜಸವಾಗಿರುವುದೆಂಬುದು ಒಪ್ಪಿಗೆಯಾಗದೆ ರುಜು ಮಾಡಲಾಗುವುದಿಲ್ಲವೆಂದು ತಿಳಿಸಿದನು. ಅಂದಿನಿಂದ ಲಾಲಬಹದರನೂ ಅವನ ಪರಿವಾರವೂ ದಿವಾನನಿಗೆ ವಿರೋಧಿಗಳಾದರು ಮತ್ತು ಕಂಚಿನ ಕಿವಿಯ ನಿಸ್ಥಾಮನಲ್ಲಿ ಹೊಸ ದಿವಾನನ ಮೇಲೆ ಸಮಯಸಿಕ್ಕಿದಂತೆ ಇಲ್ಲದುಸಲ್ಲದುದನ್ನೆಲ್ಲಾ ಹೇಳಿ, ಅವನ ವಿಷಯದಲ್ಲಿ ಅನುಮಾನ ಅಪನಂಬಿಕೆಗಳು ದಿನದಿನಕ್ಕೆ ಹೆಚ್ಚುವಂತೆ ಮಾಡುತ್ತಿದ್ದರು.

ಆದರೆ ಸಾಲಾರ್ ಜಂಗನು ಇವುಗಳಿಗೆಲ್ಲಾ ಬೆದರಲಿಲ್ಲ. ರಾಜ್ಯದ ಉತ್ತಮಸ್ಥಿತಿಗೆ ಯಾವ ಯಾವ ಸುಧಾರಣೆಗಳು ಅವಶ್ಯಕವೆಂದು ತೋರಿದುವೋ ಅವುಗಳನ್ನು ಆಚರಣೆಯಲ್ಲಿ ತರಲು ಸ್ವಲ್ಪವೂ ಹಿಂದೆಗೆಯಲಿಲ್ಲ. ಆತನು ಎಲ್ಲಕ್ಕೂ ಮೊದಲು, ಸಂಸ್ಥಾನದಲ್ಲಿ ಸಕಲ ಬಗೆಯಿಂದಲೂ ಹೆಚ್ಚಿಹೋಗಿದ್ದ

ಅರಬರ ಪ್ರಾಬಲ್ಯವನ್ನು ತಗ್ಗಿಸಿ, ಅವರನ್ನು ತಹಬಂದಿಗೆ ತರಲು ಪ್ರಯತ್ನಿಸಿದನು. ನಿಷ್ಕಾರಣವಾಗಿ ಇಟ್ಟುಕೊಂಡು, ಅಧಿಕಖರ್ಚಿನಿಂದ ನಡಿಸುತ್ತಿದ್ದ ಬಹುಸಂಖ್ಯೆಯು ಅರಬಸೈನ್ಯವನ್ನು ತೆಗೆದುಹಾಕಿದನು ಅಲ್ಲದೆ ಮಿಕ್ಕ ತಾಲ್ಲೂಕುದಾರರಿಗೂ-ಜಹಗೀರುದಾರರಿಗೂ ಅವರವರ ವಶದಲ್ಲಿದ್ದ ಅರಬರು ರೋಹಿಲರು ಮತ್ತು ಪಠಾನರ ಸೈನ್ಯಗಳನ್ನು ತೆಗೆದು ಹಾಕಬೇಕೆಂದು ಆಜ್ಞೆಗಳನ್ನು ಕಳುಹಿಸಿದನು, ಅಲ್ಲದೆ ಅವರು ಸಂಸ್ಥಾನದಲ್ಲಿ ಅನುಭವಿಸಬೇಕೆಂದಿದ್ದ ಹಕ್ಕು ಬಾಧ್ಯತೆಗಳನ್ನು ವಿಮರ್ಶಿಸಿ ಸರಿಪಡಿಸುವುದಕ್ಕಾಗಿ ನ್ಯಾಯಸ್ಥಾನಗಳನ್ನು ಸ್ಥಾಪಿಸಿದನು ತರುವಾಯ ಅವರಿಗೆ ಸಂಸ್ಥಾನದಿಂದ ಅನುಭವಕ್ಕಾಗಿ ಕೊಡಲ್ಪಟ್ಟಿದ್ದ ಅಥವಾ, ಬೇರೆಯವರಿಂದ ಆಧಾರವಾಗಿದ್ದ ಭೂಸ್ವತ್ತಿಗಳನ್ನು ವಾಪಸು ತೆಗೆದುಕೊಳ್ಳುವ ವಿಷಯದಲ್ಲಿ ತನ್ನ ಗಮನವನ್ನು ಕೊಟ್ಟನು: ೧೮೫೪ ನೆಯ ವರ್ಷದೊಳಗಾಗಿಯೇ ಸಾಲಾರ್‌ಜಂಗನು ಆಧಾರವಾಗಿದ್ದ ನಾಲ್ವತ್ತುಲಕ್ಷ ಬೆಲೆಯ ಭೂಮಿಯನ್ನು ಮುಕ್ತಮಾಡಿದುದಲ್ಲದೆ, ಸುಮಾರು ೨೦೦೦ ಮಂದಿ ಅರಬ್ಬರ ಮತ್ತು ಅಷ್ಟೇ ಸಂಖ್ಯೆಯ ಪಠಾಣ ಮತ್ತು ರೋಹಿಲರ ಸೈನ್ಯ ಸಂಖ್ಯೆಯನ್ನು ತಗ್ಗಿಸಿದನು ಸರ್ಕಾರದ ಭೂಕಂದಾಯವನ್ನು ವಸೂಲ್ಮಾಡುವುದರಲ್ಲಿ ಆವರೆಗೂ ಗುತ್ತೇದಾರೀ ಪದ್ಧತಿಯು ರೂಢಿಯಲ್ಲಿತ್ತು. ಇದರಿಂದ, ರೈತರಿಗೆ, ರವಿನ್ಯೂ ಅಧಿಕಾರಿಗಳಿಂದಲೂ ನೌಕರರಿಂದಲೂ ಬಹು ತೊಂದರೆಯುಂಟಾಗುತ್ತದೆಂಬುದನ್ನು ತಿಳಿದು, ಈ ಪದ್ಧತಿಯನ್ನು ತಪ್ಪಿಸಿ, ಸರ್ಕಾರಿಹಣದ ವಸೂಲಿಗಾಗಿ ನಂಬಿಗಸ್ತರಾದ ಜನಗಳನ್ನು ನಿಯಮಿಸಿದನು ತಾಲ್ಲೂಕುದಾರರು, ರೈತರಿಂದ ವಸೂಲಾದ ಹಣದಲ್ಲಿ ಕಾಲುಭಾಗ-ಅರ್ಧಭಾಗದಷ್ಟನ್ನು ತಾವೇ ಉಪಯೋಗಿಸಿಕೊಳ್ಳುತ್ತಾ, ಸಂಸ್ಥಾನದ ರಾಜಭಾಂಡಾರಕ್ಕೆ ದ್ರೋಹವಮಾಡುತ್ತಿದ್ದಾರೆಂದು ತಿಳಿದು ಬಂದುದರಿಂದ ಸಾಲಾರ್‌ಜಂಗನು ಆ ವಿಚಾರವನ್ನು ಸೂಕ್ಷ್ಮವಾಗಿ ಪರಿಶೀಲಿಸಿ, ಆ ಉದ್ಯೋಗವನ್ನೇ ತೆಗೆದುಹಾಕಿಬಿಟ್ಟನು. ದಿನದಿನಕ್ಕೆ ಹೆಚ್ಚುತ್ತಿದ್ದ ತುಂಟ ಜನಗಳ ಪುಂಡಾಟವನ್ನು ಸ್ವಲ್ಪವೂ ಹಿಂದೆಗೆಯದೆ ಖಂಡಿಸಿ ನಿಲ್ಲಿಸಿದನು. ೧೮೫೭ ನೆಯ ಸಂ॥ದ ವೇಳೆಗೆ ಸಂಸ್ಥಾನದ ಆದಾಯವು ದ್ವಿಗುಣಿತವಾಯಿತು. ರಾಜಭಾಂಡಾರವು ಸುಸ್ಥಿತಿಯಿಂದ ಏರ್ಪಟ್ಟು ರಾಜಾದಾಯದ ಸ್ವಲ್ಪ ಭಾಗವು ಸಿಲ್ಕು ನಿಲ್ಲುವಂತಾಯಿತು.

ಸಾಲಾರ್‌ಜಂಗನು, ತನ್ನ ಮಾರ್ಗವೇನೆಂಬುದರ ವಿಷಯ ಪರಿಜ್ಞಾನವೇ ಇಲ್ಲದೆ ಇಲ್ಲಸಲ್ಲದ ಕಾರಣಗಳಿಗಾಗಿ ತನ್ನನ್ನು ದ್ವೇಷಿಸುತ್ತಿದ್ದ, ಪ್ರಭು-ಅಥವ ಪ್ರಜೆಗಳ ಯಾವ ಬಗೆಯ ಅಭಿಮಾನ ಅನುಗ್ರಹಗಳಿಗಾಗಲೀ ಕೋಪ ಕೂಗಾಟಗಳಿಗಾಗಲೀ ಇದಿರುನೋಡಿಕೊಂಡು ಕುಳಿತುಕೊಳ್ಳಲಿಲ್ಲ. ಮೇಲೆ ಮೇಲೆ ಲಾಲಬಹಾದ್ದುರ ಮುಂತಾದವರ ಚೇಷ್ಟೆಯು ಅಧಿಕವಾಗತೊಡಗಿತು ಮಂತ್ರಿಯು ದಿನದಿನಕ್ಕೆ ಶಕ್ತನಾಗುತ್ತಿದ್ದುದೂ, ಆತನಿಂದ ಸಂಸ್ಥಾನಕ್ಕೆ ಬಗೆಬಗೆಯ ಪ್ರಯೋಜನಗಳುಂಟಾಗಿ ತನ್ಮೂಲಕ ಆತನು ಜನಗಳಲ್ಲಿ ಉತ್ತಮಾಭಿಪ್ರಾಯಗಳನ್ನು ಹೊಂದುತ್ತಿದ್ದುದೂ ಅವರಿಗೆ ತಪ್ಪದೆ ತಲೆನೋವನ್ನುಂಟುಮಾಡುತ್ತಿದ್ದಿತು ಸಾಲಾರಜಂಗನನ್ನು ಮಂತ್ರಿಪದಕ್ಕೆ ತರುವುದರಲ್ಲಿ ಮೊದಲೇ ಸಂದೇಹಗೊಂಡಿದ್ದ ನಿಸಾಮನು, ದಿನದಿನಕ್ಕೆ ಆತನು ರಾಜ್ಯದ ಸುಸ್ಥಿತಿಗಾಗಿ ತರುತ್ತಿದ್ದ ತನಗೆ ಪರಿಚಯವಿಲ್ಲದ ಹೊಸ ಹೊಸ ಸುಧಾರಣೆಗಳಿಗಾಗಿಯೂ, ಆತನು ಪ್ರಬಲನಾಗುತ್ತಿದ್ದಾನಲ್ಲಾ ಎಂಬುದಕ್ಕಾಗಿಯೂ ಆತನ ವಿಷಯದಲ್ಲಿ ಅಸಮಾಧಾನಪಡಲಾರಂಭಿಸಿದನು ಪಟಾವಾರದವರ ಚಾಡಿಮಾತಿಗೂ ಕಿವಿಗೊಟ್ಟನು. ಮುಂದೆ, ಸಾಲಾರ್‌ಜಂಗನು ತನ್ನನ್ನು ಕೇಳಿ ಅಪ್ಪಣೆ ಪಡೆಯದೆ ಹೈದರಾಬಾದನ್ನು ಬಿಟ್ಟು ಪರಸ್ಥಳಕ್ಕೆ ಹೋಗಕೂಡದೆಂದೂ ಆಜ್ಞಾಪಿಸಿದನು.

ಮನೆಯಲ್ಲಿ ಪತಿಯೂ ಪತ್ನಿಯೂ ಅನ್ಯೋನ್ಯತೆಯಿಂದ, ಎರಡು ಕಣ್ಣುಗಳೂ ಐಕಮತ್ಯದಿಂದ ಒಂದು ವಸ್ತುವನ್ನು ನೋಡುವಂತೆ, ಬೆರೆದಿದ್ದರಲ್ಲದೆ ಸಂಸಾರದ ಕಾರ್ಯಗಳು ಹೇಗೆ ಸುಮುಖವಾಗಿ ನಡೆಯಲಾರವೋ ಹಾಗೆಯೇ ರಾಜ್ಯದಲ್ಲಿ ಪ್ರಭುವೂ ಪ್ರಧಾನಿಯೂ, ಅನ್ಯೋನ್ಯತೆಯಿಂದ ಏಕಮನಸ್ಕರಾಗಿದ್ದರಲ್ಲದೆ ಸಂಸ್ಥಾನದ ಕಾರ್ಯಗಳೂ ಸುಮುಖವಾಗಿ ನಡೆಯಲಾರವು. ಮಂತ್ರಿಯು ಸೂಚಿಸಿದ ಯೋಚನೆಯ ಸಾಮಂಜಸ್ಯವನ್ನು ರಾಜನೂ, ರಾಜನು ಆಜ್ಞಾಪಿಸಿದ ಕಾರ್ಯದ ಸ್ವಭಾವವನ್ನು ಮಂತ್ರಿಯೂ ತಿಳಿದು ನಡೆಯದಿದ್ದರೆ, ರಾಜ್ಯದ ನಿತ್ಯಕಾರ್ಯಗಳು ನಡೆಯುವ ಬಗೆಯಾವುದು? ಸಾಲಾರಜಂಗನ ತಲೆಯಮೇಲೆ ಪ್ರಹಾರವು ಯಾವಾಗಲೂ ಸಿದ್ಧವಾಗಿರುತ್ತಿತ್ತು. ಆತನು ತಂದ ಒಂದೊಂದು ಸುಧಾರಣೆಗೂ, ಅದರಿಂದುಂಟಾಗಬಹುದಾದ ಅನುಕೂಲ ಪ್ರತಿಕೂಲಗಳ ವಿಮರ್ಶೆಯೇ ಇಲ್ಲದೆ, ಆಕ್ಷೇಪಣೆ ಇರುತ್ತಲೇ ಇ

ತ್ತು. ಮತ್ತು ಒಂದೊಂದುಸಾರಿಯೂ, ಮಂತ್ರಿಯು ಕೇವಲ ಅಸಮಾಧಾನ ಪಟ್ಟುಕೊಂಡು ಅದು ಮಂಜೂರಾಗದಿದ್ದರೆ ತಾನು ತನ್ನ ಉದ್ಯೋಗಕ್ಕೆ ರಾಜೀನಾಮೆ ಕೊಡುತ್ತೇನೆಂದು ಬೆದರಿಸಿಯೇ ತನ್ನ ಹಟವನ್ನು ಗೆಲ್ಲಬೇಕಾಗುತ್ತಿತ್ತು.

ಈ ಮಧ್ಯೆ ಹುಣ್ಣಿನ ಮೇಲೆ ಬೊಕ್ಕೆ ಎದ್ದಂತೆ, ಸಾಲಾರಜಂಗನ ತೊಂದರೆಯನ್ನು ದ್ವಿಗುಣಿತ ಪಡಿಸುವಂತಹ ಮತ್ತೊಂದು ಸಂಗತಿ ನಡೆಯಿತು. ೧೮೫೭ ನೆಯ ಮೇ ತಿಂಗಳು ೧೮ ನೆಯ ದಿನ ನಿಸ್ಸಾಮ ನಸ್ಸೀರುದ್ದೌಲನು ಕಾಲವಾಗಿ, ಮಗನಾದ ಫಸ್ಸಲುದ್ದೌಲನು ಗಾದಿಗೆ ಬಂದನು ಮಗನೇನು ತಂದೆಗಿಂತಲೂ ವಿವೇಕಿಯಾಗಿರಲಿಲ್ಲ! ರಾಜ್ಯವಿಚಾರದ ಸುಧಾರಣೆಗಳ ವಿಷಯದಲ್ಲಿ ತನ್ನ ತಂದೆಗಿಂತಲೂ ಹೆಚ್ಚು ವಿರೋಧಿಯೂ ಆಗಿದ್ದನು ಪ್ರಪಂಚದ ರೀತಿ ನೀತಿಗಳೇ ತಿಳಿಯದೆ ಕೇವಲ ಅರಮನೆಯ ರಾಣಿವಾಸದ ನಾಲ್ಕು ಗೋಡೆಗಳ ಮಧ್ಯದಲ್ಲಿ ಬೆಳೆದ ಆತನಿಗೆ ಸಾಲಾರ್ ಜಂಗನ ಒಂದೊಂದು ಕೃತಿಯೂ ಸಂದೇಹವನ್ನು ವೃದ್ಧಿಗೊಳಿಸುತ್ತಿತ್ತು. ಆತನು ಹೈದರಾಬಾದಿನಲ್ಲೇ ಇದ್ದ ಬ್ರಿಟಿಷ್ ರೆಸಿಡೆಂಟನ್ನು ಕಾಣಬೇಕಾಗಿದ್ದರೂ, ತನ್ನನ್ನು ಕಂಡಲ್ಲದೆ ಹೋಗಲಾಗದೆಂದೂ ವಿಧಿಸಿದನು ಸಾಲಾರಜಂಗನಿಗೆ ಮಂತ್ರಿಪದವನ್ನು ಬಿಟ್ಟು ಮನೆಯಲ್ಲಿರುವುದು ಸುಖವೆನಿಸತೊಡಗಿತು. ಒಂದು ಸಾರಿ, ಮಂತ್ರಿಯು ರಾಜೀನಾಮೆಯನ್ನೂ ಕಳುಹಿಸಿದನು. ನಿಸ್ಸಾಮನೂ ಅದನ್ನು ಅಂಗೀಕರಿಸುವುದರಲ್ಲಿದ್ದನು ಅಷ್ಟರಲ್ಲಿ ಬ್ರಿಟಿಷ್ ರೆಸಿಡೆಂಟನು ಮಧ್ಯಸ್ಥನಾಗಿ ಅದನ್ನು ತಪ್ಪಿಸಿದನು

ನಿಸ್ಸಾಮನಿಗೆ ಸಾಲಾರಜಂಗನ ಮೇಲೆ ಅಸಮಾಧಾನ ಹುಟ್ಟಿಸುವುದಕ್ಕೆ ಇತರ ಅನೇಕ ಕಾರಣಗಳೂ ಇದ್ದುವು ಸಾಲಾರಜಂಗನು ಷಿಯಾಪಂಗಡಕ್ಕೆ ಸೇರಿದವನಾದುದರಿಂದ ಸುನ್ನೀಪಂಗಡಕ್ಕೆ ಸೇರಿದ ನಿಸ್ಸಾಮನಿಗೆ ಮತಸಂಬಂಧವಾದ ಈ ದ್ವೇಷವೂ ಆತನ ಮೇಲೆ ಇತ್ತು ಅಲ್ಲದೆ, ಆತನು ಸಂಸ್ಥಾನದ ವಿನಹಕಾರಣ ಹೆಚ್ಚು ಖರ್ಚನ್ನು ತಗ್ಗಿಸುವುದಕ್ಕಾಗಿ ಉದ್ಯೋಗದಿಂದ ತೆಗೆದುಹಾಕಿದ್ದ ರೋಹಿಲರು, ಅರಬರು, ಪಠಾಣರೂ ಅವನ ಮೇಲೆ ವಿಷವನ್ನು ಕಾರುತ್ತಿದ್ದರು. ಜಹಗೀರುದಾರರೂ ಜಮೀನುದಾರರೂ ತಮಗೆ ಅನ್ಯಾಯವಾಯಿತೆಂದು ಮೊರೆಯಿಟ್ಟರು. ರಾಜಕರಣದಲ್ಲಿ ಪ್ರವೇಶಿಸಿ ರಾಜ್ಯ

ಭಾರ ಸೂತ್ರ ಚಾಲನಾ ಸಾಮರ್ಥ್ಯವಿಲ್ಲದಿದ್ದ ನಿಸ್ಸಾಮನು, ಸಂಸ್ಥಾನಕ್ಕೆ ಪ್ರಯೋಜನಕರಗಳಾಗಿದ್ದ ಆ ಏರ್ಪಾಟುಗಳನ್ನು-ವಿರೋಧವಾದುವೆಂದೇ ಭಾವಿಸಿದನು. ೧೮೬೭ ರ ವೇಳೆಗೆ ಅವರಿಬ್ಬರ ವೈಮನಸ್ಯವು ಅಸಹನೀಯವಾಗಿ ಪುನಃ ಮಂತ್ರಿಯನ್ನು ಉದ್ಯೋಗದಿಂದ ಬಿಡಿಸಬೇಕೆಂದು ನಿಸ್ಸಾಮನು ಯೋಚಿಸಿದನು ಆಗಲೂ ಬ್ರಿಟಿಷ್ ರೆಸಿಡೆಂಟನು ಸಮಾಧಾನ ಹೇಳಿ, ಅದನ್ನು ತಪ್ಪಿಸಿದನು. ಹೀಗೆ ಸಾಲಾರಜಂಗನು ಪ್ರಭುಪ್ರಜೆಗಳ ಅನೇಕ ಬಗೆಯ ಸಂಶಯ-ಅಸಮಾಧಾನಗಳ ಭಾರವನ್ನು ತಡೆದುಕೊಂಡು ರಾಜ್ಯಭಾರ ರಥವನ್ನು ಎಳೆದುಕೊಂಡು ಹೋಗಬೇಕಾಗಿತ್ತು.



## ಅಧ್ಯಾಯ ೫ "ಶಿಪಾಯಿದಂಗೆ"

ಸಾಲಾರ್‌ಜಂಗನು ರಾಜ್ಯದಲ್ಲಿ ತಾನು ಮಾಡಬೇಕೆಂದು ಬಯಸಿದ ಸುಧಾರಣಾಕಾರ್ಯಗಳಿಗೆ ಮೇಲೆ ಮೇಲೆ ಒದಗುತ್ತಿದ್ದ ಅಡಚಣೆಗಳನ್ನು ಕಂಡು ಮರುಗುತ್ತಿದ್ದನು. ಇಷ್ಟರಲ್ಲಿ ಆತನ ಕಾರ್ಯಗಳಿಗೆ ಇನ್ನೊಂದು ಮಹದಾತಂಕವು ಪ್ರಾಪ್ತವಾಯಿತು ೧೮೫೭ ನೆಯ ಸಂವತ್ಸರದ ಮೇ ತಿಂಗಳಿನಲ್ಲಿ ಉತ್ತರ ಹಿಂದೂಸ್ಥಾನದಲ್ಲಿ ಶಿಪಾಯಿಗಳ ದಂಗೆಯೆಂಬ ಘೋರ ಚಳವಳವೊಂದು ಪ್ರಾರಂಭವಾಯಿತು ಒಡನೆ ದಕ್ಷಿಣ ಹಿಂದೂಸ್ಥಾನದಲ್ಲಿದ್ದ ಮುಹಮ್ಮದೀಯರೆಲ್ಲರ ದೃಷ್ಟಿಯೂ ಹೈದರಾಬಾದಿನ ಕಡೆಗೆ ತಿರುಗಿತು. ದೆಹಲಿಯಲ್ಲಿ ಸತ್ವಹೀನನಾಗಿ ಕುಳಿತಿದ್ದ ಮೊಗಲ್ ಚಕ್ರವರ್ತಿಯೂ ಇದೇ ಸಮಯವೆಂದು ದಂಗೆಯವರೊಂದಿಗೆ ಸೇರಿ, ಹಾವಳಿ ಮಾಡಲಾರಂಭಿಸಿದನು. ಇಂಗ್ಲಿಷರ ದರ್ಬಾರಿನಿಂದ ತಮ್ಮ ಜಾತಿ ಮತ ಧರ್ಮಗಳಿಗೆ ಕುಂದುಂಟಾಗಿದೆ ಎಂದು ಸಾಮಾನ್ಯಜನರು ಅವರ ಮೇಲೆ ರೇಗಿದ್ದರು. ತಮ್ಮ ರಾಜ್ಯಗಳನ್ನೂ-ಸ್ವಾತಂತ್ರ್ಯವನ್ನೂ ಅಪಹರಿಸಿದರಾದುದರಿಂದ ಅವರ ಮೇಲೆ ಹಟವನ್ನು ತೀರಿಸಿಕೊಳ್ಳಬೇಕೆಂದು, ನಾನಾಸಾಹೇಬ, ಅಯೋಧ್ಯಾ ನವಾಬ ಮುಂತಾದ ರಾಜವಾಡೆಯುವರೂ ದಂಗೆಯುವರೊಂದಿಗೆ ಸೇರಿ ಅವರಿಗೆ ಬೆಂಬಲವನ್ನಿತ್ತರು. ಎಲ್ಲೆಲ್ಲೂ ಗಲಾಟೆಬಲವಾಯಿತು. ದೆಹಲಿ, ಲಕ್ನೋ, ಕಾನ್ಪುರ ಮುಂತಾದ

ಸ್ಥಳಗಳು ಇಂಗ್ಲಿಷರ ಕೈತಪ್ಪಿ ಹೋದುವು.—ಹಾಹಾಕಾರವೆದ್ದಿತು.

ಉತ್ತರದೇಶದಲ್ಲಿ ಎದ್ದ ಈ ಗಲಭೆಯ ವೃತ್ತಾಂತವು ಕಾಳ್ಗಿಚ್ಚಿನಂತೆ ದೇಶದಲ್ಲೆಲ್ಲಾ ಒಡನೆ ಹಬ್ಬಿತು ಇಂಗ್ಲಿಷರ ದೌಲತ್ತನ್ನು ಮುರಿದು ಅವರನ್ನು ದೇಶದಿಂದಲೇ ಓಡಿಸಿಬಿಡಬೇಕೆಂದು ಜನಗಳು ಎಲ್ಲಿ ಕಂಡರಲ್ಲಿ ಮನಬಂದಂತೆ ಹೇಳಿಕೊಳ್ಳುತ್ತಾ ತಿರುಗಲಾರಂಭಿಸಿದರು. ಹೈದರಾಬಾದಿನ ಜನಗಳ ಮನಸ್ಸು ಅಲ್ಲೋಲಕಲ್ಲೋಲವಾಯಿತು ಪಟ್ಟಣದಲ್ಲಿ ಜನಗಳು ಅಲ್ಲಲ್ಲಿ ಗುಂಪು ನೆರೆದು, ಇಂಗ್ಲಿಷರ ಮೇಲೆ ಯುದ್ಧ ಮಾಡಬೇಕೆಂದು ಮಸಲತ್ತು ಮಾಡತೊಡಗಿದರು ಸಾಲದುದಕ್ಕೆ ಈ ಸಂದರ್ಭದಲ್ಲೇ, ಹಿಂದೆ ಹೇಳಿದಂತೆ ಹೈದರಾಬಾದಿನ ನಿಜಾಮು ನಸ್ಸೀರುದ್ದೌಲಾನೂ ಮೃತನಾಗಿದ್ದನು. ಸಾಲಾರ ಜಂಗನು ರಾಜ್ಯಸೂತ್ರಗಳನ್ನು ಕೈಗೆ ತೆಗೆದುಕೊಂಡು ನಡಿಸುತ್ತಾ ಇನ್ನೂ ನಾಲ್ಕು ವರ್ಷಗಳು ಮಾತ್ರವಾಗಿತ್ತು ಹೈದರಾಬಾದು ರಾಜಮನೆತನವು ಈ ಸಂದರ್ಭದಲ್ಲಿ ಯಾವ ಮಾರ್ಗವನ್ನು ಹಿಡಿಯುವುದೋ ಎಂಬುದನ್ನು ಹಿಂದೂಸ್ಥಾನದ ಪ್ರಜೆಗಳೆಲ್ಲರೂ ಅತ್ಯಂತ ಕುತೂಹಲದಿಂದ ಇದಿರುನೋಡುತ್ತಿದ್ದರು ಇಂಗ್ಲೀಷರಿಗೂ ಹೈದರಾಬಾದಿನ ವಿಷಯದಲ್ಲಿ ಅತಿಶಯ ಚಿಂತೆಯಿತ್ತು. ಬೊಂಬಾಯಿ ಗೌರ್ನರನು, ಹೈದರಾಬಾದಿನ ರೆಸಿಡೆಂಟನಿಗೆ "ನಿಜಾಮು ಹೋದರ ಎಲ್ಲಾ ಹೋಯಿತು" ಎಂದು ತಂತೀವರ್ತಮಾನ ಕೊಟ್ಟನು. ಅವರು ಹಾಗೆ ಭಯಪಡಲು ಕಾರಣವೂ ಇತ್ತು. ಮೊದಲೇ ಮುಹಮ್ಮದೀಯ ಸಂಸ್ಥಾನ, ಅದರ ಮೇಲೆ ಮಂತ್ರಿಯೂ ಮುಹಮ್ಮದೀಯನೇ! ಪ್ರಜೆಗಳು ಯುಕ್ತಾಯುಕ್ತ ವಿಚಾರವನ್ನರಿಯದ ಮೊರಟು ಮುಹಮ್ಮದೀಯರು! ಅದು ಇಂಗ್ಲಿಷರಿಗೆ ಬಹು ಅಪಾಯಕರವಾದ ಕಾಲವಾಗಿತ್ತು. ಬಾಲ ನಿಜಾಮನ ರಾಜ್ಯಾಭಿಷೇಕ ಸಮಾರಂಭಕ್ಕಾಗಿ ದರ್ಬಾರಿನಲ್ಲಿ ಅನೇಕ ಮಂದಿ ಇಂಗ್ಲೀಷರು ನೆರೆದಿದ್ದರು ಅದನ್ನು ಮುಗಿಸಿಕೊಂಡು ತನ್ನ ಬಂಗಲೆಗೆ ಬಂದೊಡನೆಯೇ ರೆಸಿಡೆಂಟನು ಗೌರ್ನರ್ ಜನರಲ್ಲಿನಿಂದ "ದೆಹಲಿಯು ಕೈಬಿಟ್ಟುಹೋಯಿತು" ಎಂದು ಬಂದಿದ್ದ ತಂತೀವಾರ್ತೆಯನ್ನು ಕಂಡು, ಒಡನೆ ಸಾಲಾರ್ ಜಂಗನನ್ನು ಕರೆಸಿ, ಆ ಸಂಗತಿಯನ್ನು ತಿಳಿಸಿದನು ಮಂತ್ರಿಯು, ತನಗೆ ಆ ಸಂಗತಿಯು ಮೂರುದಿನಗಳ ಮುಂಚೆಯೇ ತಿಳಿದಿದ್ದಿತೆಂದು ಪ್ರತ್ಯುತ್ತರವಿತ್ತನು. ಸಾಲಾರ್ ಜಂಗನೇನಾದರೂ ಆಗ ದ್ರೋಹಭಾವನೆಯನ್ನು ವಹಿಸಿದ್ದರೆ ದಂಗೆಯವರೊಂ

ದಿಗೆ ತನ್ನ ಸಹಾನುಭೂತಿಯುಂಟೆಂಬ ಲೇಶಮಾತ್ರ ಸೂಚನೆಯನ್ನಾದರೂ ಕೊಟ್ಟಿದ್ದರೆ ದರ್ಬಾರಿನಲ್ಲಿ ನರೆದಿದ್ದ ನಿಸ್ಸಹಾಯರಾಗಿದ್ದ ಆಸು ಮಂದಿ ಇಂಗ್ಲಿಷರ ಗತಿ ಏನಾಗಬಹುದಾಗಿತ್ತು?—

ಆದರೆ ಆ ಮಹಾಮಂತ್ರಿಯು ಕೊನೆಯವರೆಗೂ ಬ್ರಿಟಿಷ್ ರಾಜನಿಗೆ ವಿಶ್ವಾಸ ಘಾತುಕತನ ಮಾಡಕೂಡದೆಂದು ಸ್ಥಿರಸಂಕಲ್ಪವನ್ನು ಮಾಡಿದನು. ಜೂರ್ ೧೭ ನೆಯ ತಾರೀಖಿನ ದಿನ ಹೈದರಾಬಾದಿನ ಮುಖ್ಯ ಮುಖ್ಯ ಸ್ಥಳಗಳಲ್ಲಿ ದೊಡ್ಡ ಅಕ್ಷರಗಳಿಂದ ಬರೆದ ಕಾಗದಗಳು ಹಚ್ಚಲ್ಪಟ್ಟುವು ಅವುಗಳೆಲ್ಲವೂ, ಮನಸ್ಸನ್ನು ಉದ್ರೇಕಗೊಳಿಸುವ ವಾಕ್ಯಗಳಿಂದ ಬರೆಯಲ್ಪಟ್ಟು ಮಹಮ್ಮದೀಯ ಮೌಲ್ವಿಗಳಿಂದ ಸಹಿ ಮಾಡಲ್ಪಟ್ಟು, ಇಂಗ್ಲಿಷರ ಮೇಲೆ ತಮ್ಮ ಮತ ಧರ್ಮರಕ್ಷಣೆಗಾಗಿ ಯುದ್ಧ ಮಾಡಬೇಕೆಂದು ಜನಗಳಿಗೆ ಪ್ರೋತ್ಸಾಹ ಕೊಡತಕ್ಕವಾಗಿದ್ದುವು ಮಾರನೆಯ ದಿನ ಅಲ್ಲಿಯ ಪ್ರಸಿದ್ಧನಾದ ಮಕ್ಕಾಮಸೀದಿಯಮೇಲೆ ಒಣ್ಣದ ಬಾವುಟವು ಏರಿಸಲ್ಪಟ್ಟಿತು. ಅದರ ಸುತ್ತಲೂ ಸಹಸ್ರಾರು ಮಂದಿ ನೆರೆದರು ಜನಗಳಿಗೆ ಧರ್ಮೋಪದೇಶ ಮಾಡಲು ನಿಂತಿದ್ದ ಮೌಲ್ವಿಯನ್ನು ಉದ್ದೇಶಿಸಿ, "ಮಹಮ್ಮದೀಯ ಮತದ ರಕ್ಷಣೆಗಾಗಿ ಧರ್ಮದ ಝಂಡಾವನ್ನು ಎತ್ತಿ ಹಿಡಿದು ಅದಕ್ಕಾಗಿ ತಲೆಕೊಡಬೇಕೆಂದು ನೀನೇಕೆ ಜನಗಳಿಗೆ ಬೋಧಿಸುವುದಿಲ್ಲ?" ಎಂದು ಮೌಲ್ವಿಯನ್ನು ಆಕ್ಷೇಪಿಸಿ ಗುಂಪಿನಿಂದ ಹೇಳತೊಡಗಿದರು ಒಡನೆ ಎಲ್ಲರೂ 'ದೀನ್ ದೀನ್' ಎಂದು ಕೂಗಿಕೊಂಡರು ಆದರೇನು, ಆ ಮೌಲ್ವಿಯು ಒಡನೆ ದಸ್ತಗಿರಿ ಮಾಡಲ್ಪಟ್ಟನು. ಜನಗಳ ಗುಂಪು ಮಂತ್ರಿಯ ಆಜ್ಞೆಯಿಂದ ಚದುರಿಸಲ್ಪಟ್ಟಿತು. ಬ್ರಿಟಿಷರ ಮೇಲೆ ದ್ವೇಷಭಾವವನ್ನುಂಟುಮಾಡುವ ಭಾಷಣವನ್ನು ಕೊಡುತ್ತಿದ್ದ ಮತ್ತೊಬ್ಬ ಮಹಮ್ಮದೀಯ ಫಕೀರನು, ನಿರ್ಬಂಧಿತನಾಗಿ ಕಾರಾಗೃಹದಲ್ಲಿಡಲ್ಪಟ್ಟನು —

ಅಷ್ಟರಲ್ಲಿ ತೋರಾಬಕ್ಷ ಮತ್ತು ಅಲ್ಲಾವುದ್ದೀನ್ ಎಂಬಿಬ್ಬರು ಪ್ರಮುಖರು, ೫೦೦ ಮಂದಿ ರೋಹಿಲರ ಮತ್ತು ೪೦೦೦ ಮಂದಿ ಇತರರಿಂದ ಕೂಡಿದ ಗುಂಪನ್ನು ತೆಗೆದುಕೊಂಡು ರೆಸಿಡೆಂಟನ ಬಂಗಲೆಯನ್ನು ಮುತ್ತಿದರು. ಈ ಸಂಗತಿ ಸಾಲಾರಜಂಗನಿಗೆ ತಿಳಿಯಿತು. ಒಡನೆ ಆತನು, ರೆಸಿಡೆಂಟನಿಗೆ ಜಾಗ್ರತೆಯಾಗಿರುವಂತೆ ಎಚ್ಚರಕೊಟ್ಟು ಸಿಕಿಂದರಾಬಾದಿನಿಂದ ಸೈನ್ಯ

ವನ್ನು ತರಿಸಿ ಆ ಗುಂಪನ್ನು ಚದುರಿಸಿ ಓಡಿಸಿದನು. ದಂಗೆಯವರೆಲ್ಲನೇಕರನ್ನು ಸೆರೆಹಿಡಿದು ಶಿಕ್ಷೆಯನ್ನು ವಿಧಿಸುವುದಕ್ಕಾಗಿ ರೆಸಿಡೆಂಟನ ವಶಪಡಿಸಿದನು. ಧರ್ಮರಕ್ಷಣ ಮಾಡಬೇಕೆಂದು ನಿಸಾಮನಿಗೆ ಬೋಧಿಸುವುದಕ್ಕಾಗಿ ದಂಗೆಯ ಗುಂಪಿನವರು ಕೆಲವುಂದಿ ಮೌಲ್ವಿಗಳನ್ನು ಕರೆದುಕೊಂಡು ಅರಮನೆಗೆ ಬಂದರು. ನಿಸಾಮನ ಆಜ್ಞೆಯಿಂದ ಅವರನ್ನೂ ಬಂಧಿಸಿ ಗಲಭೆಯವರನ್ನು ತುಪಾಕಿಯನ್ನು ಹಾರಿಸಿ ಚದುರಿಸಿದ್ದಾಯಿತು. ಅಷ್ಟರಲ್ಲಿ ನಾಲದುದಕ್ಕೆ ಮೊಹರಂ ಹಬ್ಬವು ಪ್ರಾಪ್ತವಾಯಿತು. ಆ ಹಬ್ಬದ ಕಾಲದಲ್ಲಿ ಮತ್ತೇನು ಗಲಭೆ ನಡೆಯುತ್ತಿರುವುದೋ ಎಂದು ಎಲ್ಲರೂ ಗಾಬರಿಪಟ್ಟಿದ್ದರು. ಆದರೆ ನಿಸಾಮನ ಮತ್ತು ಮಂತ್ರಿಯ ದರ್ಪಜಾಗರೂಕತೆಗಳಿಂದ ಯಾವ ಗಲಭೆಗೂ ಅವಕಾಶವುಂಟಾಗಲಿಲ್ಲ. ದಂಗೆಯ ಪ್ರೋತ್ಸಾಹಕರು ಹೈದರಾಬಾದಿನಲ್ಲಿ ತಮಗೆ ಯಾವ ಬಗೆಯಿಂದಲೂ ಆಶ್ರಯ ಸಿಕ್ಕಲಾರದೆಂದು ನಿರಾಶರಾಗಿ ಆ ಸ್ಥಳವನ್ನು ಬಿಟ್ಟು ಹೊರಟುಹೋದರು. ಆಗ ಇಂಗ್ಲಿಷರಿಗಾದ ಸಹಾಯವನ್ನು ಕುರಿತು, ಕರ್ನಲ್ ಡೇವಿಡ್‌ಸನ್ ಎಂಬ ರೆಸಿಡೆಂಟನು ಈ ರೀತಿಯಾಗಿ ಬರೆದಿರುವುದು ಗಮನಿಸತಕ್ಕದಾಗಿದೆ.

"ನಿಸಾಮನ ಮಂತ್ರಿ ಸಾಲಾರ್‌ಜಂಗರು ಕೇವಲ ಜಾಗರೂಕತೆಯಿಂದಲೂ, ಲೇಶವೂ ಕಾಲಲೋಪವಿಲ್ಲದೆಯೂ, ಅಸಾಧ್ಯಶಕ್ತಿಯೊಡನೆಯೂ ಇಂಗ್ಲಿಷ್ ಸರ್ಕಾರಕ್ಕೆ ಮಾಡಿದ ಸಹಾಯವು ಶ್ಲಾಘನೆಯ ಮಿತಿಯನ್ನು ಮೀರಿ ಹೋಗಿದೆ. ಈ ಮಂತ್ರಿವರ್ಯನು ತನ್ನ ಪ್ರಾಣಕ್ಕೇ ಅಪಾಯ ಬರುವುದೆಂದು ತಿಳಿದಿದ್ದರೂ ನಮಗೆ (ಇಂಗ್ಲಿಷರಿಗೆ) ಆ ಕಷ್ಟಕಾಲದಲ್ಲಿ ಸಹಾಯ ಮಾಡಲೇಬೇಕೆಂದು ಮಾಡಿಕೊಂಡಿದ್ದ ನಿಶ್ಚಲತೆಗಾಗಿ ತನ್ನ ಸ್ವಜನರ ಅವಿಶ್ವಾಸವನ್ನು ಹೊಂದಬೇಕಾಯಿತು. ಮುಸಲ್ಮಾನರೆಲ್ಲರೂ ಆತನನ್ನು ಜಾತಿಬಾಹಿರನೆಂದು ಬೈದರು. ಧರ್ಮಬಾಹಿರನೆಂದು ದೂಷಿಸಿದರು. ಆದರೆ ಜನಸಾಮಾನ್ಯದ ಬೈಗಳು, ಬೆದರಿಕೆ ಬೇಡಿಕೆಗಳಿಗೆ ಆತನ ಚಿತ್ತವೃತ್ತಿಯು ಚಲಿಸಲಿಲ್ಲ. ಆ ಮಹಾಮಂತ್ರಿಯು, ಆತನಾಗಿದ್ದ ನಮ್ಮ ರಕ್ಷಣೆಗಾಗಿ ಮುಂದಿಟ್ಟಿದ್ದ ಹೆಜ್ಜೆಯನ್ನು ಹಿಂದಕ್ಕಿಡಲಿಲ್ಲ. ಆತನನ್ನು ಕೊಲ್ಲುವುದಕ್ಕಾಗಿ ಹನ್ನೆರಡು ಸಾರಿ ಒಳಸಂಚುಗಳೂ ಪ್ರಯತ್ನವೂ ನಡೆದುವು. ಈ ಪ್ರಾಣಭೀತಿಯೂ ಆತನನ್ನು ಕರ್ತವ್ಯ ದ್ರೋಹಿಯನ್ನಾಗಿ ಮಾಡಲಿಲ್ಲ. ನಾ

ನು ಯಾವ ಸಂದರ್ಭದಲ್ಲಿ ಎಷ್ಟು ಅಲ್ಪವಾದ ಅಥವ ಎಂತಹ ಮಹತ್ವಾದ ಸಹಾಯವನ್ನು ಅಪೇಕ್ಷಿಸಿದರೂ ಲೇಶವೂ ನಾವಕಾಶ ಮಾಡದೆ, ಗೊಣಗಿಕೊಳ್ಳದೆ, ನಿಸಾಂ ಸರ್ಕಾರದವರ ಸಮಸ್ತ ಉಪಪತ್ತಿಯೂ ನಿಮ್ಮದೇ ಎಂದು ತಿಳಿಯಿರಿ ಎಂದು ಭರವಸೆಕೊಟ್ಟದಲ್ಲದೆ ಕಾರ್ಯತಃ ನಡೆಯಿಸಿಯೂ ಕೊಟ್ಟು, ತನ್ನ ಉದಾರ ಚರಿತೆಯನ್ನು ಪ್ರಕಟಿಸಿದನು''—

ಈ ಸಂದರ್ಭದಲ್ಲಿ ನಿಸಾಮು ಸರ್ಕಾರದವರು ದಂಗೆಯವರಿಗೆ ಪ್ರತ್ಯಕ್ಷವಾಗಿ ಸಹಾಯವನ್ನೇ ಮಾಡದೆ ಸುಮ್ಮನಿದ್ದರೆ ಮಾತ್ರವಲ್ಲ, ಬ್ರಿಟಿಷರಿಗೆ ಒತ್ತಾಸೆ ಕೊಡದ ಹೋಗಿದ್ದರೂ, ಅವರ ಬಾಳ್ವೆಯು ಅಸಹನೀಯವಾಗಿರುತ್ತಿತ್ತು. ಅಂತಹ ಆ ಸಂದರ್ಭದಲ್ಲಿ ಈ ಮಹಾಮಂತ್ರಿಯ ನೀತಿವಿಚಕ್ಷಣೆ ದೂರಾಲೋಚನೆಗಳು ನಿಸಾಮನಿಗೆ ಸಹಾಯಕವಾಗದೆ ಹೈದರಾಬಾದು ಸಂಸ್ಥಾನವೂ ದಂಗೆಗೆ ಆಶ್ರಯವನ್ನಿತ್ತಿದ್ದುದಾದರೆ ಹಿಂದೂಸ್ಥಾನದ ಚರಿತ್ರೆಯುನ್ನು ಈಗಿರುವುದಕ್ಕಿಂತಲೂ ಅತ್ಯಂತಭಿನ್ನವಾದ ರೀತಿಯಲ್ಲಿ ಬರೆಯಬೇಕಾದ ಸಂಭವವಿತ್ತು. ಆದರೆ ಹಾಗಾಗಲಿಲ್ಲ! ದಂಗೆಯೂ ಕೊನೆಗಂಡಿತು. ಬ್ರಿಟಿಷರೂ ಸುರಕ್ಷಿತರಾದರು ಅವರ ಪ್ರಭುತ್ವವೂ ದೃಢಮೂಲವಾಯಿತು. ಆದರೆ, ಎಲ್ಲವೂ ಮುಗಿದು ಸುಖಶಾಂತಿಗಳು ಏರ್ಪಟ್ಟ ತರುವಾಯ ಪ್ರಾಣಾಪಾಯಕ್ಕೂ ಬೆದರದ ತಮ್ಮ ಸಮಸ್ತವನ್ನೂ ಅರ್ಪಿಸಲು ಸಿದ್ಧನಾಗಿದ್ದು ಬೆಂಬಲವಾಗಿ ನಿಂತಿದ್ದ ನಿಸಾಮ-ಸಾಲಾರ್‌ಜಂಗರಿಗೆ ಬ್ರಿಟಿಷ್ ಪ್ರಭುತ್ವದವರಿಂದ ದೊರೆತ ಬಹುಮಾನವೇನ? ಬಹುಮಟ್ಟಿನ ಉಪಚಾರ ವಾಕ್ಯಗಳು ಸೂರೆಯಾದುವು! ಸಭಾಸಮೇತನಾದ ಗವರ್ನರ್ ಜನರಲ್ ಸಾಹೇಬನು ಸಾಲಾರ್‌ಜಂಗನ ಶೌರ್ಯಸಾಹಸಗಳನ್ನು ವರ್ಣಿಸುತ್ತಾ, 'ಆಸಕ್ತಿ, ಆಧೈರ್ಯ, ಆ ದೃಢಚಿತ್ತತ ಮುಂತಾದುವುಗಳಿಂದ ಆ ಮಹಾಮಂತ್ರಿಯು ಈ ಸಂದರ್ಭದಲ್ಲಿ ತನ್ನ ಸ್ವಾಮಿಯಾದ ನಿಸಾಮನಿಗೂ, ಬ್ರಿಟಿಷ್ ಸರ್ಕಾರಕ್ಕೂ ಮಾಡಿದ ಸಹಾಯದಿಂದ ಆತನು ಹಿಂದೂಸ್ಥಾನ ಸರ್ಕಾರದವರ ಪ್ರೀತಿವಿಶ್ವಾಸಗಳಿಗೆ ಪಾತ್ರನಾಗಿದ್ದಾನೆ'' ಎಂದು ಹೊಗಳಿದನು—ಅಲ್ಲದೆ, ಎಲ್ಲವೂ ಮುಗಿದ ಮೇಲೆ, ಬ್ರಿಟಿಷ್ ತರುವರಿಯ ಒಂದು ಲಕ್ಷ ರೂಪಾಯಿನ ಸಾಮಾನುಗಳನ್ನು ನಿಸಾಮನಿಗೂ, ಮೂವತ್ತು ಸಹಸ್ರ ರೂಪಾಯಿಗಳು ಬಾಳುವ ಪದಾರ್ಥಗಳನ್ನು ಮಂತ್ರಿಗಳಿಗೆ ಬಹುಮಾನವಾಗಿ ಕಳುಹಿಸಿದರು. ಇದು ಅದರಿಂದಾದ

ಸಹಾಯಕ್ಕೆ ಅತ್ಯಲ್ಪವಾದ ಬಹುಮಾನಗಳೆಂಬುವು, ಅವರಿಗೇ ಗೋಚರವಾಗ ದಿರಲಿಲ್ಲ. ತರುವಾಯ ಹಿಂದ ಸೈನ್ಯದ ಖರ್ಚಿನ ಬಾಕೀಗಾಗಿ ಸ್ವಾಧೀನಪಡಿಸಿ ಕೊಂಡಿದ್ದ, ವಾರಾಸಾಲ್, ರಾಯಚೂರು ದೋಅಬ್, ಮತ್ತು ಷೋರಾಪುರ ಇವುಗಳನ್ನು ನಿಜಾಮನ ಪಾಲನೆಗೆ ಒಳಪಡಿಸಿದರು ಎಂತೂ ಮಹಾದಾರುಣವಾದ ಸಿಪಾಯಿ ದಂಗೆಯ ಗಲಭೆಯಿಂದ ಬುಡಮೊಂದಿಗೆ ಅಲಾಡಿ ಹೋಗಿದ್ದ ಬ್ರಿಟಿಷ್ ದೌಲತ್ತಿನವರಿಗೆ ಆ ಕಾಲದಲ್ಲಿ ಅನ್ಯಾದೃಶವಾದ ಸಹಾಯವನ್ನು ಮಾಡಿ, ನಮ್ಮ ಕಥಾನಾಯಕನು ಅಜರಾಮರವಾದ ಕೀರ್ತಿಯನ್ನು ಸಂಪಾದಿಸಿದನು



ಅಧ್ಯಾಯ ೬ "ದುರಂತ-ಗಂಡಾಂತರ"

ತ್ರುರಾಜ್ ಅಲ್ಲಿ ಸಾಲಾರ್ ಜಂಗನು ದಂಗೆಯ ಕಾಲದಲ್ಲಿ ನಿರ್ಭಯ,ನಿಶ್ಚಲತೆಗಳಿಂದಲೂ ದೂರದೃಷ್ಟಿ ದೃಢಚಿತ್ತತೆಗಳಿಂದಲೂ ತನ್ನ ಸಂಸ್ಥಾನವು ಪುಂಡರ ಪಾಳಯಕ್ಕೆ ಒಳಗಾಗದಂತೆ ಕಾಪಾಡಿಕೊಂಡುದೂ, ಅವರನ್ನು ತಲೆಯೆತ್ತಲೀಸದುದೂ ಆತನನ್ನು ಪ್ರಜಾವರ್ಗದ ದೃಷ್ಟಿಯಿಂದ ಅತಿಶಯ ಅಪಯಶಸ್ಸಿಗ ಈಡುಮಾಡಿತು ದೇಶಕಾಲಗಳ ಸ್ಥಿತಿಗತಿಗಳಿಗೆ ಯಾವ ಮಾರ್ಗದ ಅನುಸರಣೆಯು ಸಾಧುವೆಂಬುದನ್ನು ಯೋಚಿಸಿ ತಿಳಿವಷ್ಟು ವಿಷಯ ಪರಿಗ್ರಹಣ ಸಾಮರ್ಥ್ಯವೂ ಗುಣಗ್ರಹಣ ಶಕ್ತಿಯೂ ಇಲ್ಲದ ನೀಚಜನರ ಮಧ್ಯದಲ್ಲಿ ಯಾವ ಸದ್ಗುಣಕ್ಕೆ ತಾನೇ ಪ್ರಕಾಶವುಂಟಾದೀತು! ಜನರು ಆತನನ್ನು ಧರ್ಮಬಾಹಿರನೆಂದು ದೂಷಿಸಿದುದಷ್ಟುಮಾತ್ರವಲ್ಲ! ೧೮೫೯ ನೆಯ ಮೇ ತಿಂಗಳು ೧೫ ನೆಯ ದಿನ ಆತನು ಬ್ರಿಟಿಷ್ ರೆಸಿಡೆಂಟನಾದ ಕರ್ನಲ್ ಡೇವಿಡ್ಸನ್ ಎಂಬಾತನೊಂದಿಗೆ, ನಿಜಾಮನ ದರ್ಬಾರನ್ನು ತೀರಿಸಿಕೊಂಡು ಹೊರ ಹೊರಟಿರಲು, ಜಹಂಗೀರ್ ಖಾನ್ ಎಂಬ ರೋಹಿಲನೊಬ್ಬನು ಆತನಿಗೆ ಗುರಿಯಿಟ್ಟು ತುಪಾಕಿಯನ್ನು ಹಾರಿಸಿದನು ದೈವಯತ್ನದಿಂದ ಅದು ಸಾಲಾರ್ ಜಂಗನಿಗ ತಪ್ಪಿ, ಪಕ್ಕದಲ್ಲಿದ್ದ ಸೇವಕರಲ್ಲ ಒಬ್ಬನನ್ನು ಘಾತಿಸಿತು. ತನ್ನ ಪ್ರಯತ್ನವು ನಿಷ್ಫಲವಾದುದನ್ನು ತಿಳಿದು ಆ ಘಾತುಕನು ಪ್ರಚಂಡರೋಷ

ದಿಂದ ಪ್ರಾಂಗಣದ ಮೇಲಿನ ಆನೆಯನ್ನು ತೊರೆದು ಕತ್ತಿಯನ್ನು ಹಿರಿದು ಮಂತ್ರಿಯನ್ನು ಇರಿಯುವುದಕ್ಕಾಗಿ ಆತನ ಮೇಲೆ ನುಗ್ಗಿದನು. ಆದರೆ ಅಷ್ಟರಲ್ಲಿ ಪಹರೆಗಾಗಿ ಜೊತೆಗೆ ಬಂದಿದ್ದ ರಾಜಪೂತರು ಆ ದುರುಳನನ್ನು ಹಿಡಿದು ಕತ್ತರಿಸಿ ಹಾಕಿದರು —

ವಿದ್ಯಾವಿಹೀನರೂ ವಿಚಾರವಿಹೀನರೂ ಆದ ಸಾಮಾನ್ಯ ಜನರು ಮಾತ್ರವೇ ಆತನನ್ನು ದ್ವೇಷಿಸುತ್ತಿದ್ದರೆಂತಲ್ಲ-ಆತನ ಅಧಿಕಾರ ಪದವಿಗಳನ್ನು ಕಂಡು ಅಸೂಯೆಯಿಂದ ಆತನ ಆ ಮಹೋನ್ನತಸ್ಥಾನವನ್ನು ಅಪಹರಿಸುವುದಕ್ಕಾಗಿ ಕಾದುಕೊಂಡಿದ್ದ ದೊಡ್ಡ ಮನುಷ್ಯರ ಗುಂಪಿನಲ್ಲೂ ಆತನಿಗೆ ಆಪ್ತರಾಗಿದ್ದವರು ಬಹು ಸ್ವಲ್ಪ ಮಂದಿ ಮಾತ್ರ! ಅವರಲ್ಲಿನೇಕರು, ಸಾಲಾರ್ ಜಂಗನು ಲಂಚಕ್ಕಾಸೆಪಟ್ಟು ರಾಜದ್ರೋಹಕ್ಕೆ ಮನಸ್ಸು ಕೊಟ್ಟಿದ್ದಾನೆಂಬ ಸಂಗತಿಯನ್ನು ನಂಬಿಕೆ ಹುಟ್ಟುವಂತ ನಿಜಾಮನ ಕಿವಿಯಲ್ಲಿ ಊದಿ, ಆತನ ಮೇಲೆ ಅತಿಶಯದ್ವೇಷಭಾವವನ್ನು ಹುಟ್ಟಿಸಿದರು. ಸಾಲದುದಕ್ಕೆ, ರೆಸಿಡೆಂಟನು ಆ ಮಂತ್ರಿಯನ್ನು ಉದ್ಯೋಗದಿಂದ ತೊಲಗಿಸುವ ವಿಷಯದಲ್ಲಿ ಇಷ್ಟಪಟ್ಟಿದ್ದಾನೆಂಬ ವೃತ್ತಾಂತವೂ ನಿಜಾಮನಿಗೆ ಮನವರಿಕೆ ಮಾಡಲ್ಪಟ್ಟಿತು. ಒಂದು ದಿನ ತನ್ನನ್ನು ಕಾಣಲು ಬಂದಿದ್ದ ರೆಸಿಡೆಂಟನೊಂದಿಗೆ ನಿಜಾಮನು ಆ ಪ್ರಸ್ತಾಪವನ್ನೆತ್ತಿ ತಾನು ಮಂತ್ರಿಯನ್ನು ಉದ್ಯೋಗನಿವೃತ್ತನನ್ನಾಗಿಸುವ ವಿಷಯದಲ್ಲಿ ಕುತೂಹಲಪಡುತ್ತೇನೆಂದು ತೋರ್ಪಡಿಸಿದನು. ಅಕಸ್ಮಾತ್ತಾಗಿ ಕೇಳಿದ ಆ ಮಾತಿಗೆ ರೆಸಿಡೆಂಟನು ಪರಮಾಶ್ಚರ್ಯಪಟ್ಟು, ಆ ಮಹಾಮಂತ್ರಿಯ ವಿಷಯದಲ್ಲಿ ಕನಸಿನಲ್ಲೂ ಅಂತಹ ಯೋಚನೆ ಮಾಡಬಾರದೆಂದು ನಿಜಾಮನಿಗೆ ತಿಳಿಸಿದನು. ಮುಂದೆ ಕೆಲದಿನಗಳಲ್ಲೇ ದರ್ಬಾರಿನಲ್ಲಿದ್ದ ಷಂಷುಲ್ ಉಂರ ಎಂಬೊಬ್ಬ ಘನವಂತನು, ಸಾಲಾರ್ ಜಂಗನ ಮೇಲೆ ನಡೆದಿದ್ದ ಪಿತೂರಿಯನ್ನೆಲ್ಲಾ ಭೇದಿಸಿ, ನಿಜಾಮನಿಗೆ ಆ ಸಂಗತಿಯನ್ನೆಲ್ಲಾ ತಿಳಿಸಿ ನಿಜಾಮನಲ್ಲಿದ್ದ ಕಲ್ಮಷವನ್ನು ಹೋಗಲಾಡಿಸಲು ಯತ್ನಿಸಿದನು. ಸಾಲದುದಕ್ಕೆ ಮತ್ತೊಂದು ಬಗೆಯಿಂದಲೂ ನಿಜಾಮನಿಗೆ ಬಲವಂತ ಬಂತು. ನಿಜಾಮನ ರಾಣೀವಾಸದವರು, ಸಾಲಾರ್ ಜಂಗನು ಮಹಾಶಕ್ತನೂ ದೂರದರ್ಶಿಯೂ ಆದ ಮಂತ್ರಿಯು, ಆತನನ್ನು ಮಂತ್ರಿಪದದಿಂದ ತಪ್ಪಿಸುವುದು ತಕ್ಕುದಲ್ಲ; ಹಾಗೊಂದುವೇಳೆ ಹೊಸ ಮಂತ್ರಿಯು ಬರುವುದಾದರೆ, ನಾವೆಲ್ಲರೂ ಘೋಷ

ವನ್ನು ಬಿಟ್ಟು ಹೊರಕ್ಕೆ ಬಂದು ಆ ನೂತನ ಮಂತ್ರಿಯು ನಾಲಿಗೆಯನ್ನು ಮುರಿದು ಅವನನ್ನು ಕಲ್ಲುಗಳಿಂದ ಹೊಡೆದು ಘಾತಿಸುತ್ತೇವೆ ಎಂದು ಹೇಳಿ ಕಳುಹಿಸಿದರಂತೆ! ಅದರಿಂದಲೂ ಇರಬಹುದು-ಎಂತಲೊ ನಿಸಾಮನು ಸಾಲಾರ್ ಜಂಗನ ವಿಷಯದಲ್ಲಿ ಪ್ರಸನ್ನನಾಗಿ ಆತನು ತನ್ನ ಉದ್ಯೋಗವನ್ನು ಬಿಡಬಾರದೆಂದು ಬರೆದು ಕಳುಹಿಸಿದನು ಅಲ್ಲದೆ ಆತನ ವಿಷಯದಲ್ಲಿ ತನಗುಂಟಾದ ಪ್ರಸನ್ನತೆಯ ಪ್ರದರ್ಶನಕ್ಕಾಗಿ ಸಧ್ಯದಲ್ಲೇ ಪ್ರಾಪ್ತವಾದ ಒಂದಾನೊಂದು ಹಬ್ಬದ ದರ್ಬಾರಿನಲ್ಲಿ ಆತನಿಗೆ ಸುಮಾರು ೫೦ ಸಹಸ್ರ ರೂಪಾಯಿ ಬೆಲೆ ಬಾಳುವ ಆಭರಣಾದಿಗಳನ್ನು ಬಹುಮಾನವಾಗಿ ಕೊಟ್ಟು ಗೌರವಿಸಿದನು ಮಾರನೆಯ ವರ್ಷ ಸಾಲಾರ್ ಜಂಗನು ಕುದುರೆಯಿಂದ ಬಿದ್ದು ಪ್ರಾಣಾಪಾಯವುಂಟಾಗಿರಲು ನಿಸಾಮನು ಅತಿಶಯವಾಗಿ ಮರುಗಿ ಗುಣವಾದೊಡನೆಯೇ, ಬಡಬಗ್ಗರಿಗೆ ಬಹುದ್ರವ್ಯವನ್ನು ಹಂಚಿಕೊಟ್ಟು ತನ್ನ ಉದಾರ ಚರಿತ್ರೆಯನ್ನು ಪ್ರಕಟಿಸಿದನು

ಸಾಲಾರ್ ಜಂಗನು ತನಗೆ ಮೇಲೆ ಮೇಲೆ ವಿರೋಧಿಗಳಾದ ಘಾತುಕರಿಂದ ಉಂಟಾಗುತ್ತಿದ್ದ ಪ್ರಾಣಾಪತ್ತುಗಳಿಗಾಗಲೀ, ಪ್ರಭು ಅಥವ ಪ್ರಜೆಗಳ ಅತೃಪ್ತಿ ಅಶಾಂತತೆಗಳಿಗಾಗಲೀ ಬದರದ-ಔದಾಸೀನ್ಯವಹಿಸದೆ ತನ್ನ ರಾಜಕಾರ್ಯದಲ್ಲಿ ಎಂದಿನಂತೆ ನಿರತನಾಗಿದನು ರಾಜ್ಯಕಾರ್ಯಭಾರದಲ್ಲಿ 'ಜಿಲ್ಲಾ ಬಂದೀ ಸಿಸ್ಟಂ' ಎಂಬುದನ್ನು ಏರ್ಪಡಿಸಿದನು ಇದರಿಂದ ಹೈದರಾಬಾದು ಸಂಸ್ಥಾನವು ಹದಿನೇಳು ಡಿಸ್ಟ್ರಿಕ್ಟುಗಳನ್ನೊಳಕೊಂಡ ಐದು ಡಿವಿಜನ್‌ಗಳಾಗಿ ವಿಭಾಗಿಸಲ್ಪಟ್ಟಿತು ಆವರೆಗೂ ಧಾನ್ಯರೂಪದಲ್ಲಿ ಕೊಡಲ್ಪಡುತ್ತಿದ್ದ ಭೂಕಂದಾಯವು ಮುಂದೆ ದ್ರವ್ಯರೂಪದಲ್ಲಿ ಕೊಡಲ್ಪಡಬೇಕೆಂದು ನಿರ್ಣಯವಾಯಿತು ಭೂಮಿಯು ಸರ್ವೆಮಾಡಲ್ಪಟ್ಟು, ಜಮೀನುಗಳ ಗೊತ್ತಾದ ವಿಸ್ತೀರ್ಣವು ನಿರ್ಣಯವಾಗಿ ರೈತರು ಕೊಡಬೇಕಾದ ಕಂದಾಯವು ಇಷ್ಟೇ ಎಂದು ಗೊತ್ತುಮಾಡಲ್ಪಟ್ಟಿತು ಸಾಲಾರ್ ಜಂಗನ ಕಾಲದಲ್ಲಿ ಹೈದರಾಬಾದು ಸಂಸ್ಥಾನವು ಎಷ್ಟು ಮಟ್ಟಿಗೆ ಅಭಿವೃದ್ಧಿಯಾಗಿತ್ತೆಂಬುದನ್ನು ಅಲ್ಲಿಯ ಬ್ರಿಟಿಷ್ ರೆಸಿಡೆಂಟರಲ್ಲೊಬ್ಬನಾದ ಮಿ|| ಸ್ಯಾಂಡರ್ಸ್ ಎಂಬ ಇಂಗ್ಲೀಷು ದೊಡ್ಡ ಮನುಷ್ಯನು ಹೀಗೆಂದು ವರ್ಣಿಸುತ್ತಾನೆ "ನಾನು ೧೮೭೦ ನೆಯ ಸಂ||ದಲ್ಲಿ ಮೊದಲನೆಯ ಬಾರಿ ಹೈದರಾಬಾದು ಸಂಸ್ಥಾನದೊಂದಿಗೆ ಪರಿಚಿತನಾದಾಗ

ಅದು ಇದ್ದ ಸ್ಥಿತಿಯನ್ನು, ಸರ್ ಛಾರಲ್ಸ್ ಮೆಟ್ಕಾಫ್ ದೊರೆಯಿಂದ ೧೮೨೦ ರಲ್ಲಿ ಅದು ಹೇಗಿತ್ತೆಂದು ವರ್ಣಿಸಲ್ಪಟ್ಟಿತ್ತೋ ಆ ಸ್ಥಿತಿಯೊಂದಿಗೆ ಹೋಲಿಸಿದ್ದಾದರೆ, ಸೂರ್ಯರ ಕಾಲದಲ್ಲಿದ್ದ ಇಂಗ್ಲೆಂಡು ದೇಶಕ್ಕೂ ಈಗ ಇರುವ ಇಂಗ್ಲೆಂಡು ದೇಶಕ್ಕೂ ಇರುವ ತಾರತಮ್ಯವು ತೋರಿಬರುವುದು ಇಂತಹ ಫಲಿತಾಂಶಕ್ಕೆ ದೂರದರ್ಶಿಯಾದ ಸಾಲಾರ್ ಜಂಗ್ ಮಂತ್ರಿಯ ರಾಜಕಾರ್ಯ ನೈಪುಣ್ಯ, ಮತ್ತು ಅರ್ಥ ಶಾಸ್ತ್ರ ಪ್ರಾವೀಣ್ಯತೆ ಮುಂತಾದುವುಗಳೂ, ಆತನಿಗೆ ನನ್ನ ಹಿಂದೆ ಇದ್ದ ಬ್ರಿಟಿಷ್ ರೆಸಿಡೆಂಟರು ಯೋಗ್ಯಸಹಾನುಭೂತಿಯಿಂದವರ್ತಿಸಿದುದೂ ಕಾರಣಗಳಾಗಿವೆ ಈಗ ರಾಜಭಾಂಡಾರವು ತುಂಬಿದೆ ಅಲ್ಲದೆ ಪ್ರತಿ ವರ್ಷದ ರಾಜಾದಾಯವು ಲಕ್ಷ ರೂಪಾಯಿಗಳಿಂದ ಹೆಚ್ಚಿದೆ, ಅಲ್ಲದೆ, ಪ್ರಭುತ್ವದ ಸ್ಥಿತಿ ಗೌರವವೂ ಅಧಿಕರಿಸಿದೆ. ಕಂದಾಯ ವಸೂಲಿಯಲ್ಲಿ ಪೂರ್ವದಲ್ಲಿದ್ದ ಪದ್ಧತಿಯು ತಪ್ಪಿದುದರಿಂದ, ಗ್ರಾಮಾಂತ್ರಗಳ ರೈತ ಪ್ರಜೆಗಳು, ಕಂಟ್ರಾಕ್ಟರು ಕಲೆಕ್ಟರರು ಮುಂತಾದವರ ಬಾಧೆಯಿಂದ ಮುಕ್ತರಾದರು" ಹೀಗೆ ಗುಣಗ್ರಹಣಶೀಲರಾದ ಪರಕೀಯರು ಆತನ ಪ್ರಭುತ್ವ ಸಾಮರ್ಥ್ಯವನ್ನು ಮೆಚ್ಚಿಕೊಳ್ಳುತ್ತಿದ್ದರೂ, ಹೈದರಾಬಾದಿನಲ್ಲಿದ್ದ ಅನೇಕ ಅನಾಗರಿಕ ಮೊರಟು ಪ್ರಜೆಗಳು ಆತನ ರಾಜಕಾರ್ಯ ವಿಚಕ್ಷಣೆಯ ಯೋಗ್ಯತೆಯನ್ನು ತಿಳಿಯಲಾರದೆ ಹೋದರು ಆತನಿಗೆ ಯಾವ ಬಗೆಯಿಂದಲಾದರೂ ಪ್ರಾಣಾಪಾಯವನ್ನುಂಟು ಮಾಡಬೇಕೆಂಬ ಪಿತೂರಿಯು ನಡೆಯುತ್ತಲೇ ಇತ್ತು ೧೮೬೮ ನೆಯ ಸಂ|| ದಲ್ಲಿ ಒಂದು ದಿನ ಆತನು ನಿಸಾಮನ ದರ್ಬಾರಿಗಾಗಿ ಹೊರಟಿದ್ದಾಗ ಅರಮನೆಯ ಸಮೀಪದಲ್ಲೇ ದುರುಳನೊಬ್ಬನು ಕಾದಿದ್ದು ಆತನ ಮೇಲೆ ಎರಡು ಗುಂಡುಗಳನ್ನು ಹಾರಿಸಿದನು ಆದರೆ ಅವುಗಳಲ್ಲೊಂದೂ ಆತನಿಗೆ ತಗುಲಲಿಲ್ಲ ಆ ಘಾತುಕನೂ ಒಡನೆ ಹಿಡಿಯಲ್ಪಟ್ಟನು ನಿಸಾಮನು ಆ ದುಷ್ಟನಿಗೆ ಮರಣದಂಡನೆಯನ್ನು ವಿಧಿಸಿದನು ಸಾಲಾರ್ ಜಂಗನು, ಅವನಿಗೆ ಮರಣದಂಡನೆಯನ್ನು ತಪ್ಪಿಸಿ, ಕಠಿಣ ಸಜೆಯನ್ನು ವಿಧಿಸಬೇಕಾಗಿ ಹೇಳಿದನಾದರೂ ನಿಸಾಮನು ಅದಕ್ಕೆ ಒಪ್ಪಲಿಲ್ಲ ತನ್ನ ಮಂತ್ರಿಯು ಆ ದುರಂತಗಂಡಾಂತರದಿಂದ ಪಾರಾಗಿ ಬಂದುದಕ್ಕಾಗಿ, ನಿಸಾಮನು ಭಗವಂತನಿಗೆ ತನ್ನ ಕೃತಜ್ಞತೆಯನ್ನು ಪ್ರಕಟಿಸಿ ಮಂತ್ರಿಯನ್ನು ಅಭಿನಂದಿಸಿದನು

ಅಧ್ಯಾಯ ೭ "ಚಕ್ರವರ್ತಿನಿಯ-ದರ್ಶನ"

ಸಾಲಾರ್ ಜಂಗನು ಆಪತ್ಕಾಲದಲ್ಲಿ ಬ್ರಿಟಿಷ್ ಜನಗಳಿಗೆ ಮಾಡಿದ ಸಹಾಯಕ್ಕೆ ಆತನಿಗಾದ ಬಹುಮಾನವು ಮತ್ತೂ ಒಂದುಂಟು ೧೮೭೭ ನೆಯ ಸಂ|| ದಲ್ಲಿ ಶ್ರೀ ವಿಕ್ಟೋರಿಯಾ ಮಹಾರಾಣಿಯವರು ಆತನಿಗೆ ಕೆ. ಸಿ ಎಸ್. ಐ ಎಂದರೆ "ನೈಟ್ ಕಮಾಂಡರ್ ಆವ್ ದಿ ಸ್ಟಾರ್ ಆವ್ ಇಂಡಿಯಾ" ಎಂಬ ಘನತರವಾದ ಬಿರುದನ್ನು ಪ್ರಸಾದಿಸಿ ಗೌರವಿಸಿದರು ತನ್ನ ಸಂಸ್ಥಾನದ ಮಂತ್ರಿಯು ಉತ್ತಮ ರಾಜ್ಯಪಾಲನೆ ಧೈರ್ಯ ಸಾಹಸಾದಿಗಳಿಂದ, ಮಹಾಪ್ರಬಲರೆನಿಸಿದ ಬ್ರಿಟಿಶ್ ಸರ್ಕಾರದವರನ್ನೂ ಮೆಚ್ಚಿಸಿ, ಘನತರ ಬಿರುದು ಬಹುಮಾನಗಳನ್ನು ಪಡೆದುದಕ್ಕಾಗಿಯೂ ನಿಸಾಮನಿಗೆ ಆತನ ವಿಷಯದಲ್ಲಿ ಸದಭಿಪ್ರಾಯವುಂಟಾಗಲಿಲ್ಲ ಅದೆಂತಹ ದುರ್ವಿಧಿಯೋ! ಅಫಸಲ್ ಉದ್ದೌಲನು ಬದುಕಿರುವವರೆಗೂ, ಮಧ್ಯೆ ಒಂದೆರಡುಸಾರಿ, ಪರರ ಬಲವಂತಕ್ಕೆ ತನ್ನ ಮಂತ್ರಿಯ ವಿಷಯದಲ್ಲಿ ಸ್ನೇಹರೀತಿಯಲ್ಲಿದ್ದಂತೆ ಕಂಡರೂ, ಇಬ್ಬರಿಗೂ ಅಷ್ಟುಮಿತ್ರತ್ವ ಇರಲೇ ಇಲ್ಲ ಹೀಗಿದ್ದು ನಿಸಾಮನು ೧೮೬೯ ನೆಯ ಫೆಬ್ರವರಿ ೨೬ ನೆಯ ದಿನ ಕಾಲಾಧೀನನಾದನು ತರುವಾಯ, ಆತನ ಮೂರು ವರ್ಷದ ಚಿಕ್ಕ ಮಗನಾದ ಮಹಬೂಬಲ್ಲಿಗೆ ಮಾರ್ಚಿ ೧ ನೇ ತಾ|| ನಲ್ಲಿ ಪಟ್ಟವಾಯಿತು. ನಿಸಾಮನ ಆ ಬಾಲ್ಯವಸ್ಥೆಯಲ್ಲಿ, ರಾಜ್ಯಭಾರವನ್ನು ನಡೆಯಿಸಲು ಸರ್ ಸಾಲಾರ್ ಜಂಗನೂ ಮತ್ತು ಆತನ ಮಿತ್ರನಾದ ಷಂಷುಲ್ ಉಂರಾನೂ ನಿಯಮಿತರಾದರು ಅಲ್ಲದೆ ಉಂರಾನ ಸಂಬಂಧಿಯಾದ ಅಮೀರ ಕಬೀರ ಎಂಬುವನೂ ಆ ಮಹಾಮಂತ್ರಿಯ ಶಕ್ತಿ ಸಾಮರ್ಥ್ಯಗಳನ್ನು ಬಲ್ಲವನಾದ್ದರಿಂದ, ಸಾಲಾರ್ ಜಂಗನು ಮಾಡಿದ ಸುಧಾರಣೆಗಳನ್ನೆಲ್ಲ ಅನುಮೋದಿಸಿ ಸಹಕರಿಸುತ್ತಾ ಬಂದನು ಮುಂದೆ ನವಿಸ್ಥಾ ಮಂತ್ರಿವರ್ಯನ ಅಧಿಕಾರವು ವಿಶೇಷ ಅಡಚಣೆಗಳಿಲ್ಲದೆ ಸುಲಭವಾಗಿ ಸಾಗತೊಡಗಿದನು.

ಸಿರಾಜ್ ಉಲ್ ಮುಲ್ಕನ ಕಾಲದಲ್ಲಿ ಸಂಸ್ಥಾನದ ಕೈತಪ್ಪಿ ಹೋಗಿದ್ದ ಬೀರಾರು ಸೀಮೆಯನ್ನು ಹೇಗಾದರೂ ಮಾಡಿ ಪುನಃ ಸ್ವಾಧೀನಕ್ಕೆ ಬರಮಾಡಿಕೊಳ್ಳಬೇಕೆಂಬುದು ಸರ್ ಸಾಲಾರ್ ಜಂಗನಿಗೆ ಪ್ರಾಣಪ್ರಿಯ ವಿಷಯವಾಗಿದ್ದಿತು. ತಾವು ಸಿಪಾಯಿ ದಂಗೆಯ ಕಾಲದಲ್ಲಿ ಮಾಡಿದ ಸಹಾಯದಿಂದ ಸುಪ್ರೀತರಾದ ಇಂಗ್ಲಿಷ್ ಸರ್ಕಾರದವರು, ಇಂದಲ್ಲದಿದ್ದರೆ ನಾಳೆಯಾದರೂ

ಅದನ್ನು ಪುನಃ ತನಗೆ ಕೊಡದಿರರೆಂದು ನಂಬಿದ್ದನು. ಆದರೆ, ಅಂತಹ ಲಾಭಕರವಾದ ಸೀಮೆಯು ಒಂದು ಸಾರಿ ಸ್ವಾಧೀನಕ್ಕೆ ದೊರೆತ ಮೇಲೆ, ಅದನ್ನು ಯಾವ ಕಾರಣದಿಂದಲಾದರೂ ಹಿಂದಕ್ಕೆ ಕೊಡುವಷ್ಟು ಹೆಡ್ಡರೇ ಅವರು! ಆದರೆ ಸಾಹಸಿಯಾದ ಸಾಲಾರ್‌ಜಂಗನೂ ಸುಮ್ಮನೆ ಕುಳಿತುಕೊಳ್ಳಲಿಲ್ಲ. ಮೇಲೆ ಮೇಲೆ ಕೇಳುತ್ತಲೇ ಇದ್ದನು ಆದರೂ ಸಾರ್ಥಕವಾಗಲಿಲ್ಲ. ಕೊನೆಗೆ ಬ್ರಿಟಿಷ್ ಸರ್ಕಾರದವರಿಗೆ ಮತ್ತೊಂದು ಸಲಹೆಯನ್ನು ಕೊಟ್ಟನು ಹೈದರಾಬಾದು ಸಂಸ್ಥಾನದಲ್ಲಿಟ್ಟಿರುವ ಬ್ರಿಟಿಷ್ ಸೈನ್ಯದ ಖರ್ಚಿಗಾಗಿಯೇ ಬೀರಾರನ್ನು ಕೊಟ್ಟಿರುವುದರಿಂದ, ಈಗ ಆ ಬಗೆಯ ಖರ್ಚಿಗಾಗಿ ಹನ್ನೆರಡು ಕೋಟಿ ರೂಪಾಯಿಗಳ ನಗದು ರೇವಣಾತಿಯನ್ನಿಟ್ಟುಕೊಂಡು ಆ ಸೀಮೆಯನ್ನು ಹಿಂದಕ್ಕೆ ಕೊಡಿಸಬೇಕೆಂದು ಅಪೇಕ್ಷಿಸಿದನು ಅವಕ್ಕೂ, ಗೌರ್ನರ್ ಜನರಲ್‌ಯವರಿಂದ ಸಹಜಪ್ರತ್ಯುತ್ತರವು ದೊರೆಯಲಿಲ್ಲ. ಬಹು ದಿನಗಳ ಮೇಲೆ, ಆ ವಿಚಾರವನ್ನು ಪುನಃ ವಿಮರ್ಶಿಸುವುದಿಲ್ಲವೆಂದು ಬ್ರಿಟಿಷ್ ಸರ್ಕಾರದವರು ಮಾನಸಿಕ ಮಾಡಿರುವುದರಿಂದ, ನಿಸಾಂ ಸರ್ಕಾರದವರು, ಮೇಲೆ ಮೇಲೆ ಆ ವಿಷಯದಲ್ಲಿ ಪ್ರಶ್ನಿಸುವುದರಿಂದ ಪ್ರಯೋಜನವಿಲ್ಲವೆಂದು ಖಂಡಿತದ ಪ್ರತ್ಯುತ್ತರ ಬಂತು ಕಾರ್ಯಚತುರನಾದ ಸಾಲಾರ್‌ಜಂಗನು ಆಗಲೂ ನಿರಾಶನಾಗದೆ ಮತ್ತೇನಾದರೊಂದು ಮಾರ್ಗದಿಂದ ಆ ವಿಚಾರದಲ್ಲಿ ಪ್ರಯತ್ನಿಸಬಹುದೇ ಎಂದು ನಿರೀಕ್ಷಿಸಿಕೊಂಡಿದ್ದನು. ಅಷ್ಟರಲ್ಲಿ ಅವಕ್ಕೊಂದು ಅನುಕೂಲ ಸಂದರ್ಭವೂ ಒದಗಿತು.

ಸನ್ ೧೮೭೫ ನೆಯ ಸಂ॥ ದಲ್ಲಿ ಶ್ರೀ ವಿಕ್ಟೋರಿಯಾ ಚಕ್ರವರ್ತಿನಿಯುವರ ಜ್ಯೇಷ್ಠಕುಮಾರನಾದ ಎಡ್ವರ್ಡ್ ರಾಜಪುತ್ರನು ಇಂಡಿಯಾ ದೇಶವನ್ನು ನೋಡುವುದಕ್ಕಾಗಿ ಬಂದನು. ಆಗ ದೇಶದೇಶಗಳಿಂದಲೂ ಅನೇಕ ಮಂದಿ ರಾಜರೂ ರಾಜಪುತ್ರರೂ ಸುಪ್ರಸಿದ್ಧ ಪುರುಷರೂ ಆತನನ್ನು ಬೊಂಬಾಯಿಯು ಬಂದರಿನಲ್ಲಿ ಕಂಡು ಗೌರವಿಸಿದರು. ಆಗ ಹೈದರಾಬಾದ್ ದೇಶದ ಪರವಾಗಿ, ನಿಸಾಮನು ಕೇವಲ ಬಾಲ್ಯವಯಸ್ಕನಾಗಿದ್ದುದರಿಂದ ಸರ್‌ಸಾಲಾರ್‌ಜಂಗನೇ ಬೊಂಬಾಯಿಗೆ ಹೋಗಿ ಯುವರಾಜನ ಭೇಟೀ (ದರ್ಶನ) ಮಾಡಿದನು ಆಗ ಎಡ್ವರ್ಡ್ ಯುವರಾಜನೊಂದಿಗೆ ಬಂದಿದ್ದ ಡ್ಯೂಕ್ ಆಫ್ ಸದರ್‌ಲ್ಯಾಂಡ್ ಎಂಬಾತನು, ಸಾಲಾರ್‌ಜಂಗನನ್ನು ಅತಿಶಯ ಮರ್ಯಾದೆಯಿಂದ ಕಂ

ಡು, ರಾಜಪುತ್ರನಿಗೆ ಆ ಮಹಾಮಂತ್ರಿಯ ಪರಿಚಯ ಮಾಡಿಸಿದನು. ತರುವಾಯ ಸರ್‌ಸಾಲಾರ್‌ಜಂಗನೂ ಡ್ಯೂಕ್ ದೊರೆಯನ್ನು ಹೈದರಾಬಾದಿಗೆ ಆಹ್ವಾನಿಸಿರಲು ಮಂತ್ರಿಯ ಅತಿಥಿಯಾಗಿ ಬಂದಿದ್ದ ಆತನು, ಸರ್‌ಸಾಲಾರ್‌ಜಂಗನು, ಇಂಗ್ಲೆಂಡು ದೇಶವನ್ನು ದರ್ಶಿಸಬೇಕೆಂದೂ, ಆತನ ಕೀರ್ತಿಪ್ರತಿಷ್ಠೆಗಳನ್ನು ಕೇಳಿಯೇ ಆನಂದಿತರಾಗಿರುವ ಇಂಗ್ಲಿಷ್ ಜನಗಳಿಗೆ ದರ್ಶನವನ್ನೂ ಕೊಟ್ಟು ಮಹದಾನಂದಿತರನ್ನಾಗಿ ಮಾಡಬೇಕೆಂದೂ ಆಹ್ವಾನಿಸಿದನು. ಅಲ್ಲದೆ, ಮಂತ್ರಿಶೇಖರನಿಗೂ, ಬೀರಾರು ವಿಚಾರವನ್ನು ಕುರಿತು ಇಂಗ್ಲೆಂಡಿನಲ್ಲೇ ಪ್ರಯತ್ನ ನಡಿಸಿ ತನ್ಮೂಲಕ ಕಾರ್ಯಸಾಧನೆ ಮಾಡಬೇಕೆಂಬ ಆಕಾಂಕ್ಷೆಯೂ ಇತ್ತು. ಆದುದರಿಂದ ಇಂಗ್ಲೆಂಡು ದೇಶಕ್ಕೆ ಪ್ರಯಾಣಮಾಡುವ ಮನಸ್ಸು ಮಾಡಿದನು.

ದೂರದೇಶದ-ಸಮುದ್ರಯಾನಕ್ಕೆ ಹೊರಡುವುದಕ್ಕೆ ಮುಂಚೆ ಸಾಲಾರ್‌ಜಂಗನು ತನ್ನ ಪ್ರವಾಸಕಾಲದಲ್ಲಿ ರಾಜ್ಯದಲ್ಲಿ ಅವ್ಯವಸ್ಥೆಯುಂಟಾಗದಂತೆ ತಕ್ಕ ಏರ್ಪಾಡುಗಳನ್ನು ಮಾಡಿಟ್ಟನು. ಆಪ್ರರಲ್ಲಿ ಆರೇಳುವರ್ಷ ವಯಸ್ಕನಾದ ಬಾಲ ನಿಜ಼ಾಮ್ ಮೀರ್ ಮಹಬೂಬ್ ಅಲ್ಲೀಖಾನನಿಗೆ ವೈಸರಾಯಿಯೊಂದಿಗೆ ವಿಶೇಷ ಕಾಗದ ಪತ್ರ ನಡೆಸಿ ಯೋಗ್ಯ ಉಪಾಧ್ಯಾಯನೊಬ್ಬನನ್ನು ಹವಣಿಸಲು ಪ್ರಯತ್ನಿಸಿದನು. ಕ್ಯಾಪ್ಟನ್ ಕ್ಲಾರ್ಕ್ ಎಂಬಾತನು ತಿಂಗಳೊಂದಕ್ಕೆ ೨೦೦ ಪೌಂಡು ಸಂಬಳದ ಮೇಲೆ, ಬಾಲ ನಿಜ಼ಾಮನ ವಿದ್ಯಾಭ್ಯಾಸಕ್ಕಾಗಿ ನಿಯಮಿತನಾದನು. ರಾಜ್ಯಭಾರವಿಚಾರದಲ್ಲಿ ಆಪ್ತಮಿತ್ರನಾದ ಷಂಷುಲ್ ಉಂರಾನು ಸ್ವತಃ ಶಕ್ತನಾಗಿದ್ದುದರಿಂದ ಮಂತ್ರಿಯು ಆ ವಿಷಯದಲ್ಲಿ ಯೋಚಿಸಬೇಕಾದ ಕಾರಣವಿರಲಿಲ್ಲ. ಕೊನೆಗೆ ೧೮೭೬ ನೆಯ ಏಪ್ರಿಲ್ ೮ ನೆಯ ತಾ|| ನಲ್ಲಿ ಸರ್‌ಸಾಲಾರ್‌ಜಂಗನು ಸುಮಾರು ಅರವತ್ತು ಮಂದಿ ಪರಿವಾರದೊಂದಿಗೆ ಬೊಂಬಾಯಿಯಿಂದ ನೌಕಾಪ್ರಯಾಣಮಾಡಿ ಮೇ ತಿಂಗಳು ೫ ನೆಯ ದಿನ ಇಟಲಿದೇಶದಲ್ಲಿರುವ ರೋಂನಗರವನ್ನು ಸುರಕ್ಷಿತವಾಗಿ ತಲುಪಿದನು. ಆ ದೇಶದ ದೊರೆಯು ಆತನಿಗೆ ದರ್ಶನವಿತ್ತು, ವಿಶೇಷವಾಗಿ ಆದರಿಸಿದನು. ಮೂರು ದಿನಗಳಮೇಲೆ, ಕ್ರೈಸ್ತಮತಗುರುವಾದ ಪೋಪ್ ದೊರೆಯು ತನ್ನ ಅರಮನೆಯಲ್ಲಿ ಸಭೆಯನ್ನು ನೆರೆಯಿಸಿ ಸರ್‌ಸಾಲಾರ್‌ಜಂಗನನ್ನು ಆ ಸಭೆಗೆ ಬರಮಾಡಿಕೊಂಡು "ಹೈದರಾಬಾದಿನಲ್ಲಿ ವಾಸಿಸುವ ರೋ

ಮರ್ ಕ್ಯಾಥೊಲಿಕ್ ಕ್ರೈಸ್ತ ಪ್ರಜೆಗಳಿಗೆ ತಾವು ಒದಗಿಸಿ ಕೊಟ್ಟಿರುವ ಅನುಕೂಲತೆಗಾಗಿ ತಮ್ಮನ್ನು ಕೃತಜ್ಞತಾ ಪೂರ್ವಕವಾಗಿ ವಂದಿಸುತ್ತೇನೆ" ಎಂದು ಬಹುಬಗೆಯಿಂದ ಆತನ ಗುಣಪ್ರಶಂಸೆ ಮಾಡಿದನು. ಮಂತ್ರಿಶೇಖರನು ತರುವಾಯ ಅಲ್ಲಿಂದ ಹೊರಟು, ನೇಪಲ್ಸ್ ವೆನಿಸ್ ಮುಂತಾದ ಇಟಲಿದೇಶದ ಕೆಲವು ಪ್ರಸಿದ್ಧ ಪಟ್ಟಣಗಳನ್ನು ನೋಡಿಕೊಂಡು, ಮುಂದಕ್ಕೆ ಪ್ರಯಾಣ ಮಾಡಿ ಮೇ ತಿಂಗಳು ೧೩ ನೆಯ ದಿನ ಫ್ರಾನ್ಸಿನ ಮುಖ್ಯ ಪಟ್ಟಣವಾದ ಪ್ಯಾರಿಸ್ ರಾಜಧಾನಿಯನ್ನು ಸೇರಿದನು ಅಲ್ಲಿ ಆ ಪರಿವಾರದವರು 'ಗ್ರ್ಯಾಂಡ್ ಹೋಟೆಲ್' ಎಂಬ ಒಂದು ವಿಶ್ರಾಂತಿ ಭವನದಲ್ಲಿ ತಂಗಿರಲು, ಆ ದಿನ ಸಾಯಂಕಾಲ ಮಂತ್ರಿಯು ಉಪ್ಪರಿಗೆಯ ಹಂಪವನ್ನಿಳಿದು ಕೆಳಕ್ಕೆ ಬರುತ್ತಿರುವಾಗ ಆಕಸ್ಮಿಕವಾಗಿ ಕಾಲು ಜಾರಿ ಕೆಳಕ್ಕೆ ಬಿದ್ದು ತೊಡೆಯ ಎಲುಬೊಂದು ಮುರಿದು, ಸುಮಾರು ಒಂದು ಪಕ್ಷಕಾಲ ಬಹುಬಾಧೆಕೊಟ್ಟಿತು. ಮಂತ್ರಿಯು ಎದ್ದು ಓಡಾಡಲೂ ಅವಕಾಶವಿಲ್ಲದಂತೆ ಹಾಸಿಗೆ ಹಿಡಿದು ಮಲಗಿದನು. ಅವರು ಅಲ್ಲಿ ಇದ್ದಷ್ಟು ದಿನವೂ ಆ ಮಹಾನಗರದ ಅನೇಕ ಪ್ರಜೆಗಳೂ, ಬಹುಬಗೆಯ ಕೆಲಸಗಾರರೂ, ವ್ಯಾಪಾರಿಗಳೂ ಅತ್ಯಂತ ಕುತೂಹಲದಿಂದ ಆ ಪರಿವಾರದವರೊಂದಿಗೆ ಮಿಳಿತರಾಗಿ ಆ ಮಹಾಮಂತ್ರಿಯನ್ನು ಕಂಡು ಹೋಗಲು ದಿನವೂ ತಂಡತಂಡವಾಗಿ ಬಂದು ಹೋಗುತ್ತಿದ್ದರು. ಮೇ ತಿಂಗಳು ಕೊನೆಯ ಭಾಗದಲ್ಲಿ ಸ್ವಲ್ಪ ಮಟ್ಟಿಗೆ ಗುಣ ತೋರಿ, ಎದ್ದು ನಡೆದಾಡಲು ಸಾಧ್ಯವಾಯಿತು. ತರುವಾಯ ಜೂನ್ ೧ ನೆಯ ದಿನ ಅಲ್ಲಿಂದ ಹೊರಟು, ತಮಗಾಗಿ ಏರ್ಪಟ್ಟಿದ್ದ ಬ್ರಿಟಿಷ್ ಹಡಗೊಂದನ್ನು ಏರಿ ಸಾಲಾರ್ ಜಂಗನೂ ಪರಿವಾರದವರೂ, ಇಂಗ್ಲೆಂಡಿನ ತೀರದ ಫೋಕ್‌ಸ್ಟೋನ್ ಎಂಬ ರೇವನ್ನು ಸೇರಿದರು. ಅಲ್ಲೂ ಡ್ಯೂಕ್ ಆಫ್ ಸದರ್‌ಲ್ಯಾಂಡ್ ದೊರೆಯೇ ಪ್ರಥಮದಲ್ಲಿ ಆತನನ್ನು ದರ್ಶಿಸಿ ಇಂಗ್ಲೆಂಡು ದೇಶದ ಪರವಾಗಿ ಸುಖಾಗಮನ ವಿತ್ತನು. ಫೋಕ್‌ಸ್ಟೋನ್ ಪುರಾಧಿಪತಿಯು ಒಂದು ಸನ್ಮಾನ ಪತ್ರಿಕೆಯನ್ನು ಒಪ್ಪಿಸಿದನು. ಅಂದಿನಿಂದ ಪ್ರಾರಂಭ! ಇಂಗ್ಲೆಂಡು ದೇಶದ ವರ್ತಮಾನ ಪತ್ರಗಳು ತೆರಪಿಲ್ಲದೆ ಪ್ರತಿದಿನವೂ ಆ ಮಹಾಮಂತ್ರಿಯ ಗುಣಕಥನ ಮಾಡತೊಡಗಿದುವು. ಅವುಗಳಲ್ಲೊಂದರಲ್ಲಿ "ನಮ್ಮ ನೂತನ ಅತಿಥಿಯು ಸಾಮಾನ್ಯಪುರುಷನಲ್ಲ. ದೆಹಲಿಯು ನಮ್ಮ ಕೈತಪ್ಪಿ ಹೋಗಿ ಹಿಂದೂಸ್ಥಾನದ

ಲ್ಲಿ ನಮ್ಮ ದೌಲತ್ತು ಆಗುಹೋಗುಗಳ ಮಧ್ಯ ಸ್ಥಿತಿಯಲ್ಲಿದ್ದಾಗ ದಕ್ಷಿಣ ಹಿಂದೂಸ್ಥಾನವನ್ನು ಇಂಗ್ಲೆಂಡು ದೇಶಕ್ಕಾಗಿ ಕಾಯ್ದಿಟ್ಟ ಮಹಾನುಭಾವನೀತನು ಈತನಿಂದ ನಾವು ಲಕ್ಷಾವದಿ ಸೈನ್ಯವನ್ನೂ ಕೋಟ್ಯಾಂತರ ದ್ರವ್ಯವನ್ನೂ ಖರ್ಚು ಮಾಡದೆಯೇ ಹಿಂದೂಸ್ಥಾನವನ್ನು ಉಳಿಸಿಕೊಳ್ಳಲು ಶಕ್ಯವಾಯಿತು ನಮ್ಮ ದೇಶದಲ್ಲಿ ಪದಾರ್ಪಣವಮಾಡಿರುವ, ನಿಸ್ವಾರ್ಥ ಈ ಮಂತ್ರಿ ಶ್ರೇಷ್ಠರನ್ನು ಅಂತಹ ಮಹೋಪಕಾರಕ್ಕೆ ಯೋಗ್ಯವಾದ ಮರ್ಯಾದೆಯಿಂದ ಗೌರವಿಸುವುದಕ್ಕೆ ಈಗಲೀಗ ತಕ್ಕ ಅನುಕೂಲ ಕಾಲವೊದಗಿದೆ" ಎಂದು ಬರೆಯಿತು. ಲಂಡನ್ ಪಟ್ಟಣದ ಲಾರ್ಡ್ ಮೇಯರೆಂಬ ನಗರಾಧಿಪನು ಸನ್ಮಾನ ಪತ್ರವನ್ನಿತ್ತು ಆತನನ್ನು ಗೌರವಿಸಿದುದಲ್ಲದೆ, "ಫ್ರೀಡಂ ಆಫ್ ದಿ ಸಿಟಿ ಆಫ್ ಲಂಡನ್" ಎಂದರೆ "ಲಂಡನ್ ನಗರನಿವಾಸಿ" ಎಂಬ ಅಪೂರ್ವ ಗೌರವವನ್ನು ಆತನಿಗೆ ತೋರಿಸಿ ಮನ್ನಣೆಮಾಡಿದನು. ಇನ್ನೂ ಸರಿಯಾಗಿ ನಡೆದಾಡಲು ಶಕ್ಯವಾಗದಿದ್ದುದರಿಂದ, ತನ್ನ ಕೋಟೆಡಿಯಲ್ಲೇ ಮಲಗಿದ್ದ ಆ ಮಂತ್ರಿ ಶೇಖರನನ್ನು ಎಡ್ವರ್ಡ್ ರಾಜಕುಮಾರನೂ, ರಾಜವರ್ಗದ ಇತರರನೇಕರೂ ಬಂದು ದರ್ಶಿಸಿ ಗೌರವಿಸಿದರು. ಜೂನ್ ೨೦ ನೆಯ ದಿನ ಯುವರಾಜನು ಸರ್ ಸಾಲಾರ್ ಜಂಗನ ಬಹುಮಾನಕ್ಕಾಗಿ ದೊಡ್ಡದೊಂದು ಔತನವನ್ನು ನಡಯಿಸಿದನು ಅದಕ್ಕೆ ಆಹ್ವಾನಿತರಾಗಿ ಬಂದಿದ್ದ ಪಾರ್ಲಿಮೆಂಟ್ ಸಭೆಯ ಅನೇಕ ಮಂದಿ ಪ್ರಭುಗಳು ಆತನ ಸಂದರ್ಶನ-ಸಂಭಾಷಣಗಳಿಂದ ಸುಪ್ರೀತರಾದರು. ತರುವಾಯ ಮಂತ್ರಿವರ್ಯನು ಆಕ್ಸ್‌ಫರ್ಡ್ ಕಲಾಶಾಲೆಯನ್ನು ಸಂದರ್ಶಿಸಲು ಆಹ್ವಾನಿತನಾಗಿ ಅಲ್ಲಿಗೆ ಹೋಗಿರಲು, ಆ ಕಲಾಶಾಲಾಧಿಕಾರಿಗಳು, ಆತನ ರಾಜಕಾರ್ಯ ಚಾತುರ್ಯ, ಪರೋಪಕಾರ ಪರಾಯಣತೆ ಮೊಂತಾದ ಸದ್ಗುಣಗಳನ್ನು ಶ್ಲಾಘಿಸಿ, ಆತನಿಗೆ ಡಿ. ಸಿ. ಎಲ್. ಎಂಬ ಘನತರವಾದ ಪಾಂಡಿತ್ಯದ ಬಿರುದನ್ನು ಅರ್ಪಿಸಿ ಗೌರವಿಸಿದರು. ಜೂಲೈ ೩ ನೆಯ ತಾ|| ನ ದಿನ, ಆತನಿಗೆ ವಿಕ್ಟೋರಿಯಾ ಮಹಾರಾಣಿಯವರ ದರ್ಶನ ಭಾಗ್ಯವು ಲಭಿಸಿತು ಆಕೆಯು ತನ್ನ ವಿಂಡ್ಸರ್ ಕ್ಯಾಸಲ್ ಎಂಬ ಭವ್ಯವಾದ ಅರಮನೆಯ ಸಭಾಂಗಣದಲ್ಲಿ ಯುಕ್ತ ಸಾಮಾಜಿಕರೊಂದಿಗೆ ಆತನಿಗೆ ದರ್ಶನವಿತ್ತು, ಆತನ ಶಕ್ತಿ ಸಾಹಸ ಧೈರ್ಯ ಚಾತುರ್ಯಗಳು, ರಾಜಕಾರ್ಯದಲ್ಲಿ ಏಕನಿಷ್ಠೆ ವಿನಯಸಂಪತ್ತು ಮೊಂತಾದ ಗುಣಗಳ

ನ್ನು ಮೆಚ್ಚಿಕೊಂಡಳು ತರುವಾಯ ಇಂಗ್ಲೆಂಡ್ ಮತ್ತು ಇತರ ಭಾಗಗಳಲ್ಲಿ ಆತನಿಗೆ ಒಪ್ಪಿಸಿದ ಸನ್ಮಾನ ಪತ್ರಿಕೆಗಳಿಗೂ ಪತ್ರಿಕೆಗಳಲ್ಲಿ ಮಾಡಿದ ವರ್ಣನೆಗಳಿಗೂ ಮಿತಿಯಿಲ್ಲ ಆತನು ಮುಂದೆ ಸ್ಕಾಟ್ಲೆಂಡ್ ದೇಶದ ಎಡಿಂಬರ್ಗ್ ಮೊದಲಾದ ಕೆಲವು ಪ್ರಸಿದ್ಧ ಸ್ಥಳಗಳನ್ನು ಸಂದರ್ಶಿಸಿದನು ಹೀಗೆ ನೋಡಬೇಕಾದ ಮುಖ್ಯ ಸ್ಥಳಗಳನ್ನೆಲ್ಲ ನೋಡಿ, ಆತನು ಪರಿವಾರದೊಂದಿಗೆ ಜೂಲೈ ೨೮ ರಲ್ಲಿ ಇಂಗ್ಲೆಂಡು ದೇಶವನ್ನು ಬಿಟ್ಟು ಸ್ವದೇಶದ ಕಡೆಗೆ ಪುನಃ ಪ್ರಯಾಣವಾಗಿ ಹೊರಟನು ಇಂಗ್ಲೆಂಡಿನಲ್ಲಿ ಆತನಿಗಾದ ಗೌರವ ಸಮಾರಂಭಗಳನ್ನು ಕುರಿತು ಒಂದಾನೊಂದು ಪತ್ರಿಕೆಯು "ಆತನು ಇಂಗ್ಲೆಂಡು ದೇಶದಲ್ಲಿ ಮಹಾ ಸುಪ್ರಸಿದ್ಧನೆನಿಸಿಕೊಂಡ ಘನವಂತರ ವಿಶೇಷ ರೀತಿಯ ಬಹುಮಾನಕ್ಕೆ ಪಾತ್ರನಾಗಿ ಅನೇಕರಿಂದ ಸನ್ಮಾನಿಸಲ್ಪಟ್ಟರೂ ಆತನ ತಲೆಯು ಯಾವ ಬಗೆಯಿಂದಲೂ ತಿರುಗಿ ಹೋದಂತೆ ತೋರಲಿಲ್ಲ ಆತನೂ ಆತನ ಪರಿವಾರವೂ ತಂಗಿದ್ದ ಮನೆಯು ಕೂಸನುಮನೆಗೂ ರಾಜಭವನದಂತೆಯೇ ಭವ್ಯರೀತಿಯಿಂದ ಪ್ರಕಾಶಿಸುತ್ತಿದ್ದಿತಲ್ಲದೆ, ಲೇಶಮಾತ್ರವಾದರೂ ಅಸಹ್ಯವಾಗಲೀ, ದುರ್ನೋಟವಾಗಲೀ ಅಲ್ಲಿ ತೋರಿಬರಲಿಲ್ಲ ಇಂಗ್ಲೆಂಡು ದೇಶದಲ್ಲೇ ಹುಟ್ಟಿ ಬೆಳೆದ ಉತ್ತಮನಾದ ಜಾತೀಯ ಆಂಗ್ಲೇಯನಂತೆ ಅಷ್ಟು ಮಟ್ಟಿನ ಸುಧಾರ ಣಾಪರಿಪಾಕವನ್ನು ಹೊಂದಿದ ಆ ನಡತೆಯನ್ನು ಆವರೆಗೆ ಎಂದೂ ಇಂಗ್ಲೆಂಡು ದೇಶವನ್ನೇ ಕಂಡರಿಯದ ಸರ್ ಸಾಲಾರ್ ಜಂಗ್ ಮಹಾಶಯನು ಹೇಗೆ ಸಂಪಾದಿಸಿದನೆಂಬುದು ಮಾತ್ರ ಎಲ್ಲರಿಗೂ ಅತ್ಯಂತ ಕೌತುಕವನ್ನುಂಟುಮಾಡುತ್ತದೆ" ಎಂದು ಬರೆಯಿತು.

ಇಂಗ್ಲೆಂಡಿನಿಂದ ಹೊರಟ ಮಂತ್ರಿಯೂ ಪರಿವಾರದವರೂ ಪ್ಯಾರಿಸ್, ಟೂರಿನ್, ಮಿಲಾನ್ ಎಂಬ ಪಟ್ಟಣಗಳನ್ನು ಸಂದರ್ಶಿಸಿ, ಬ್ರಿಂಡಿಸಿ ರೇವಿನಿಂದ ಹೊರಟು, ತಾವು ಹಿಂದೂಸ್ಥಾನದಿಂದ ಹೊರಟ ಮೂರು ತಿಂಗಳ ತರುವಾಯ ಪುನಃ ಬೊಂಬಾಯಿಗಾಗಿ ಪ್ರಯಾಣಮಾಡಿದರು, ಮಾರ್ಗಮಧ್ಯದಲ್ಲಿ ಅವರ ಹಡಗು ಒಂದುದಿನ ಬ್ರಿಟಿಷ್ ಸೈನ್ಯದವರನ್ನು ತರುತ್ತಿದ್ದ ಮತ್ತೊಂದು ಜಹಜನ್ನು ದಾಟಿಹೋಗಬೇಕಾಗಿತ್ತು ಆ ಜಹಜಿನಲ್ಲಿದ್ದ ಇಂಗ್ಲಿಷ್ ಸೋಲ್ಜರಿಗೆ, ಪಕ್ಕದಲ್ಲಿ ಪ್ರಯಾಣಮಾಡುತ್ತಿದ್ದ ಹಡಗಿನಲ್ಲಿ ಸರ್ ಸಾಲಾರ್ ಜಂಗ್ ಮಂತ್ರಿಯು ಪ್ರಯಾಣಮಾಡುತ್ತಿದ್ದಾನೆಂಬ ವಾರ್ತೆಯು ತಿಳಿಯಿತು! ಆ

ಷ್ಟೆ! ಒಡನೆಯೇ ಅವರೆಲ್ಲರೂ "ಮಹಾಮಂತ್ರಿ ಸರ್‌ಸಾಲಾರ್‌ಜಂಗ್ ಬಹದ್ದೂರರಿಗೆ ಜಯವಾಗಲಿ, ಜಯವಾಗಲಿ, ಜಯವಾಗಲಿ" ಎಂದು ಕಿವಿಗಳು ಕಿವಿಡಾಗುವಂತೆ ಕೋಲಾಹಲಧ್ವನಿ-ಕರತಾಡನಗಳಿಂದ ಜಯಘೋಷಮಾಡಿ, ಬ್ರಿಟಿಷ್ ಜನಗಳಿಗೆ ಆ ಮಹಾಮಂತ್ರಿಯು ದರ್ಶನವಲ್ಲ—ಕೇವಲ ನಾಮಮಾತ್ರದಲ್ಲಿಯೇ ಇದ್ದ ಗೌರವಭಾವವನ್ನು ವ್ಯಕ್ತಗೊಳಿಸಿದರು.

ಅವರ ಪ್ರಯಾಣವು ಸುರಕ್ಷಿತವಾಗಿ ಮುಂದೆ ಸಾಗಿತು. ಬೊಂಬಾಯಿ ಬಂದರಿನಲ್ಲಿ ಮಂತ್ರಿಯೂ ಪರಿವಾರದವರೂ, ಸನ್ಮಾನಿತರಾಗಿ ಇಳಿದರು. ಶ್ರೀ ಚಕ್ರವರ್ತಿನಿಯ ದರ್ಶನ ಸಂಭಾಷಣೆಗಳಿಂದಲೂ, ಬ್ರಿಟಿಷ್ ಪ್ರಜೆಗಳ ಅತ್ಯಪೂರ್ವ ಆದರಾತಿಥ್ಯಗಳಿಂದಲೂ ಸನ್ಮಾನಿತರಾದ ತಮ್ಮ ಮಂತ್ರಿ ಮತ್ತು ಪರಿವಾರದವರನ್ನು ಹೈದರಾಬಾದಿನ ಪ್ರಜೆಗಳೂ-ಪ್ರಜಾಪ್ರಮುಖರೂ, ಅಧಿಕಾರಿಗಳೂ ಅತ್ಯುತ್ಸಾಹದಿಂದ ಇದಿರುಗೊಂಡು ನಗರ ಪ್ರವೇಶಮಾಡಿಸಿದರು.



## ಅಧ್ಯಾಯ ೮ "ರಾಜಕಾರ್ಯಸುಧಾರಣೆಗಳು"

ಸರ್‌ಸಾಲಾರ್‌ಜಂಗ್ ಬಹದ್ದೂರನು ಇಂಗ್ಲೆಂಡು ದೇಶಕ್ಕೆ ಪ್ರಯಾಣಮಾಡುವುದರಲ್ಲಿ ಆತನಿಗಿದ್ದ ಮುಖ್ಯೋದ್ದೇಶವನ್ನು ಪ್ರಾರಂಭದಲ್ಲೇ ಹೇಳಿದ್ದೇವಲ್ಲವೆ! ಆದರೆ ಇಂಗ್ಲೀಷ್ ಜನರು ಬಹು ಬುದ್ಧಿಶಾಲಿಗಳು; ಮನುಷ್ಯಸ್ವಭಾವವನ್ನು ತಿಳಿದು ಸಮಯೋಚಿತ ಕಾರ್ಯಚಾತುರ್ಯಗಳಿಂದ ತಮ್ಮ ಕಾರ್ಯಸಾಧನೆ ಮಾಡಿಕೊಳ್ಳುವುದರಲ್ಲಿ ನಿಸ್ಸೀಮರು. ಆ ಮಹಾಮಂತ್ರಿಯು ತಮ್ಮ ರಾಜ್ಯದಲ್ಲಿದ್ದಷ್ಟು ದಿನವೂ, ರಾಜಾಧಿರಾಜರಿಗೂ ಜರುಗದಂತಹ ಬಹುವಿಧ ಮರ್ಯಾದೆಗಳಿಂದಲೇ,-ಬಿರುದುಪಚಾರದ ಸನ್ಮಾನ ಪತ್ರಿಕ-ಸಮಾರಾಧನೆಗಳಿಂದಲೇ, ಊಟಉಪಚಾರಗಳಿಂದಲೇ ಆತನಿಗೆ ಇತರ ಯಾವ ಯೋಚನೆಗೂ ಮಾತಿಗೂ ವಿಚಾರಕ್ಕೂ ಅವಕಾಶವುಂಟಾಗದಂತೆ ಮಾಡಿಬಿಟ್ಟರು. ಸಾಲದುದಕ್ಕೆ ಆತನು ಶ್ರೀ ಚಕ್ರವರ್ತಿನಿಯನ್ನು ದರ್ಶಿಸಲು ಸಮಯ ಸಿಕ್ಕುದು ಕೇವಲ ಒಂದು ಸಾರಿ ಮಾತ್ರ! ಹೀಗಾಗಿ ಆತನು ಯಾವ ಉದ್ದೇಶವನ್ನು ಸಾಧಿಸಬಹುದೆಂದು ವಿಲಾಯಿತಿಗೆ ಹೋದನೋ ಅದು ಅಲ್ಲಿ ನಡೆಯಲು ಅವಕಾಶ

ವಾಗಲಿಲ್ಲ. ಆದರೂ ಆತನು ನಿರಾಶನಾಗಲಿಲ್ಲ. ಹಿಂದೂಸ್ಥಾನಕ್ಕೆ ಬಂದ ವೇಳೆ ಪುನಃ ಆ ಪ್ರಸ್ತಾಪವನ್ನೆತ್ತದಿರಲಿಲ್ಲ. ಆದರೇನು! ಅದರಿಂದ ಆತನಿಗೆ ಯಾವ ಪ್ರಯೋಜನವೂ ಉಂಟಾಗಲಿಲ್ಲ. ಒಂದು ಸಾರಿ, "ನಾವು ಬೀರಾರನ್ನು ಸ್ವಾಧೀನ ಹೊಂದಬೇಕು, ಅಥವಾ ಅದನ್ನು ನೀವು ಕೊಡದಿರುವ ಕಾರಣದ ನ್ಯಾಯವೇನೆಂಬುದು ಮನವರಿಕೆಯಾಗಬೇಕು-ಅಥವಾ ಈ ಪ್ರಯತ್ನದಲ್ಲೇ ನಾನು ಪ್ರಾಣತ್ಯಾಗ ಮಾಡಬೇಕು" ಎಂದುಬರೆದನು ಅದರಿಂದಲೂ, ಕೆಲ ಮಂದಿ ವೈಸರಾಯರೊಂದಿಗೆ ವೈಮನಸ್ಯ ವುಂಟಾಯಿತಲ್ಲದೆ ಮತ್ತಾವ ಪ್ರತಿಫಲವೂ ಲಭ್ಯವಾಗಲಿಲ್ಲ "ನಿಸಾಮರು ಇನ್ನೂ ಬಾಲ್ಯವಯಸ್ಕರಾಗಿರುವುದರಿಂದ ಅವರು ಪ್ರಬುದ್ಧತೆಯನ್ನು ಹೊಂದುವವರೆಗೆ ಈ ವಿಷಯದಲ್ಲಿ ಪ್ರಸ್ತಾಪವು ಅನಾವಶ್ಯಕವೆಂದೂ, ಅಲ್ಲದೆ, ಮುಂದೆ ನಿಸಾಂ ಸರ್ಕಾರದವರು ಗೌರವ ರೀತಿಯಲ್ಲಿ ಕಾಗದ ಪತ್ರವನ್ನು ನಡೆಯಿಸುವರೆಂದು ನಂಬಲಾಗಿದೆ ಯೆಂದೂ" ಬರೆದರು. ಹೀಗಾಗಿ ಸಾಲಾರ್ ಜಂಗನ ಜೀವಿತ ಕಾಲದಲ್ಲಂತೂ ಅದನ್ನು ಸಾಧಿಸಲಾಗಲಿಲ್ಲ—ಇನ್ನೂ ಆಗಿಲ್ಲ. ಆದರೆ ೧೯೦೨ ನೆಯ ವರ್ಷದಲ್ಲಿ ಮಾತ್ರ ಲಾರ್ಡ್ ಕರ್ಜನ್ ವೈಸರಾಯಿಯು ಹೊಸ ಕೌಲೊಂದನ್ನು ಹುಟ್ಟಿಸಿ, ಆ ದೇಶದ ಸ್ವಾಧೀನತೆಯು ತಮ್ಮಲ್ಲಿದ್ದುದಕ್ಕಾಗಿ ನಿಸಾಂ ಸರ್ಕಾರದವರಿಗೆ ವರ್ಷವೊಂದಕ್ಕೆ ೨೫ ಲಕ್ಷ ರೂಪಾಯಿಗಳನ್ನು ಕೊಡತಕ್ಕುದೆಂದು ಏರ್ಪಡಿಸಿದನು —

ಈ ಮಂತ್ರಿಯ ಕಾಲದಲ್ಲಿ, ಶುದ್ಧ ಅವ್ಯವಸ್ಥೆಯ ಸ್ಥಿತಿಯಲ್ಲಿದ್ದ ಹೈದರಾಬಾದು ಸಂಸ್ಥಾನದ ಆಡಳಿತದಲ್ಲಿ ಎಷ್ಟು ಬಗೆಯ-ಯಾವಾವ ಬಗೆಯ ವ್ಯವಸ್ಥೆಗಳು ಉಂಟಾದುವೆಂಬುದನ್ನು ಈವರೆಗೆ ಸ್ವಲ್ಪ ಮಟ್ಟಿಗೆ ಹೇಳಿತಲ್ಲವೆ! ಅಷ್ಟುಮಾತ್ರವಲ್ಲ ಇನ್ನೂ ಕೆಲವು ಇಲಾಖೆಗಳು ಏರ್ಪಡಿಸಲ್ಪಟ್ಟುವು. ಕ್ರಿಮಿನಲ್ ಮೊಕದ್ದಮೆ ವಿಚಾರಗಳಿಗಾಗಿ ಜ್ಯುಡಿಷಿಯಲ್ ಡಿಪಾರ್ಟ್ಮೆಂಟ್ ಏರ್ಪಾಟಾಯಿತು ಹೈದರಾಬಾದಿನಲ್ಲಿ 'ಕೋರ್ಟು' ಎಂಬ ನ್ಯಾಯಾಸ್ಥಾನವೊಂದು ಸ್ಥಾಪಿತವಾಯಿತು. ಅದಕ್ಕೆ ಚೀಫ್ ಜಡ್ಜ್ ಎಂಬ ಮುಖ್ಯ ನ್ಯಾಯಾಧೀಶನು ನಿಯಮಿತನಾದನು ಸಂಸ್ಥಾನದ ಹಿಂದೂ ಪ್ರಜೆಗಳ ನ್ಯಾಯ ತೀರ್ವಿಕೆಗಾಗಿ ಒಬ್ಬ ಹಿಂದೂ ದೊಡ್ಡ ಮನುಷ್ಯರನ್ನೇ ನಿಯಮಿಸಿದನು. ಅಲ್ಲದೆ ಇಂಜನಿಯರಿಂಗ್ ಇಲಾಖೆ, ಮೆಡಿಕಲ್ (ವೈದ್ಯ) ಇಲಾಖೆ. ಪೋಲೀಸ್ (ರಕ್ಷಕಸೈನ್ಯ) ಇಲಾಖೆ, ಎಜ್ಯುಕೇಷನ್ (ವಿದ್ಯಾಭ್ಯಾಸ) ಇಲಾಖೆ ಮುಂತಾ

ದ ಪ್ರಜೋಪಕಾರವಾದ ಇತರ ಅನೇಕ ಅನುಕೂಲತೆಗಳು ಕಲ್ಪಿಸಲ್ಪಟ್ಟುವು, ಆ ಮಹಾಮಂತ್ರಿಯು, ಸಂಸ್ಥಾನದ ಮುಖ್ಯಾಧಿಕಾರಿಗಳೂ, ಬೇರೆ ಬೇರೆ ಇಲಾಖಾ ಸಚಿವರೂ ಕಾರ್ಯದರ್ಶಿಗಳೂ ಹೇಗೆ ಹೇಗೆ ಯಾವ ಯಾವ ಕೇಸಗಳನ್ನು ಮಾಡಬೇಕು ಎಂಬುದನ್ನೂ ಗೊತ್ತುಮಾಡಿಟ್ಟನು ಇಂಗ್ಲಿಷ್ ವಿದ್ಯಾಭ್ಯಾಸಕ್ಕಾಗಿ ಅನೇಕಾನೇಕ ಪಾಠಶಾಲೆಗಳು ಸ್ಥಾಪಿತವಾದುವು ಅಲ್ಲದೆ ಪಾರ್ಶಿ ಅರಬ್ಬಿ ಭಾಷೆಗಳ ಪ್ರೌಢಪಾಠಗಳನ್ನೂ ಕಲಿಸುತ್ತಿದ್ದರು ೧೮೭೦ ರಲ್ಲಿ 'ನಿಜಾಮರ ಕಾಲೇಜು' ಎಂಬ ಕಲಾಶಾಲೆಯು ಸ್ಥಾಪಿತವಾಯಿತು. ಅನೇಕ ಕೆರೆಗಳೂ ರಸ್ತೆಗಳೂ ಹೊಸದಾಗಿ ಏರ್ಪಟ್ಟುವು ಹಳೆಯವಾಗಿದ್ದುವು ಸರಿಮಾಡಲ್ಪಟ್ಟುವು ಪ್ರಯಾಣವು ಸುಕರವಾಯಿತು. ಸಾಲುಮರ ತೋಪುಗಳು ಹಾಕಲ್ಪಟ್ಟುವು ಅನೇಕ ಸರ್ಕಾರಿ ಕಟ್ಟಡಗಳು ಕಟ್ಟಲ್ಪಟ್ಟುವು. ೧೮೭೪ ನೆಯ ಸಂವತ್ಸರದ ವೇಳೆಗೆ 'ಹೈದರಾಬಾದು-ವಾಡಿರೈಲ್ವೆ'ಯು ಸ್ಥಾಪನೆಯಾಯಿತು. ೧೮೭೨ ನೆಯ ಸಂ|| ದಲ್ಲೀ 'ಪೋಸ್ಟ್' ಇಲಾಖೆಯು ಏರ್ಪಟ್ಟಿತು ಸಾಲಾರ್‌ಜಂಗ್ ಮಂತ್ರಿಯು ಸಂಸ್ಥಾನದಲ್ಲಿ ವಿವಿಧ ರೀತಿಯಲ್ಲಿದ್ದ ನಾಣ್ಯಗಳನ್ನೆಲ್ಲಾ ಏಕರೂಪಕ್ಕೆ ತಂದು ಟಂಕಸಾಲೆಯನ್ನೂ ಸ್ಥಾಪಿಸಿದನು ಅಬ್ಕಾರಿ ಇಲಾಖೆ, ಸುಂಕದ ಇಲಾಖೆ, ಗ್ರಾಮಪಾಕೀಜು (ಮ್ಯುನಿಸಿಪಾಲಿಟಿ) ಇಲಾಖೆ ಮುಂತಾದುವೂ ಸ್ಥಾಪನೆಯಾದುವು. ಸರ್‌ಸಾಲಾರ್‌ಜಂಗನು ಅಧಿಕಾರಕ್ಕೆ ಬರುವ ಕಾಲದಲ್ಲಿ ವರ್ಷವೊಂದಕ್ಕೆ ೮೦ ಲಕ್ಷ ರೂಪಾಯಿಗಳನ್ನು ನುಂಗುತ್ತಿದ್ದ ಸೈನ್ಯದ ಇಲಾಖೆಯ ಖರ್ಚು ಆತನ ಅಧಿಕಾರ ನಿವೃತ್ತಿ ಕಾಲಕ್ಕೆ ೨೦ ಲಕ್ಷಕ್ಕೆ ಇಳಿಸಲ್ಪಟ್ಟಿತು ಮಿಕ್ಕ ೬೦ ಲಕ್ಷ ದ್ರವ್ಯವು ರಾಜ್ಯದ-ಪ್ರಜೆಗಳಿಗೆಗ ಅನೇಕ ಬಗೆಯ ಸುಖಾಭಿವೃದ್ಧಿ ಕಾರ್ಯಗಳಿಗೆ ವಿನಿಯೋಗ ಮಾಡಲ್ಪಡುತ್ತಿತ್ತು

ಆ ಮಂತ್ರಿವರ್ಯನು, ಅಧಿಕಾರದ ಒಣದರ್ಪವನ್ನು ಇಟ್ಟುಕೊಂಡಿರಲಿಲ್ಲ ಬಡವರಿಂದ ದೊಡ್ಡವರವರೆಗೂ ಯಾರಾದರೂ ಆತನನ್ನು ದರ್ಶನ ಮಾಡಿ ತಮ್ಮ ಕಷ್ಟಕಾರ್ಪಣ್ಯಗಳನ್ನು ಹೇಳಿಕೊಳ್ಳಲು ತಡೆಬಡೆಯಿರಲಿಲ್ಲ. ಪ್ರಾತಃಕಾಲ ಆರು ಗಂಟೆಗೆ ಎದ್ದರೆ ರಾತ್ರೆ ೧೦||-೧೧ ಗಂಟೆಗಳವರೆಗೂ ಕ್ಷಣಮಾತ್ರವೂ ವ್ಯವಧಾನವಿಲ್ಲದೆ, ಆ ದೊಡ್ಡ ಸಂಸ್ಥಾನದ ಆಯಾದಿವಸದ ಕೆಲಸಗಳನ್ನು ಆಯಾದಿನವೇ ತೀರಿಸುತ್ತಾ, ಕಾಲವನ್ನು ಸ್ವಲ್ಪವೂ ವ್ಯರ್ಥಗೊಳಿ

ಸದೆ, ಅಷ್ಟು ಕಾರ್ಯ ನಿರತನಾಗಿದ್ದರೂ ಶ್ರೀಮದ್ಗಾಂಭೀರ್ಯದಿಂದ 'ಅವರ ವರನ್ನು ನೋಡಲು ಹೊತ್ತಿಲ್ಲ' ಎಂದೆನ್ನದೆ ಸರ್ವಸುಲಭನಾಗಿ ರಾಜಪ್ರಜೆಗಳಿಬ್ಬರಿಗೂ ಅನುಕೂಲನಾಗಿ ೩೦ ವರ್ಷಕಾಲ ಅಧಿಕಾರ ಮಾಡಿದನು. ಆತನ ಶಕ್ತಿ ಸಾಮರ್ಥ್ಯಗಳನ್ನು ಮೆಚ್ಚಿಕೊಂಡು ಬ್ರಿಟಿಷ್ ಇಂಡಿಯಾ ಸರ್ಕಾರದವರು ೧೮೭೧ ನೆಯ ಸಂ||ದಲ್ಲಿ 'ಗ್ರ್ಯಾಂಡ್ ಕಮ್ಯಾಂಡರ್ ಆಫ್ ದಿ ಸ್ಟಾರ್ ಆಫ್ ಇಂಡಿಯಾ' (ಜಿ ಸಿ ಎಸ್ ಐ) ಎಂಬ ಮತ್ತೂ ಘನತರವಾದ ಬಿರುದನ್ನಿತ್ತು ಆತನನ್ನು ಗೌರವಿಸಿದರು. ೧೮೭೭ ರಲ್ಲಿ ದಹಲಿಯಲ್ಲಿ ನಡೆದ ವೈಸರಾಯಿಯ ರಾಜಕೀಯ ಸಭೆಗೆ ಆತನನ್ನು ಆಹ್ವಾನಿಸಿ, ಕೇವಲ ರಾಜರಿಗೆ ಮಾತ್ರವೇ ಲಭ್ಯವಿರುವ, ೧೭ ಗುಂಡುಗಳನ್ನು ಆತನ ಗೌರವಾರ್ಥವಾಗಿ ಹಾರಿಸಿ ಆತನನ್ನು ಗೌರವಿಸಿದರು ೧೮೭೯ ನೆಯ ಸಂ||ದಲ್ಲಿ ಸಂಸ್ಥಾನಾಧಿಪತಿ ಅಫಜಲ್ ಉದ್ದೌಲನು ಕಾಲಾಧೀನನಾಗಲು ಆತನೇ ಪೂರ್ತಿಯಾಗಿ ಕೊನೆಯವರೆಗೂ ಸಂಸ್ಥಾನದ 'ರೀಜಂಟ್'' ಆಗಿದ್ದನು —

೧೮೮೦ ರಲ್ಲಿ ಆತನು ವೈಸರಾಯಿಯ ದರ್ಶನಕ್ಕಾಗಿ ಸಿಂಲಾ ನಗರಕ್ಕೆ ಹೋಗಿರಲು ಅಲ್ಲಿ ಆತನಿದ್ದಷ್ಟು ದಿನವೂ ವೈಸರಾಯಿಯ ಮಂತ್ರಿ ಮಂಡಲದವರೂ ಆತನೊಂದಿಗೆ ಮಿಳಿತರಾಗಿ ಆತನ ಘನತೆ ಗಾಂಭೀರ್ಯತೆ, ಸೂಕ್ಷ್ಮಮತಿ, ರಾಜನೀತಿ ನೈಪುಣ್ಯ, ಸ್ನೇಹಪರತೆ ಮುಂತಾದುವುಗಳಿಂದ ಮುಗ್ಧರಾದರು ಆತನು ಈಸಾರಿ ಚಿಕ್ಕ ನಿಸ್ಸಾಮನನ್ನು ಯೂರೋಪುದೇಶಕ್ಕೆ ಕರೆದುಕೊಂಡು ಹೋಗಲು ವೈಸರಾಯಿಯ ಆಜ್ಞೆಯನ್ನು ಪಡೆದನು ೧೮೮೩ ನೆಯ ಸಂ||ದಲ್ಲಿ ನಿಸ್ಸಾಮನೊಂದಿಗೆ ರಾಯಚೂರು ಗುಲ್ಬರ್ಗಾ, ಔರಂಗಬಾದ್ ಮುಂತಾದ ನಗರಗಳಲ್ಲಿ ಸಂಚರಿಸಿ ಬಂದು, ಮುಂದೆ ನಿಸ್ಸಾಮನೊಂದಿಗೆ ಯೂರೋಪುದೇಶದ ಪ್ರಯಾಣಕ್ಕೆ ತಕ್ಕ ಸನ್ನಾಹಗಳನ್ನು ಮಾಡಿಕೊಳ್ಳುತ್ತಿರುವಷ್ಟರಲ್ಲೇ ೧೮೮೩ ನೆಯ ಸಂ||ದ ಫೆಬ್ರವರಿ ತಿಂಗಳಲ್ಲಿ ಅಕಸ್ಮಾತ್ತಾಗಿ ಕಾಲರಾ ವ್ಯಾಧಿಗೆ ವಶನಾಗಿ ೧೮ ನೆಯ ತಾರೀಖಿನ ದಿನ ಹೈದರಾಬಾದಿನ ಸೂರ್ಯನು ಅಸ್ತಮಿಸಿದನೋ ಎಂಬಂತೆ ಕಾಲಾಧೀನನಾದನು

ರಾಜಕಾರ್ಯ ಸುಧಾರಣಾ ಸಾಮರ್ಥ್ಯ-ಕರ್ತೃತ್ವ ಶಕ್ತಿಗಳಲ್ಲಿ ಮಹಾಪ್ರಬಲರೆಂದೆನಿಸಿಕೊಂಡಿರುವ ಯಾವ ಆಂಗ್ಲೇಯ ಅಧಿಕಾರಿಗೂ ಕಡಮೆ ಎನಿಸಿಕೊಳ್ಳದ ಕೀರ್ತಿ ಪ್ರತಿಷ್ಠೆಗಳನ್ನು ಗಳಿಸಿದ ಆ ಮಂತ್ರಿ ಪುಂಗವನ ಮರಣ

ಕ್ಕಾಗಿ, ಚಕ್ರವರ್ತಿನಿಯೂ, ಯುವರಾಜನೂ, ವೈಸರಾಯಿಯೂ, ಗೌರ್ನರರೂ, ಇತರ ಅನೇಕ ಮಂದಿ ಶ್ರೇಷ್ಠ ಅಧಿಕಾರ ವರ್ಗದವರೂ ಪರಿತಾಪವನ್ನು ಸೂಚಿಸಿ ವರ್ತಮಾನಗಳನ್ನು ಕಳುಹಿಸಿದರು. ಭಾರತದೇಶದ ಒಬ್ಬ ಸುಪ್ರಸಿದ್ಧ ಮಹಾಶಕ್ತ, ರಾಜಕಾರ್ಯ ಚತುರನು ಲುಪ್ತನಾದನೆಂದು ದೇಶವೇ ಮರುಗಿತು



# ಉಪಸಂಹಾರ



ಸರ್‌ಸಾಲಾರ್‌ಜಂಗನಿಗೆ ಇಬ್ಬರು ಪುತ್ರರೂ ಇಬ್ಬರು ಪುತ್ರಿಯರೂ ಇದ್ದರು ಆ ಪುತ್ರರಲ್ಲಿ, ಹಿರಿಯನಾದ ಮೀರ್ ಲಿಯಾಕ್ ಅಲ್ಲೀಖಾನ್ ಎಂಬಾತನು ೨ ನೇ ಸಾಲಾರ್‌ಜಂಗ್ ಎಂಬ ಗೌರವನಾಮದಿಂದ ೧೮೮೪ ರಿಂದ ೮೭ ರವರೆಗೂ ತನ್ನ ತಂದೆಯು ಅಲಂಕರಿಸಿದ್ದ ಮಂತ್ರಿಪದವನ್ನು ವಹಿಸಿದನು ಆತನ ಮಗನು ೩ ನೇ ಸಾಲಾರ್‌ಜಂಗ್ ಎಂಬ ಬಿರುದಿನಿಂದ ೧೯೧೩ ನೆಯ ಸಂವತ್ಸರದವರೆಗೂ ಮಂತ್ರಿಯಾಗಿದ್ದು ಆ ಸಂಸ್ಥಾನವನ್ನು ಸೇವಿಸಿದನು ಹೀಗೆ ಆತನ ವಂಶವೇ ಹೈದರಾಬಾದು ಸಂಸ್ಥಾನದ ಸೇವೆಯಲ್ಲಿ ತಮ್ಮ ತನುಮನ ಧನಗಳನ್ನು ವ್ಯಯಿಸಿ ಧನ್ಯರಾದರು

ಯಾವ ಮಹನೀಯನು ಕೇವಲ ಅವ್ಯವಸ್ಥೆಯ ಸ್ಥಿತಿಯಲ್ಲಿ ಮುಳುಗಿದ್ದ ಆ ದೇಶದ ಪ್ರಜೆಗಳು ತಮ್ಮ ಧನಮಾನ ಪ್ರಾಣಗಳನ್ನು ಸುರಕ್ಷಿತವಾಗಿಟ್ಟುಕೊಂಡು ವಾಸಿಸಲು ಸಂಸ್ಥಾನವನ್ನು ಸರ್ವ ಬಗೆಗಳಿಂದಲೂ ಸಿದ್ಧಗೊಳಿಸಿದನೋ, ದೇಶಾಭಿಮಾನ ಪೂರಿತನಾಗಿ, ಕ್ಷಣಕಾಲವೂ ವಿರಾಮ ಹೊಂದದೆ ಅಹರ್ನಿಶಿ ಶ್ರಮಿಸಿ ತನ್ನ ಕರ್ತವ್ಯ ಧರ್ಮವನ್ನು ನೆರವೇರಿಸಿದನೋ ಅಂತಹ ನಿರಂತರ ಕಾರ್ಯತತ್ಪರತೆ, ನಿರಲಸಿಕೆ, ನಿಸ್ಪೃಹತೆ, ಧೈರ್ಯ ಸಾಹಸಾದಿಗಳು ನಮ್ಮವರಿಗೆ ಆದರ್ಶವಾಗಿದ್ದು ಅವರಲ್ಲೂ ದೇಶಕ್ಕಾಗಿ, ಪ್ರಜಾ ಸೌಖ್ಯಕ್ಕಾಗಿ ಶ್ರಮಿಸುವಂತಹ ಶಕ್ತಿ ಸಾಮರ್ಥ್ಯ, ಕಾರ್ಯೋತ್ಸಾಹಗಳು ನೆಲಗೊಳ್ಳುವಂತೆ ಶ್ರೀವರನು ಅನುಗ್ರಹಿಸಲಿ

ತಥಾಸ್ತು.



→ ಶ್ರೀರಾಮಸಹಾಯಂ ←

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸಪುಸ್ತಕಾವಳಿ)

**ಮುನ್ನುಡಿ:—**

ಭಾರತದೇಶದಲ್ಲಿ ಧರ್ಮೋದ್ಧಾರ ಕಾರ್ಯಕ್ಕಾಗಿ ಜನ್ಮವನ್ನು ತಳೆದ ಮಹಾನ್ ವ್ಯಕ್ತಿಗಳಲ್ಲಿ ಸುಪ್ರಸಿದ್ಧರಾದವರು ಮೂರು ಮಂದಿ ಆಚಾರ್ಯರು. ಈ ಮೂವರಲ್ಲಿ ಅದ್ವೈತಮತಸ್ಥಾಪನಾಚಾರ್ಯರಾದ ಶ್ರೀಶಂಕರಾಚಾರ್ಯರ ಪುಣ್ಯಚರಿತ್ರೆಯನ್ನು ಗ್ರಂಥಮಾಲಾ ವಾಚಕಮಹಾಶಯರು ಈವರೆಗೇ ಅವಲೋಕಿಸಿದ್ದಾಯಿತಲ್ಲವೆ? ಅವರ ತರುವಾಯ ಜನಮನದ ಲಕ್ಷ್ಯವನ್ನನುಸರಿಸಿ, ಭಗವದಿಷ್ಟಾನುಸಾರವಾಗಿಯೋ ಎಂಬಂತೆ ಧರ್ಮಸಂಸ್ಥಾಪನೆಯ ಮಹತ್ಕಾರ್ಯ ಕ್ಷೇತ್ರದಲ್ಲಿ ವ್ಯವಸಾಯ ಮಾಡಿದವರು ನಮ್ಮ ಪ್ರಕೃತ ಚರಿತ್ರನಾಯಕರಾದ ಶ್ರೀರಾಮಾನುಜಾಚಾರ್ಯರು.

ಮಹಾನುಭಾವರಾದ ಶ್ರೀಮದಾಚಾರ್ಯರು ಪೂತಚರಿತ್ರರು, ಭಕ್ತವರ್ಯರು, ವಿರಕ್ತಶ್ರೇಷ್ಠರು ಭವಸಮುದ್ರದ ಉಬ್ಬರ ವಿಳಿತಗಳಿಗೆ ಸಿಕ್ಕು ನರಳುತ್ತಿದ್ದ ಅಸಂಖ್ಯಮಾನವರಿಗೆ ಶ್ರೀಭಗವಚ್ಛರಣಾರವಿಂದವೆಂಬ ನಾವೆಯ ಸುರಕ್ಷಿತಾಶ್ರಯವನ್ನು ತೋರಿಸಿಕೊಟ್ಟು ಉದ್ಧರಿಸಿದ ಪರಮೋಪಕಾರಿಗಳು ಧ್ರುವ ಪ್ರಹ್ಲಾದ ನಾರದಾದಿಗಳಿಂದ ವೈಯಕ್ತಿಕವಾಗಿ ಅನುಸರಿಸಲ್ಪಟ್ಟ ಭಗವದ್ಭಕ್ತಿ ಮಾರ್ಗವನ್ನು ಸಾರ್ವತ್ರಿಕವಾಗಿ ಉಪಯೋಗವಾಗುವಂತೆ ಸಿದ್ಧಾಂತಸ್ವರೂಪಕ್ಕೆ ತಂದು ಮಾನವಲೋಕಕ್ಕೆ ಮುಕ್ತಿಮಾರ್ಗವನ್ನು ತೋರಿಸಿಕೊಟ್ಟ ಭಕ್ತಶಿರೋಮಣಿಗಳು ವಿವಿಧ ಮತಾಭಿಪ್ರಾಯಗಳ ಗೊಂದಲದಲ್ಲಿ ಬಿದ್ದು ಅನುಸರಿಸಬೇಕಾದ ಮಾರ್ಗತಿಳಿಯದೆ ತೊಂದರೆಪಡುತ್ತಿದ್ದ ಅಜ್ಞಜನ ಸಮೂಹಕ್ಕೆ ಶ್ರೀಮಹಾವಿಷ್ಣುಮೂರ್ತಿಯ ಪಾದಭಕ್ತಿಯೇ ಸಕಲಾಪನ್ನಿವಾರಕವೆಂದೂ ಸಕಲ ಶ್ರೇಯಃಪ್ರದಾಯಕವೆಂದೂ ಸಾರಿದ ಪರಮೋದಾರಚರಿತರು ಅವ್ಯಾಜಕರುಣಾಮೂರ್ತಿಗಳಾದ ನಮ್ಮ ರಾಮಾನುಜಾಚಾರ್ಯರು

ಶ್ರೀಮದಾಚಾರ್ಯರು ಮುಕ್ತಿಪದಸಾಧಕಗಳಾದ ಭಕ್ತಿ, ಜ್ಞಾನ ವೈರಾಗ್ಯಗಳನ್ನು ಸಾಮಾನ್ಯಮಾನವರ ಅಳತೆಗೆ ಅತೀತವಾದಷ್ಟು ಪ್ರಮಾಣದಿಂದ ಗಳಿಸಿ, ಆ ಬಲದಿಂದ ಅಪ್ರಮೇಯನೂ ಅನುಪಮನೂ ಆದಿ ಮಧ್ಯಾಂತರಹಿತನೂ ಆದ ಜಗದೀಶ್ವರನ ಪರಮೈಶ್ವರ್ಯಸಿರಿಯನ್ನು ಸಹಜಭಾವದಿಂದ ತಾವು ಗ್ರಹಿಸಿ, ಅಂತಹ ಸಕಲ ಕಲ್ಯಾಣಗುಣಪರಿಪೂರ್ಣನಾದ, ಸರ್ವತಂತ್ರ ಸ್ವತಂತ್ರನಾದ ಶ್ರೀಮನ್ನಾರಾಯಣಮೂರ್ತಿಯನ್ನು ತ್ರಿಗುಣ-ತ್ರಿಕಾಲಗಳ ಅವಧಿಗೆ ಒಳಪಟವನೂ ಅಸ್ವತಂತ್ರನೂ ಕರ್ಮಬದ್ಧನೂ ಆದ ಜೀವನು ಕೇವಲ ಭಕ್ತಿಪ್ರಪತ್ತಿಗಳಿಂದಲೂ-ದಾಸಾನುದಾಸಭಾವದಿಂದಲೂ ಸೇವಿಸಿ ಮಾತ್ರ ಸಂಸಾರಪಾಶದಿಂದ ಮುಕ್ತನಾಗಬೇಕಲ್ಲದೆ ಅನ್ಯಥಾ ಮಾರ್ಗವಿಲ್ಲವೆಂದು ಬೋಧಿಸಿದರು. ಅವರ ಹೃದಯ ವೈಶಾಲ್ಯತೆಯನ್ನು ಸಂಕುಚಿತಪಡಿಸಲು ಜಾತಿಕುಲಗಳು ಅಡ್ಡನಾಗಲಿಲ್ಲ, ಅವರ ವೈರಾಗ್ಯ-ಜ್ಞಾನಾರ್ಜನಾ ತೃಷ್ಣಗಳನ್ನು ಅಡಗಿಸಲು ಕಾಮಿನೀ ಕಾಂಚನಾದಿಗಳು ಶಕ್ತವಾಗಲಿಲ್ಲ, ಪ್ರಾಪಂಚಿಕರನ್ನು ಲೌಕಿಕಕ್ಕೆ ಬಂಧಿಸುವ ಏಷಣಾತ್ರಯಗಳನ್ನು ತಲೆಯೆತ್ತದಂತೆ ತುಳಿದಾಸಿ, ಹಾಗೆ ಅವುಗಳನ್ನು ಜಯಿಸಿದ ಚಿಹ್ನೆಯಾಗಿ ತ್ರಿದಂಡ-ಧ್ವಜಪತಾಕೆಗಳನ್ನು ಹಿಡಿದು ಪರಮವೈರಾಗ್ಯಚಕ್ರವರ್ತಿಗಳೆನಿಸಿ ಮೆರೆದ ಶ್ರೀರಾಮಾನುಜಾಚಾರ್ಯರು ಮಹಾಮಹಿಮರಲ್ಲವೆ—

ಶ್ರೀರಾಮಾನುಜರು ವ್ಯಾಸಯತೀಂದ್ರರ ಬ್ರಹ್ಮಸೂತ್ರಗಳು ಅಲ್ಲದೆ ಉಪನಿಷತ್ತುಗಳು ಶ್ರೀಮದ್ಭಗವದ್ಗೀತ ಎಂಬೀ ಪ್ರಸ್ಥಾನತ್ರಯಕ್ಕೆ ವಿಶಿಷ್ಟಾದ್ವೈತ ಸಿದ್ಧಾಂತಾನುಸಾರವಾಗಿ ಭಾಷ್ಯವನ್ನು ರಚಿಸಿ ಆಚಾರ್ಯಪದವಿಯನ್ನು ಗಳಿಸಿದರು. ಭಕ್ತಿಮಾರ್ಗದ ಶ್ರೇಷ್ಠತೆಯನ್ನು ಪ್ರತಿಪಾದಿಸುವ ಅನೇಕ ಗ್ರಂಥರತ್ನಗಳನ್ನು ರಚಿಸಿ ದಾಸವರ್ಗ ಲೋಕೋಪಕಾರ ಮಾಡಿದರು. ದಯಾಪೂರ್ಣರಾದ ಅವರ ಹೃದಯೌದಾರ್ಯವನ್ನೂ ಕ್ಷಮಾಸ್ವಭಾವವನ್ನೂ ಭಗವನ್ನಿರ್ಭರತೆಯನ್ನೂ ಎಷ್ಟೆಂದು ವರ್ಣಿಸಬಹುದು! ಆ ಮಹಾನುಭಾವರ ದಿವ್ಯಚರಿತ್ರೆಯು ಅಗಾಧವಾಗಿದ್ದರೂ ಈ ಚಿಕ್ಕ ಪುಸ್ತಕದಲ್ಲಿ ಯಥಾಮತಿಯಾಗಿ ಬರೆಯಲ್ಪಟ್ಟಿದೆ. ಶ್ರೀಮದಾಚಾರ್ಯರು ಅವ್ಯಾಜದಯಾಪರರಾಗಿ, ತಾವು ಭೌತಿಕ ದೇಹದಲ್ಲಿದ್ದ ನೂರಿಪ್ಪತ್ತು ವರ್ಷ ಕಾಲವನ್ನೂ ಪಾಪಪಂಕದಲ್ಲಿ ಮುಳುಗಿರುವ ನಮಗೆ ತರಣೋಪಾಯವನ್ನು ತೋರಿಸುವುದಕ್ಕಾಗಿಯೇ ಉ

ಪಯೋಗಿಸಿ ಅನೇಕ ಸಲ ಪ್ರಾಣಾಪಾಯವು ಪ್ರಾಪ್ತವಾದರೂ ಲಕ್ಷಿಸದೆ, ಉಪಕಾರಮಾಡಿರುತ್ತಿರಲು, ನಾವು ಪರೋಪಕಾರಿಗಳಾದ ಅವರಂತೆ ಲೋಕೋಪಕಾರ ಕಾರ್ಯದಲ್ಲಿ ತೊಡಗುವುದಂತಿರಲಿ! ಅವರು ತೋರಿಸಿದ ಮಾರ್ಗದಲ್ಲಾದರೂ ನಡೆದು ಹೋಗಿ ಭಗವಂತನನ್ನು ಭಜಿಸಿ ಸೇವಿಸಿ ಪೂಜಿಸಿ ನಮಸ್ಕರಿಸಿ ಜನ್ಮಸಾರ್ಥಕ್ಯವನ್ನು ಹೊಂದಬೇಡವೆ? ನಮಗೆ ಪರಮಪೂಜ್ಯರಾದ ನಮ್ಮ ಆಚಾರ್ಯರು ನಮ್ಮ ದೇವದೇವತೆಗಳೂ ಭಾರವಾಗಿ ತೋರುವಷ್ಟು ಮಟ್ಟಿಗಾದರೆ ನಮ್ಮ ಉದ್ಧಾರಕ್ಕೆ ಮುಂದೆ ಗತಿಯೇನು? ಅಂತಾಗದಂತೆಯೂ, ನಮ್ಮ ಬಾಲಕ ಬಾಲಿಕೆಯರಿಗೆ ಭಾರತೀಯ ಪೂರ್ವಕಾಧುನಿಕ ಮಹಾಮಹಿಮರಲ್ಲಿ ಶ್ರದ್ಧಾಭಕ್ತಿಗಳು ಉಂಟಾಯಿಸಿ ಅವರೂ ಸತ್ಪ್ರಜೆಗಳಾಗಿ ಮಾತೃ ದೇಶೋದ್ಧಾರ ಕಾರ್ಯಕ್ಕೆ ಬದ್ಧ ಕಂಕಣರಾಗಲು ಪ್ರೇರಿಸುವಂತೆಯೂ ದಿವ್ಯಾದರ್ಶಗಳನ್ನೊದಗಿಸಲು ಯಥಾಶಕ್ತಿ ಶ್ರಮಿಸುತ್ತಿರುವ ಈ ಗ್ರಂಥಮಾಲೆಗೆ ಕರ್ನಾಟಕ ಮಾತಾಪಿತೃಗಳು ಶಕ್ತಿವಂಚನೆಯಿಲ್ಲದ ಸ್ವಹಸ್ತ ಪರಹಸ್ತಗಳಿಂದ ಪ್ರೋತ್ಸಾಹವನ್ನೊದಗಿಸಿ ಭಾಷಾಸೇವೆಗೆ ಸಹಕರಿಸಬೇಕಾಗಿ ಕೋರುತ್ತೇವೆ

ಬೆಂಗಳೂರು ಸಿಟಿ
೩೦—೬—೧೯೨೬

ಇತಿ ಸುಜನ ವಿಧೇಯ,
ಯಂ ರಾಮರಾವ್.

ಸುಬೋಧ ಮುದ್ರಣಾಲಯ, ಬೆಂಗಳೂರು ಸಿಟಿ—೩,೦೦೦—೧೯೨೬

ಶ್ಲೋಕ: —

ಪುಣ್ಯಾಂಭೋಜ ವಿಕಾಸಾಯ । ಪಾಪಧ್ವಾಂತ ಕ್ಷಯಾಯಚ ॥
ಶ್ರೀಮಾನಾವಿರಭೂದ್ಭೂವೌ । ರಾಮಾನುಜ ದಿವಾಕರಃ ॥



ಜಯತಿ ಸಕಲ ವಿದ್ಯಾವಾಹಿನೀ ಜನ್ಮಶೈಲೋ ।
ಜನಿಪಥ ಪರಿವೃತ್ತಿ ಶ್ರಾಂತವಿಶ್ರಾಂತ ಶಾಖೀ ॥
ನಿಖಿಲ ಕುಮತಿ ಮಾಯಾಶರ್ವರೀ ಬಾಲಸೂರ್ಯೋ ।
ನಿಗಮ ಜಲಧಿ ವೇಲಾ ಪೂರ್ಣಚಂದ್ರೋ ಯತೀಂದ್ರಃ ॥



ಜಯ ಮಾಯಿ ಮತಾಂಧಕಾರ ಭಾನೋ ।
ಜಯ ಬಾಹ್ಯ ಪ್ರಮುಖಾಟವೀ ಕೃಶಾನೋ ॥
ಜಯ ಸಂಶ್ರಿತ ಸಿಂಧುಶೀತ ಭಾನೋ ।
ಜಯ ರಾಮಾನುಜ ಯಾದವಾದ್ರಿ ಶೃಂಗೇ ॥



ಶ್ರೀರಾಮ ಸಹಾಯಂ

ವಿಶಿಷ್ಟಾದ್ವೈತಮತಸ್ಥಾಪಕರಾದ

ಶ್ರೀ

# ರಾಮಾನುಜಾಚಾರ್ಯರು



## ಅಧ್ಯಾಯ ೧ "ರಾಮಾನುಜ ನಾಮಕರಣ"

ಪರಮಪಾವನ ಸ್ವರೂಪಿಣಿಯಾದ-ನಮ್ಮ ಮಾತೃಭೂಮಿಯಾದ ಈ ಭಾರತದೇಶದಲ್ಲಿ ಮೇಲಿಂದ ಮೇಲೆ ಅನೇಕಾನೇಕ ಸಾಧು ಸತ್ಪುರುಷರೂ ಧರ್ಮೋದ್ಧಾರಕರೂ ಜನ್ಮವೆತ್ತಿ ಪಾಪಪಂಕದಲ್ಲಿ ಮುಳುಗಿದ ಮಾನವವರ್ಗವನ್ನು ಉದ್ಧರಿಸಲು ಪ್ರಯತ್ನಿಸಿದ್ದಾರೆ. ಹಾಗೆ ಒಂದು ಜನಾಂಗವನ್ನು ಅಥವ ಒಟ್ಟು ಮಾನವ ಸಮುದಾಯವನ್ನು ಪಾಪದಿಂದ ಮುಕ್ತಮಾಡಿ ಪೂತ ಮಾರ್ಗದಲ್ಲಿ ಕೈಹಿಡಿದು ಕರೆದೊಯ್ಯುವ ಕಾರ್ಯವು ಸಾಮಾನ್ಯರಿಂದ ಆಗದು. ಯಾರು, ಮಾನವರಾಗಿ ಜನಿಸಿದ್ದರೂ ಮಾನವ ಸಾಮಾನ್ಯವಾದ ಅಶಕ್ತತೆಗಳನ್ನು ನೀಗಿಕೊಂಡು, ನಿರ್ಭೀತಿ ನಿರಲಸಿಕೆಗಳಿಂದ ಕೂಡಿ, ಭಗವದ್ಭಕ್ತಿ ಭರಿತರಾಗಿ ಪ್ರೇಮ ಪೂರ್ಣರಾಗಿರುವರೋ ಅಂಥವರಿಗೆ ಮಾತ್ರ, ಸ್ವತ್ಯಾಶಾಲೇಶವೂ ಇಲ್ಲದೆ, ದೀರ್ಘದುಃಖ ಸಂಕಟಗಳಲ್ಲಿ ನರಳುತ್ತಿರುವ ಪ್ರಾಣಿವರ್ಗವನ್ನು ಆ ದುಃಖದಿಂದ ನಿವಾರಿಸಲೆತ್ನಿಸುವುದು ಸಾಧ್ಯವಿರುವುದು. ಇಂತಹ ಅವ್ಯಾಜ ವಿಶ್ವಪ್ರೇಮವೇನು ಸಾಮಾನ್ಯವಾಗಿ ಲಭಿಸುವುದೇ?—

ಪ್ರಾಣಿಗಳಿಗೆ ದುಃಖವನ್ನುಂಟುಮಾಡುವ ಪ್ರಬಲ ಸಾಧನವು ಪಾಪವು! ಅವುಗಳನ್ನು ದುರ್ವ್ಯಾಧಿಗಳಿಗೆ ಒಳಪಡಿಸಿ ಬಳಲಿಸುವುದು ಪಾಪವು!

ಶ್ವಾನ್ಯ ದಾರಿದ್ರ್ಯಗಳಿಗೀಡುಮಾಡಿ ಸಂಕಟಪಡಿಸುವುದು ಪಾಪವು! ಕೊನೆಗೆ ಆ ಪ್ರಾಣಿಗಳನ್ನು ವಿವಿಧ ಯಾತನೆಗಳಿಂದ ನರಳಿಸಿ ಮರಣಗೊಳಿಸಿ ನರಕದಲ್ಲಿನ ಕ್ರಿಮಿಯನ್ನಾಗಿಸುವುದೂ ಈ ಪಾಪವೇ! ಇಷ್ಟರಿಂದ ತೀರಲಿಲ್ಲ! ಇದರ ಪಾಪವೆಂದರೇನು? "ಪಾಪಾಯ ಪರಪೀಡನಂ" ಎಂಬ ಹಿಂದಿನ ಉಕ್ತಿಯು ಪಾಪದ ಸ್ವರೂಪವನ್ನು ಸಹಜ ದೃಷ್ಟಿಯಿಂದ ವ್ಯಕ್ತಗೊಳಿಸುತ್ತಿದೆ. ಧರ್ಮವಿಚಾರವಾಗಿಯಾಗಲಿ, ಅರ್ಥ ಎಂದರೆ ದ್ರವ್ಯ ಭೂಮಿ ಕಾಣಿ ವ್ಯಕ್ತಿಕ್ಷೇತ್ರಗಳ ವಿಚಾರವಾಗಿಯಾಗಲಿ, ಅಥವ ತನ್ನ ಕಾಮಸಂತೃಪ್ತಿಗಾಗಲಿ, ಒಬ್ಬನು ಇನ್ನೊಬ್ಬನಿಗೆ ಅಥವ ಇನ್ನೊಂದು ಪ್ರಾಣಿಗೆ ಪೀಡೆಯನ್ನುಂಟುಮಾಡುವುದೇ ಪಾಪದ ಬೀಜವಾಗುತ್ತದೆ. ಇಲ್ಲಿ ಒಂದು ವಿಷಯ—ಕೇವಲಕೃತಿಯಿಂದ ದೇಹಕ್ಕೆ ಉಂಟುಮಾಡುವ ಹಿಂಸೆ ಮಾತ್ರವಲ್ಲ! ಮನಸಾವಾಚಾಕರ್ಮಣಾ, ಹೇಗೆ ದುಃಖವನ್ನುಂಟುಮಾಡಿದರೂ ಅದು ಪಾಪವೇ ಆಗುವುದೆಂಬುದನ್ನು ಮಾತ್ರ ಮರೆಯಬಾರದು. ಪಾಪಬೀಜವು ಅರ್ಥಕಾಮಗಳನ್ನು ಗಳಿಸಲಪೇಕ್ಷಿಸುವ ಸ್ವಾರ್ಥವು, ಮತ್ತು ಧರ್ಮದ ನಿಜಸ್ವರೂಪವನ್ನು ಗ್ರಹಿಸಲರಿಯದ ಮೂಢನಂಬಿಕೆಯು ಹಟಮಾರಿಯು, ಮನೋಮಯಕೋಶವನ್ನು ಪ್ರವೇಶಿಸಿ, ಕ್ರಮಕ್ರಮವಾಗಿ ವೃದ್ಧಿಯಾಗಿ ಕೊನೆಗದು ವಿಷವೃಕ್ಷವೇ ಆಗಿ ಪರಿಣಮಿಸುವುದು. ಹೀಗೆ ಧರ್ಮ ಅರ್ಥ ಕಾಮಗಳ ವಿಷಯದಲ್ಲಿ ಮಾನವನ ಸ್ವಾರ್ಥತೆಯಿಂದ ಬೆಳೆದ ವಿಷವೃಕ್ಷದ ಕಹಿಯಾದ ಹಣ್ಣುಗಳೇ ಸಾಂಕ್ರಾಮಿಕಾದಿ ವ್ಯಾಧಿಗಳೂ, ಯುದ್ಧಪ್ರಳಯ ಪ್ರಜಕ್ಷಯಾದಿಗಳೂ!—

ಆದುದರಿಂದ ಪ್ರಪಂಚದಲ್ಲಿ ಶಾಂತಿಸುಖ ಸೌಭಾಗ್ಯಗಳನ್ನು ಸ್ಥಾಪಿಸಬೇಕೆಂದು ಪ್ರಯತ್ನಿಸುವವರಿಗೆ ಜನಾಂಗದ ಈ ಮನೋಮಯ ಕ್ಷೇತ್ರವನ್ನು ಸುಧಾರಿಸುವುದೇ ಪ್ರಥಮ ಕರ್ತವ್ಯವಾಗಿರುವುದು. ಆ ಕ್ಷೇತ್ರದಲ್ಲಿ ಬೆಳೆದು ಆಳವಾಗಿ ಬೇರುಬಿಟ್ಟಿರುವ ಸ್ವಾರ್ಥತೆ ದಂಭ ಮೋಹಗಳೆಂಬ ಕಳೆಗಳನ್ನು ಬೇರೊಂದಿಗೆ ಕಿತ್ತೊಗೆಯದ, ಆ ಸ್ಥಳದಲ್ಲಿ ಶಾಂತಿಸುಖ ಸಾಧನಗಳೆಂಬ ಉತ್ತಮ ಪೈರನ್ನು ಬೆಳೆಯಿಸಬೇಕೆಂದರೆ ಅದು ಹೇಗೆ ಸಾಧ್ಯವಾದೀತು? ಕಳೆಯನ್ನು ಕೀಳದೆ ಭೂಮಿಗೆ ಗೊಬ್ಬರವನ್ನು ಮಾತ್ರ ಹಾಕಿದರೆ ಆಗುವ ಪರಿಣಾಮವನ್ನು ಹೇಳಬೇಕಾದುದಿಲ್ಲವಷ್ಟೆ! ಕಳೆಗಳು ಆ ಗೊಬ್ಬರದ ಸಾರವನ್ನೆಲ್ಲ ತಾವೇ ತಿಂದು, ಇದ್ದುದಕ್ಕೆ ನಾಲ್ಕಾಗಿ ಬೆಳೆದು, ಪೈರನ್ನು ಸಮೂಲ

ನಾಶಗೊಳಿಸುವುವು; ಅಲ್ಲವೆ? ಹಾಗೆಯೇ ಮಾನವವರ್ಗದ ಮನೋಮಯ ಕ್ಷೇತ್ರದಲ್ಲಿ ನಿಬಿಡವಾಗಿ ಬೆಳೆದು ಹೋಗಿರುವ ದಂಭ ಅಹಂಕಾರ ಸ್ವಾರ್ಥತೆಗಳೆಂಬ ಈ ಕಳೆಗಳನ್ನು ತೆಗೆಯದೆ ಉತ್ತಮ ಬಿತ್ತಗಳನ್ನು ಬಿತ್ತಿಸಿ, ಅರ್ಥಕಾಮಗಳೆಂಬ ಗೊಬ್ಬರಗೊಂಡುಗಳನ್ನು ಮಾತ್ರ ಒದಗಿಸಿ ಸುಖಶಾಂತಿಗಳೆಂಬ ಉತ್ತಮ ಪೈರನ್ನು ಬೆಳೆಯಿಸುತ್ತೇವೆಂದು ಎಣಿಸುತ್ತಿರುವ ಆಧುನಿಕ ರಾಜಕೀಯ ಧುರೀಣರು ಮಾನವಸ್ವಭಾವವನ್ನು ಸಹಜರೀತಿಯಿಂದ ಗ್ರಹಿಸಲಿಲ್ಲವೆಂದು ಅರ್ಥವಾಗುವುದು. ಪ್ರಪಂಚದ ಇತರ ಅನೇಕ ದೇಶಗಳಲ್ಲಿ ಶಾಂತಿಸ್ಥಾಪನೆಯ ಸಾಧನವು ಮೇಲೆ ಹೇಳಿದಂತೆ ಅರ್ಥಕಾಮಗಳೆಂದು ಭಾವಿಸಲ್ಪಟ್ಟಿರುವುದು. ಈ ಅಪಸವ್ಯಮಾರ್ಗವನ್ನು ಅನುಸರಿಸಿರುವುದರಿಂದಲೇ ಎಲ್ಲೂ ಅಶಾಂತತೆಯು ಅವಿರಳವಾಗಿ ಹಬ್ಬಿರುವುದು. ಪರರ ಮನೆಗೆ ಹತ್ತಿದ ಕಿಚ್ಚು ನಮ್ಮ ಮನೆಗೂ ತಪ್ಪದೆ ಅಂಟಿಕೊಳ್ಳುವುದಲ್ಲವೆ? ಹಾಗೆಯೇ ನಮ್ಮ ದೇಶದಲ್ಲೂ ಆ ಸಂಬಂಧದಿಂದ ನಾನಾವಿಧ ಕ್ಷುದ್ರ ಹಿಂಸೆಗಳು ಉದಯಿಸಿರುವುವು —

ಇವುಗಳನ್ನು ನಾಶಗೊಳಿಸುವ ಕಾರ್ಯವು ನಮ್ಮ ದೇಶದಲ್ಲಿ ಮಾತ್ರ ಆದಿಯಿಂದಲೂ ಸಹಜರೀತಿಯಿಂದಲೇ ನಡೆದು ಬರುತ್ತಿದೆ. ಪಾಪವು ಅಳತೆಗೆ ಮೀರಿ ಬೆಳೆದು ಜನಾಂಗದಲ್ಲಿ ದುಃಖಸಂಕಟಗಳು ತಲೋರಿಬಂದುವೆಂದರೆ, ನಮ್ಮ ದೇಶದಲ್ಲಿ ಯಾವನಾದರೊಬ್ಬನು ಕೋಟಿ ಕೋಟಿ ಧನವನ್ನು ಕೊಟ್ಟು ಜನಗಳ ಆ ದುಃಖಸಂಕಟಗಳನ್ನು ನೀಗಿಸಲೆತ್ನಿಸುವುದಿಲ್ಲ. ಆದರೆ ಆ ಕಾಲಕ್ಕೆ ಯಾವನಾದರೊಬ್ಬ ಮಹಾತ್ಮರು ಉದಯಿಸಿ ಅವುಗಳಿಗೆ ಮೂಲಕಾರಣವಾದ ಆಶಾಮೋಹಗಳನ್ನು ಜನಾಂಗದ ಮನೋಮಯ ಕ್ಷೇತ್ರದಿಂದ ಕಿತ್ತೊಗೆದು ಅಲ್ಲಿ ಪ್ರೇಮಾಮೃತದ ಬೀಜಗಳನ್ನು ಬಿತ್ತುವರು. ಬೇರು ನಾಶವಾದೊಡನೆಯೇ ಗಿಡವು ಬಾಡಿ ಬಸವಳಿದು ಬೀಳುವಂತೆ ಆ ಲೋಕದ ಕಷ್ಟಸಂಕಟಗಳೂ ನೀಗುವುವು! ಹೀಗೆ ಹಿಂದೆ ಎರಡು ಸಾವಿರ ವರ್ಷಗಳ ಕೆಳಗೆ ಉದಯಿಸಿದ ಬುದ್ಧದೇವನು, ಆಸೆಯೇ ಪಾಪದ ಮೂಲವೆಂದು ತಿಳಿದು ತಾನು ತನ್ನ ಸ್ವಂತ ಜೀವನದಲ್ಲಿ ಇದನ್ನು ಮೂರ್ತಿಭವಿಸಿ ರಾಜೈಶ್ವರ್ಯ ಪತ್ನೀಪುತ್ರಾದಿಗಳನ್ನು ತ್ಯಜಿಸಿ ಜನಾಂಗವನ್ನುದ್ಧರಿಸಿದನು. ಬುದ್ಧನು ಜನಮನದಲ್ಲಿ ನೆಲೆಸಿದ ಆ ಕಳೆಗಳನ್ನೂ ಕೆಲಮಟ್ಟಿಗೆ ನಾಶಗೊಳಿಸಿದನು. ಹಾಗ

ಶುದ್ಧವಾದ ಕ್ಷೇತ್ರದಲ್ಲಿ ಭೂತದಯೆ ಪರೋಪಕಾರ ವಿಶ್ವಪ್ರೇಮಗಳೆಂಬ ಅಮೃತ ಬೀಜಗಳನ್ನೂ ನೆಟ್ಟನು ಅವು ಬೆಳೆದು ಕೆಲಕಾಲ ವೃದ್ಧಿಯಾದುವು. ಆದರೆ ಆ ಬಳ್ಳಿಗಳಿಗೆ ತಕ್ಕ ಅವಲಂಬನವಿಲ್ಲದೆ ಕೆಲ ಕಾಲಾನಂತರ ಮುರಿದು ಬೀಳಲು, ಜನಾಂಗವು ಪುನಃ ಮಾಗಾ೯ತಿಕ್ರಮಣವಾಡತೊಡಗಿತು ಪಾಪ ದುಃಖ ಪ್ರಾಣಿಹಿಂಸೆಗಳು ಪ್ರಬಲಿಸಿದುವು ಆಗ್ಗ ಸರಿಯ . ಶ್ರೀಶಂಕರಾಚಾರ್ಯರು ಉದಯಿಸಿ ಪುನಃ ಆ ಕ್ಷೇತ್ರವನ್ನು ಶುದ್ಧಿಗೊಳಿಸಿ ಬುದ್ಧನಿಂದ ಬಿತ್ತಲ್ಪಟ್ಟು ಬೆಳೆದು, ಅವಲಂಬನವಿಲ್ಲದೆ ನೆಲಕ್ಕೆ ಬಿದ್ದಿದ್ದ ಆ ಭೂತದಯೆ ಪರೋಪಕಾರ ವಿಶ್ವಪ್ರೇಮಗಳೆಂಬ ಅಮೃತ ಬಳ್ಳಿಗಳ ಬಳಿಯಲ್ಲಿ ವೇದಾಂಗಗಳು ಉಪನಿಷತ್ತುಗಳು ಶಾಸ್ತ್ರಗಳು ಎಂಬ ಊರೆಗೋಲುಗಳನ್ನು ನಿಲ್ಲಿಸಿ ಅವು ನಿಂತು ಬೆಳೆಯಲು ಅವಕಾಶವನ್ನುಂಟುಮಾಡಿದರು ಕೆಲಕಾಲ ಆ ಅಮೃತ ಬಳಿಗಳು ಆ ಊರೆಗೋಲುಗಳನ್ನಾಶ್ರಯಿಸಿ ಬೆಳೆದುವು ಆಗಲೂ ಜನಮನಗಳನ್ನಾಶ್ರಯಿಸಿದ ಆ ಬಳ್ಳಿಗಳಿಗೆ ದೃಢವಾದ ಅವಲಂಬನದ ಆವಶ್ಯಕತೆಯು ತಪ್ಪಲಿಲ್ಲ. ಶ್ರೀಶಂಕರ ಭಗವತ್ಪಾದರಿಂದ ಪ್ರತಿಪಾದಿಸಲ್ಪಟ್ಟ ಕೇವಲ ಪ್ರೌಢವರ್ಗಕ್ಕೆ ಮಾತ್ರ ಸಾಧ್ಯವಿರುವ ಜ್ಞಾನಮಾರ್ಗವನ್ನು ಸಾಮಾನ್ಯಜನಸಮಾಜವು ಅನುಸರಿಸಿ ನಡೆಯಲಾರದಾಯಿತು ಅವರಿಂದ ಬೋಧಿಸಲ್ಪಟ್ಟ ಆತ್ಮಸ್ವರೂಪವನ್ನು ಸಹಜರೀತಿಯಿಂದ ಅರ್ಥ ಮಾಡಿಕೊಳ್ಳುವಷ್ಟು ಶಕ್ತಿಯಿಲ್ಲದೆ ಅಪಾರ್ಥ ಮಾಡಿಕೊಳ್ಳತೊಡಗಿತು ಅವರು ಬೋಧಿಸಿದ 'ಜೀವನುಪರಬ್ರಹ್ಮಸ್ವರೂಪನು' ಎಂಬ ಅದ್ವೈತತತ್ವವನ್ನು ಜೀವಿತದೊಂದಿಗೆ ಅನುಭವಕ್ಕೆ ತಂದುಕೊಳ್ಳುವ ಯೋಗ್ಯತೆಯು ಕಡಮೆಯಾಯಿತು ಕ್ರಮವಾಗಿ 'ಅಹಂಬ್ರಹ್ಮಾಸ್ಮಿ' ಎಂಬ ಮುಂತಾದ ಮಹಾವಾಕ್ಯಗಳು ಸ್ವಾರ್ಥಿಜನರ ದಂಭ ಮೋಹ ಅಹಂಕಾರಗಳಿಗೆ ವಶವಾಗಿ ದುರುಪಯೋಗವಾಗತಾಗಿದುವು ಅಷ್ಟು ಮಾತ್ರವಲ್ಲ, ಇತ್ತ ಜನಸಾಮಾನ್ಯವಾದರೋ ಸರ್ವೇಶ್ವರನನ್ನು ನಿರ್ಗುಣನಿರಾಕಾರಸ್ವರೂಪದಿಂದ ಗ್ರಹಿಸಿ ಆಶ್ರಯ ಹೊಂದುವಷ್ಟು ಸಾಮರ್ಥ್ಯವಿಲ್ಲದೆ-ದಾರ್ಢ್ಯವಿಲ್ಲದೆ ತಳಮಳಿಸತೊಡಗಿತು ಇಂತು ಜನಮನದಲ್ಲಿ ಪುನಃ ಅಶಾಂತತೆಯು ಉದಯಿಸಿತು. ಒಡನೆ ಅವರ ಮನದಲ್ಲಿ ಬೆಳೆಯುತ್ತಿದ್ದ ಅಮೃತ ಬಳ್ಳಿಗಳು ಬಾಡಿ ಕ್ಷಯಿಸತೊಡಗಿದುವು. ಆ ಕಾಲಕ್ಕೆ ನಮ್ಮ ಕಥಾನಾಯಕರು ಅವತರಿಸಿ ಶ್ರೀಶಂಕರಾಚಾರ್ಯರಿಂದ ನಿಲ್ಲಿಸ

ಲ್ಪಟ್ಟಿದ್ದ ಊರೆಗೋಲುಗಳ ಪಕ್ಕದಲ್ಲೇ ಅನಾದ್ಯನಂತಕಾರಣನೂ ಅಪ್ರಮೇಯನೂ ಆದಿಮಧ್ಯಾಂತರಹಿತನೂ ದೇವದೇವೇಶನೂ ಆದ ಶ್ರೀವಿಷ್ಣುಮೂರ್ತಿಯೆಂಬ ದಿವ್ಯವೃಕ್ಷವನ್ನು ನಿಲ್ಲಿಸಿದರು. ಒಡನೆ ಊರೆಗೋಲುಗಳ ಮೂಲಕ ಮೇಲಕ್ಕೇರಿ ಮುಂದೆ ಮಾರ್ಗಕಾಣದೆ ಆಕಾಶದಲ್ಲಿ ಅಲೆಯುತ್ತಿದ್ದ ಆ ಬಳ್ಳಿಗಳು ಜಗದಾಧಾರಸ್ವರೂಪವಾದ ಆ ವೃಕ್ಷವನ್ನು ಆಶ್ರಯಿಸಿದುವು. ಶಾಶ್ವತವಾದ ಆ ಆಧಾರವೃಕ್ಷವನ್ನು ಅಪ್ಪಿಕೊಂಡುವು ಸರಿ, ಮುಂದೆ ಅವುಗಳಿಗೆ ಚ್ಯುತಿಯೆಂದರೇನು? ಶ್ರೀರಾಮಾನುಜಾಚಾರ್ಯರು ಹೀಗೆ ಶ್ರೀಮದಾದಿದೇವನಾದ ವಿಷ್ಣುಮೂರ್ತಿಯನ್ನು ವ್ಯಕ್ತರೀತಿಯಿಂದ, ಜನಮನಕ್ಕೆ ಲಕ್ಷ್ಯವಾಗಿಟ್ಟು ಸೇವಿಸಲೂ ಭಜಿಸಲೂ ಪೂಜಿಸಲೂ ತನ್ಮೂಲಕ ಜನ್ಮಸಾರ್ಥಕ್ಯವನ್ನು ಹೊಂದಿ ಮೋಕ್ಷಸಾಮ್ರಾಜ್ಯವನ್ನು ಗಳಿಸಲೂ ಮಾರ್ಗದರ್ಶಕರಾದರು. ನಮ್ಮಲ್ಲಿಯ ಸುಧಾರಣಾಕಾರ್ಯವು ಹೀಗೆ ಸವ್ಯರೀತಿಯಿಂದ ನಡೆಯುವುದು. ಹೀಗೆ ಜಗದುದ್ಧಾರಕ್ಕೆ ಪ್ರಯತ್ನಿಸುವ ಮಹಾತ್ಮರ ಜೀವಿತ ಚರಿತ್ರೆಯು ಮಾನ್ಯವಾಗಲಾರದೆ? ಅದನ್ನು ತಿಳಿಯಬೇಕಾದುದು ಅಭಿವೃದ್ಧಿಗೆ ಸಾಧಕವಲ್ಲವೆ?—ಇನ್ನು ಶ್ರೀಮದಾಚಾರ್ಯರು ಎಲ್ಲಿ ಹುಟ್ಟಿ ಬೆಳೆದರು. ಹೇಗೆ ಕಷ್ಟಸಹನಮಾಡಿ ವಿದ್ಯಾಭ್ಯಾಸ ಮಾಡಿದರು. ಹೇಗೆ ಮತಸಿದ್ಧಾಂತಗಳನ್ನು ಸ್ಥಾಪಿಸಿದರು ಮ ಂತಾದ ವಿಚಾರಗಳನ್ನು ಮುಂದಿನ ಪುಟಗಳಲ್ಲಿ ಓದೋಣ!—

ದಕ್ಷಿಣದೇಶದಲ್ಲಿರುವ ಅನೇಕ ಸುಪ್ರಸಿದ್ಧ ಪುಣ್ಯಕ್ಷೇತ್ರಗಳಲ್ಲಿ ಶ್ರೀರಂಗವೂ ಒಂದು ಇದು ಲೋಕಪಾವನೆಯಾದ ಕಾವೇರಿಯೆಂಬ ಜೀವನದಿಯ ತೀರದಲ್ಲಿದ್ದು ಭಕ್ತಾಭೀಷ್ಟವರಪ್ರದಾಯಕನಾದ ಶ್ರೀರಂಗನಾಥಸ್ವಾಮಿಯ ಸಾನ್ನಿಧ್ಯದಿಂದ ಪವಿತ್ರವೆನಿಸಿದೆ ನಮ್ಮಾ ಪವಿತ್ರದೇಶದಲ್ಲಿ ಧರ್ಮಸಂಸ್ಥಾಪನೆಗಾಗಿ ಪ್ರಯತ್ನಿಸಿದ ಮಹನೀಯರಿಗೆ ಕೊರತೆಯಿಲ್ಲವಷ್ಟೆ! ಹಾಗೆ ಕಲಿಯುಗದ ಪ್ರಾರಂಭದಲ್ಲೇ ವಿಷ್ಣುಭಕ್ತಿಪ್ರಸರಣಕಾರ್ಯದಲ್ಲಿ ಪರಿಶ್ರಮಮಾಡಿದವರಲ್ಲಿ ಶ್ರೀನಮ್ಮಾಳ್ವಾರ್ ಎಂಬ ಗೌರವನಾಮದಿಂದ ಸುಪ್ರಸಿದ್ಧರಾದ ಶ್ರೀಶಠಗೋಪರು ಮುಖ್ಯರು. ಈ ಮಹಾಮಹಿಮರ ತರುವಾಯ ಕಲಿಯುಗದಲ್ಲಿ ಬಹುಕಾಲ ಕಳೆದಮೇಲೆ ಎಂದರೆ ಸುಮಾರು ಕಲ್ಯಬ್ದ ೩೬೮೦ ನೆಯ ಸಂ॥ದ ಸುಮಾರಿನಲ್ಲಿ ಶ್ರೀ ನಾಥಮುನಿಗಳೆಂಬ ಸುಪ್ರಸಿದ್ಧ ಆಚಾರ್ಯರು ಅ

ವತರಿಸಿ ತಮ್ಮ ಯೋಗಬಲದಿಂದ ಶ್ರೀಶಠಗೋಪರ ಕೃಪೆಗೆ ಪಾತ್ರರಾಗಿ ವೇದಾಂತ ಸೂತ್ರಗಳ ನಿಶ್ಚಯಾರ್ಥವನ್ನು ಗ್ರಹಿಸಿ, ವಿಶಿಷ್ಟಾದ್ವೈತ ಸಿದ್ಧಾಂತಗಳನ್ನು ಪ್ರಪ್ರಥಮದಲ್ಲಿ ಪ್ರತಿಪಾದಿಸಿದರು. ಈ ನಾಥಮುನಿಗಳ ಪೌತ್ರರು ಶ್ರೀಯಾಮುನಾಚಾರ್ಯರು. ಇವರು ಮಹಾ ಪಂಡಿತರು. ಅದ್ವಿತೀಯ ಭಗವದ್ಭಕ್ತರು ಇವರು ಶ್ರೀರಂಗದಲ್ಲಿ ವಾಸಿಸಿ ಶ್ರೀರಂಗನಾಥನನ್ನು ಬಹು ಬಗೆಗಳಿಂದ ಅರ್ಚಿಸಿ ಸೇವಿಸಿ, ಭಕ್ತವೃಂದವನ್ನು ತಮ್ಮ ಬೋಧನೆಗಳಿಂದಲೂ ಸಲಹೆಗಳಿಂದಲೂ ಸದಾಸಂತೋಷಪಡಿಸುತ್ತಿದ್ದರು ಇವರು "ಆಳವಂದಾರ್" ಎಂದರೆ 'ರಕ್ಷಿಸುವುದಕ್ಕಾಗಿ ಬಂದವರು' 'ಪತಿತಪಾಮರವರ್ಗವನ್ನು ಕಾಪಾಡುವುದಕ್ಕಾಗಿಯೇ ಅವತರಿಸಿದವರು' ಎಂಬ ಗೌರವ ನಾಮದಿಂದ ಸುಪ್ರಸಿದ್ಧರಾಗಿರುತ್ತಿರುವುದೇ ಇವರ ಜೀವಿತವು ಸಮಾಜಕ್ಕೆ ಎಷ್ಟು ಪ್ರಯೋಜನಕಾರಿಯಾಗಿತ್ತೆಂಬುದನ್ನು ಸೂಚಿಸುತ್ತಿದೆಯಲ್ಲವೆ? ಈ ಪುಣ್ಯಶೀಲರು, ಶ್ರೀರಂಗನಾಥಸ್ವಾಮಿಯ ಪೂಜಾನಿರತರಾಗಿದ್ದುದು ಮಾತ್ರವಲ್ಲದೆ ಶಿಷ್ಯರಿಗೆ ಪಾಠಪ್ರವಚನಗಳನ್ನೂ ನಡಿಸುತ್ತಿದ್ದರು. ಒಂದಾನೊಂದುದಿನ ಪಾಠವು ನಡೆದಿರುವಾಗ್ಗೆ ಶ್ರೀಯಾಮುನಾಚಾರ್ಯರು (ಆಳವಂದಾರ್) ವಿಷ್ಣುಭಕ್ತಿಗೆ-ಶ್ರೀಸ್ವಾಮಿಕೈಂಕರ್ಯಕ್ಕೆ ಸಮಾನನಾದ ತರಣೋಪಾಯವೇ ಮತ್ತಿನ್ನಾವುದೂ ಇಲ್ಲವೆಂದು ಒತ್ತಿಯೊತ್ತಿ ಹೇಳಲು, ಅಲ್ಲೇ ಕುಳಿತಿದ್ದ ಅವರ ಶಿಷ್ಯರಲ್ಲೊಬ್ಬರಾದ ಶ್ರೀಶೈಲಪೂರ್ಣರು ಅದನ್ನು ಕೇಳಿ ಒಡನೆ ಎದ್ದು ನಮಸ್ಕರಿಸಿ, ಸಾಕ್ಷಾದ್ಭೂವೈಕುಂಠವೆಂದು ಪ್ರಸಿದ್ಧವಾಗಿರುವ ಶ್ರೀತಿರುಪತಿ ಕ್ಷೇತ್ರಕ್ಕೆ ಹೋಗಿ ಅಲ್ಲಿ ಶ್ರೀವೇಂಕಟೇಶ್ವರಸ್ವಾಮಿಯನ್ನು ಸೇವಿಸಿಕೊಂಡಿರಲು ಅನುಗ್ರಹಿಸಬೇಕೆಂದು ವಿನೀತರಾಗಿ ಪ್ರಾರ್ಥಿಸಿದರು. ತಮ್ಮ ಶಿಷ್ಯವರ್ಯರ ಆಶಯವನ್ನು ಆಲಿಸಿ ಪರಮಸಂತುಷ್ಟರಾದ ಆಳವಂದಾರ್‌ಸ್ವಾಮಿಯವರು ಆ ಸತ್ಕಾರ್ಯಕ್ಕೆ ಅನುಮತಿಸಿದರು

ಒಡನೆ ಶ್ರೀಶೈಲಪೂರ್ಣರು-(ಅಥವಾ ಮಹಾಪೂರ್ಣರು ಇವರ ತಮಿಳು ನಾಮಧೇಯ ಪೆರಿಯತಿರುಮಲೆನಂಬಿ) ತಮ್ಮ ತಾಯಿತಂದೆಗಳು ಮತ್ತು ತಂಗಿಯರಿಬ್ಬರೊಂದಿಗೆ ಶ್ರೀತಿರುಪತಿಕ್ಷೇತ್ರಕ್ಕೆ ನಡೆದು ಅಲ್ಲಿ ಶ್ರೀಸ್ವಾಮಿಯನ್ನು ತಮಿಳುಪ್ರಬಂಧಗಳಲ್ಲಿ ವಿವರಿಸಿರುವ ನವವಿಧ ಭಕ್ತಿಭಾವನೆಗಳಿಂದಲೂ ಸೇವಿಸುತ್ತಾ ಕೇವಲ ಸ್ವಾಮಿಯ ಸೇವಾಕಾರ್ಯದಲ್ಲೇ ತನ್ಮಯರಾಗಿ ವಾಸಿ

ಸುತ್ತಿದ್ದರು. ಹೀಗಿರುತ್ತಿರುವಲ್ಲಿ ಕೆಲದಿನಗಳ ತರುವಾಯ ಪೆರುಂಬುದೂರಿನ ವಾಸ್ತವ್ಯರಾದ ಶ್ರೀಆಸೂರಿಕೇಶವ ಸೋಮಯಾಜಿಗಳು ಮತ್ತು ಮಧುರಮಂಗಲದ ಕಮಲನಯನಭಟ್ಟರು ಎಂಬಿಬ್ಬರು ವೈಷ್ಣವಶ್ರೇಷ್ಠಬ್ರಹ್ಮಚಾರಿಗಳು ಸ್ವಾಮಿಯ ಸೇವೆಗಾಗಿ ಶ್ರೀತಿರುಪತಿಕ್ಷೇತ್ರಕ್ಕೆ ಬಂದರು ಅವರ ವೇದಾಧ್ಯಯನ ಸಾಮರ್ಥ್ಯ, ಶಾಸ್ತ್ರಪಾಂಡಿತ್ಯ, ಸದಾಚಾರಸಂಪನ್ನತೆ, ಜಿತೇಂದ್ರಿಯತ್ವ, ಭಗವತ್ಕೈಂಕರ್ಯದಲ್ಲಿ ತೋರಿಬಂದ ಶ್ರದ್ಧಾಭಕ್ತಿಗಳು ಶ್ರೀಶೈಲಪೂರ್ಣರನ್ನು ಸಂತೋಷಪಡಿಸಿದುವು. ಆ ಇಬ್ಬರು ಬ್ರಹ್ಮಚಾರಿಗಳೂ, ಶ್ರೀಶೈಲಪೂರ್ಣರಿಗೆ ವಿವಾಹಯೋಗ್ಯವಯಸ್ಕರಾದ ಇಬ್ಬರು ತಂಗಿಯರಿದ್ದಾರೆಂಬುದನ್ನು ತಿಳಿದು, ಗೃಹಸ್ಥಾಶ್ರಮವನ್ನು ಸ್ವೀಕರಿಸಲಪೇಕ್ಷಿಸಿ ತಮ್ಮ ಅಪೇಕ್ಷೆಯನ್ನು ಅವರಿಗೆ ತಿಳಿಸಿದರು ಆ ಬ್ರಹ್ಮಚಾರಿಗಳ ಸದ್ಗುಣಸದಾಚಾರಗಳಿಂದ ಅವರೆಗೇ ಪರಮಸಂತುಷ್ಟರಾಗಿದ್ದ ಶೈಲಪೂರ್ಣರು ಒಡನೆ ಮಹದಾನಂದದಿಂದ ತಮ್ಮ ತಂಗಿಯರಲ್ಲಿ ಹಿರಿಯವಳಾದ ಕಾಂತಿಮತಿಯೆಂಬ ಕನ್ಯಾರತ್ನವನ್ನು ಆಸೂರಿಕೇಶವ ಸೋಮಯಾಜಿಗಳಿಗೂ ಕಿರಿಯವಳಾದ ದಾಂತಿಮತಿ ಎಂಬಾಕೆಯನ್ನು ಕಮಲನಯನ ಭಟ್ಟರಿಗೂ, ಶ್ರೀಸ್ವಾಮಿವೇಂಕಟೇಶನ ಸನ್ನಿಧಿಯಲ್ಲೇ ವಿವಾಹ ಮಾಡಿಕೊಟ್ಟರು

ವಿವಾಹಾನಂತರ ದಂಪತಿಗಳು ತಮ್ಮ ತಮ್ಮ ಊರುಗಳನ್ನು ಕುರಿತು ನಡೆದು ಯುಕ್ತಗೃಹಸ್ಥ ಧರ್ಮದಿಂದ ಕಾಲಯಾಪನೆ ಮಾಡುತ್ತಿದ್ದರು. ಆ ದಂಪತಿಗಳಿಗೆ ಮಿಕ್ಕ ಯಾವ ಲೌಕಿಕ ಸುಖಸಂಪತ್ತಿಗಳಿಗೂ ಕೊರತೆಯಿಲ್ಲದಿದ್ದರೂ ಪುತ್ರಸಂಪತ್ತು ಮಾತ್ರ ಬಹು ದಿನಗಳವರೆಗೆ ಲಭ್ಯವಾಗದೆ ಚಿಂತಾಜನಕವಾಗಿದ್ದಿತು ಹೀಗಿರುವಲ್ಲಿ ಒಂದಾನೊಂದುಸಾರಿ ಶ್ರೀಸೋಮಯಾಜಿಗಳು ಸಂಪೂರ್ಣ ಚಂದ್ರಗ್ರಹಣ ಪುಣ್ಯಕಾಲವು ಪ್ರಾಪ್ತವಾಗಿರಲು ಆಪರ್ವಕಾಲದಲ್ಲಿ ಸಮುದ್ರಸ್ನಾನ ಮಾಡಬೇಕೆಂಬ ಇಚ್ಛೆಯಿಂದ ಭಾರ್ಯೆಯೊಂದಿಗೆ ಚನ್ನಪುರಿ (ಮದ್ರಾಸು)ಗೆ ನಡೆದು, ಅಲ್ಲಿ ಸಿಂಧುಸಲಿಲದಲ್ಲಿ ಸ್ನಾನವನ್ನು ವಿಧ್ಯುಕ್ತವಾಗಿ ತೀರಿಸಿಕೊಂಡು ತಿರುವಲ್ಲಿಕ್ಕೇಣಿಯಲ್ಲಿ ಮುಹೂರ್ತ ಮಾಡಿರುವ ಭಕ್ತಾಭೀಷ್ಟ ವರಪ್ರದಾಯಕನಾದ ಶ್ರೀಪಾರ್ಥಸಾರಥಿಸ್ವಾಮಿಯನ್ನು ಪುತ್ರಾಕಾಂಕ್ಷಿಗಳಾಗಿ ಆರಾಧಿಸಿದರು ಅಲ್ಲದೆ, ಆ ಸ್ವಾಮಿಯ ಸನ್ನಿಧಿಯಲ್ಲೇ ಪುತ್ರಕಾಮೇಷ್ಟಿಯನ್ನೂ ಯಥಾವಿಧಿಯಾಗಿ ಮಾಡಿದರು ಅವಭೃತಸ್ನಾನ

ದ ದಿನ ರಾತ್ರಿ ಸಂತುಷ್ಟರಾಗಿಯೂ ಪರಿಶುದ್ಧಾಂತರಂಗರಾಗಿಯೂ ನಿದ್ರಿಸು ತ್ತಿರಲು, ಶ್ರೀಗೀತಾಚಾರ್ಯನಾದ ದೇವಾದಿದೇವನಾದ ಶ್ರೀಪಾರ್ಥಸಾರಥಿ ಸ್ವಾಮಿಯು ಕೇಶವಸೋಮಯಾಜಿಗಳ ಕನಸಿನಲ್ಲಿ ಬಂದು "ವೈಷ್ಣವೋ ತ್ತಮಾ, ಚಿಂತಿಸದಿರು. ನಿನ್ನ ಶ್ರದ್ಧಾಭಕ್ತಿಪ್ರಸತ್ತಿಗಳಿಗಾಗಿ ಪರಮ ಸಂತುಷ್ಟನಾಗಿದ್ದೇನೆ. ನನ್ನ ಭಕ್ತರಲ್ಲಿ ಶ್ರೇಷ್ಠನೂ ನಿತ್ಯಸೂರಿಗಳಲ್ಲಿ ಒಬ್ಬ ನೂ ಮಹತ್ವಪೂರ್ಣನೂ ಆದ ಅನಂತನೇ ನಿನ್ನ ಉದರದಲ್ಲಿ ಜಗದುದ್ಧಾರ ಕ್ಕಾಗಿ ಪುತ್ರರೂಪದಿಂದ ಅವತರಿಸುವನು ಶಂಕಿಸದಿರು" ಎಂದು ದಿವ್ಯ ಮಧುರವಾಣಿಯಿಂದ ಅನುಗ್ರಹಿಸಿ ತಿರೋಹಿತನಾದನು. ಸೋಮಯಾಜಿಗ ಳು ಒಡನೆ ಎಚ್ಚತ್ತು, ಪರಮಾಶ್ಚರ್ಯಮಾನಸರಾಗಿ ತಮ್ಮ ಸ್ವಪ್ನವೃತ್ತಾಂ ತವನ್ನು ಸಾಧ್ವೀಮಣಿಯಾದ ಕಾಂತಿಮತಿಯೊಂದಿಗೆ ತಿಳಿಸಿ, ಅಲ್ಲಿಂದ ಹೊ ರಟು ತಮ್ಮ ಸ್ವಸ್ಥಳವಾದ ಭೂತಪುರಿ (ಪೆರುಂಬುದೂರು) ಗ್ರಾಮಕ್ಕೆ ಬಂ ದು ಅಲ್ಲಿ ಗೋಬ್ರಾಹ್ಮಣ-ಅತಿಥ್ಯಭ್ಯಾಗತ ಸೇವಾನಿರತರಾಗಿ ಭಗವಧ್ಯಾನಾ ಸಕ್ತರಾಗಿ ಕಾಲಯಾಪನೆ ಮಾಡುತ್ತಿದ್ದರು.

ಶ್ರೀಭಗವಾನನ ವಾಕ್ಯವು ಸುಳ್ಳಾದೀತೆ! ಸಾಧ್ವಿಕಾಂತಿಮತಿಗೆ ಗರ್ಭ ಚಿಹ್ನೆಗಳು ತೋರಲಾದುವು. ಮುಖವು ಬಿಳುಪುದೋರಿತು. ಮೈಭಾರ ವೆನಿಸಿತು. ನಡೆ ಮಂದವಾಯಿತು. ಅಡಿಗಡಿಗೆ ಆಯಾಸವಾಗತೊಡಗಿತು. ಗರ್ಭಿಣಿಯರಿಗೆ ಸಾಮಾನ್ಯವಾಗಿ ಬಯಕೆಗಳು ತೋರುವುವಷ್ಟೆ! ಕಾಂತಿಮ ತಿಗೂ ಬಯಕೆಗಳುಂಟಾಗುವುವು ಸದಾ ಭಗವಂತನ ಚರಣಸ್ಮರಣೆಯಲ್ಲಿ ಆಸಕ್ತಳಾಗಿರಬೇಕೆಂಬುದೊಂದು ಬಯಕೆ! ಜಗದ ದೀನ ಅಂಗಹೀನ ಬಡಪಾ ಮರರನ್ನು ನೋಡಿ ಅವರ ದುಃಖಕ್ಕಾಗಿ ಮರುಗಿ ಅವರ ಉದ್ಧಾರಕ್ಕಾಗಿ ಪ ರಮಾತ್ಮನಲ್ಲಿ ಮೊರೆಯಿಡಬೇಕೆಂಬುದೊಂದು ಬಯಕೆ! ಸಕಲ ವೇದಶಾಸ್ತ್ರಾ ರ್ಥಗಳೂ ತನಗೆ ತಿಳಿದುಬಿಟ್ಟರೆ, ದುರ್ವಾದಿಗಳ ಬಾಯಿ ಮುಚ್ಚಿಸಿ ಶ್ರೀವಿಷ್ಣು ಭಕ್ತಿಯ ಮಹಾತ್ಮ್ಯವನ್ನು ಲೋಕದಲ್ಲಿ ಹಬ್ಬಿಸೇನಲ್ಲವೆ ಎಂಬುದೊಂದು ಬ ಯಕೆ! ಹೀಗೆ ಗರ್ಭಸ್ಥನಾದ ಶೇಷಾಂಶಸಂಭೂತನಾದ ಪರಮಪಾವನ ಚೇತ ನದ ಮಹಿಮೆಯಿಂದಲೋ ಎಂಬಂತೆ ಆ ಸಾಧ್ವೀರತ್ನದ ಬಯಕೆಗಳು ಸಾ ಮಾನ್ಯಸ್ತ್ರೀಜನದ ಬಯಕೆಗಳಿಗಿಂತಲೂ ಅತ್ಯಂತ ಭಿನ್ನವಾಗಿ ಜಗದುದ್ಧಾರ ಹೇತುಕ ಬೀಜಸ್ವರೂಪಗಳಾಗಿದ್ದುವು. ಹೀಗೇ ಒಂಬತ್ತು ತಿಂಗಳ ಕಾಲವು

ಸುಖವಾಗಿ ಕಳೆಯಲು ಶಾಲಿವಾಹನ ಶಕದ ೯೩೯ ನೆಯ ಪಿಂಗಳನಾಮ ಸಂವತ್ಸರದ ಚೈತ್ರ ಶುದ್ಧ ಪಂಚಮೀ ಗುರುವಾರದ ಶುಭದಿನದಲ್ಲಿ ಮಧ್ಯಾಹ್ನ ಕಾಲದ ದಿವ್ಯವಾದೊಂದು ಮುಹೂರ್ತದಲ್ಲಿ ಶ್ರೀಕಾಂತಿಮತೀದೇವಿಯ ಗರ್ಭ ಸುಧಾಂಬುಧಿಯಲ್ಲಿ, ಹಿಂದೆ ರಾಮಾವತಾರದಲ್ಲಿ ಯಾವ ಅನಂತನು ಶೇಷಾಂಶದಿಂದ ಸ್ವಾಮಿಯ ಸೇವೆಗಾಗಿ ಶ್ರೀಲಕ್ಷ್ಮಣಸ್ವಾಮಿಯಾಗಿ ಅವತರಿಸಿದ್ದನೋ, ಮುಂದೆ ಕೃಷ್ಣಾವತಾರ ಕಾಲದಲ್ಲಿ ಯಾವ ಆ ಅನಂತನೇ ಬಲರಾಮಸ್ವಾಮಿಯಾಗಿ ಅವತರಿಸಿದ್ದನೋ, ಆ ಅನಂತಮೂರ್ತಿಯೇ ಈ ಕಲಿಯುಗದಲ್ಲೂ ಶ್ರೀಭಗವತ್ಕೈಂಕರ್ಯಕಾರ್ಯವಾದ ಧರ್ಮಸ್ಥಾಪನೆಯ ಮಹತ್ಕಾರ್ಯಕ್ಕಾಗಿ ಬಾಲರೂಪದಿಂದ ಅವತರಿಸಿದನು. (ಕ್ರಿ ಶ. ೧೩೧೭) ಆಗ ದಶದಿಕ್ಕುಗಳೂ ಪ್ರಸನ್ನವಾದುವು ಸುವಾಸನೆಯ ಎಳಗಾಳಿಯು ಬೀಸಿತು. ಸಕಲ ಸಜ್ಜನರ ಮನಸ್ಸೂ ಮುದಾನಂದಪೂರ್ಣವಾಯಿತು.

ಶ್ರೀತಿರುಪತಿಕ್ಷೇತ್ರವಾಸಿಗಳಾಗಿದ್ದ ಶೈಲಪೂರ್ಣರು ತಮ್ಮ ತಂಗಿಗೆ ಪುತ್ರರತ್ನವು ಜನನವಾದ ವಾರ್ತೆಯನ್ನು ಕೇಳಿ ಭೂತಪುರಿಗೆ ಬಂದು ಮಗುವಿನ ಶುಭಲಕ್ಷಣ ತೇಜಸ್ವಿತೆಗಳಿಗಾಗಿ ಪರಮಸಂತುಷ್ಟರಾಗಿ ಭಾಗಿನೇಯ (ಸೋದರಳಿಯ)ನನ್ನು ಆಶೀರ್ವದಿಸಿದರು. ಅಂತಹ ಪುತ್ರರತ್ನವನ್ನು ಪಡೆದುದಕ್ಕಾಗಿ ಕೇಶವಸೋಮಯಾಜಿಗಳನ್ನೂ ಯುಕ್ತವಚನಗಳಿಂದ ಅಭಿನಂದಿಸಿದರು. ಮತ್ತು "ಈ ಮಗುವು ಸಾಮುದ್ರಿಕಾಲಕ್ಷಣಗಳಾದನರೋತ್ತಮನಿಗಿರಬೇಕಾದ ಸಮಸ್ತ ಸುಚಿಹ್ನೆಗಳಿಂದಲೂ ಒಪ್ಪುತ್ತಾನಾದ್ದರಿಂದಲೂ, ಸಕಲ ವಿದ್ಯೆ-ಜ್ಞಾನ-ತತ್ವರಹಸ್ಯಗಳ (ತಾತ್ವಿಕ) ಮೂರ್ತಿಸ್ವರೂಪನಾದ ಅನಂತಾಂಶಸಂಭೂತನಾಗಿರುವುದರಿಂದಲೂ ಈತನಿಗೆ ಸಾಧ್ಯವಾಗದ ಮಾನುಷ ಅಥವ ದೈವಿಕ ವಿದ್ಯೆಗಳೇ ಇಲ್ಲವು ಆದುದರಿಂದ ನಮ್ಮ ತ್ರಿಕಾಲಜ್ಞಾನಿಗಳಾದ ಗುರುವರ್ಯ ಶ್ರೀಯಾಮುನಾಚಾರ್ಯರ ಸಂದೇಶದಂತೆ, ಈ ಶಿಶುಸಾರ್ವಭೌಮನಿಗೆ 'ರಾಮಾನುಜ' ಎಂದು ನಾಮಕರಣ ಮಾಡತಕ್ಕುದು ಯುಕ್ತವಾಗಿದೆ" ಎಂದು ವಚಿಸಿ ಜಾತಕರ್ಮ ನಾಮಕರಣಾದಿ ಕ್ರಿಯೆಗಳನ್ನು ವಿಧ್ಯುಕ್ತರೀತಿಯಿಂದ ಶ್ರೀಕೇಶವಸೋಮಯಾಜಿಗಳ ಹಸ್ತದಿಂದ ನೆರವೇರಿಸಿ ಬ್ರಾಹ್ಮಣಸುವಾಸಿನೀವೃಂದವನ್ನು ದಿವ್ಯಭೋಜನ ದಕ್ಷಿಣೆ ತಾಂಬೂಲ ಗಂಧಾ ಪುಷ್ಪಾದಿಗಳಿಂದ ತೃಪ್ತಿಪಡಿಸಿ, ಶಿಶುವನ್ನು ಪುನಃ ಪುನಃ ಎತ್ತಿ

ಮುದ್ರಿಸಿ ಸಹಸ್ರಾಶೀರ್ವಾದಗಳಿಂದ ಹರಸಿ ಅಲ್ಲಿಂದ ಹೊರಟು ದಿವ್ಯಕ್ಷೇತ್ರ ವನ್ನು ಕುರಿತು ನಡೆದರು



## ಅಧ್ಯಾಯ ೨ "ಅಪಮೃತ್ಯುನಿವಾರಣೆ"

ಜೀವನು ವಾಸನಾವಶನು. ಎಂದರೆ ಯಾವ ಜೀವನಿಗೆ ಯಾವ ವಸ್ತುವಿನ ಮೇಲೆ ಅಧಿಕಾಪೇಕ್ಷೆಯಿರುವುದೋ ಅದನ್ನು ಅವನು ಹೊಂದಲು ಪ್ರಯತ್ನಿಸುವನು ಪ್ರಪಂಚದಲ್ಲಿ ಸದ್ವಸ್ತುಗಳೂ ದುಷ್ಟವಸ್ತುಗಳೂ ನಿಬಿಡವಾಗಿರುವುವು. ಪ್ರಾಣಿಗಳು ಸದ್ವಸ್ತುಗಳನ್ನು ಹೊಂದಲು ಆಸಕ್ತರಾಗಿ ಶ್ರಮಪಡತೊಡಗಿದಂತೆಲ್ಲ ಅವರ ವಾಸಸ್ಥಾನ ಗುಣನಡತೆ ಚೇಷ್ಟೆ ಮುಂತಾದುವುಗಳೆಲ್ಲವೂ ಉತ್ತಮಗೊಳ್ಳುವುವು. ಹಾಗೆಯೇ ಸುಳ್ಳು ಕಳವು ಜೂಜು ದುರಾಹಾರ ದುಷ್ಪಾನಾದಿಗಳನ್ನು ಅಭ್ಯಸಿಸಿದರೆ ಮೇಲ್ಕಂಡಂತೆಯೇ ಅವರ ವಾಸಸ್ಥಾನ ಗುಣನಡತೆ ಚೇಷ್ಟೆ ಸಂಭಾಷಣೆಗಳೆಲ್ಲವೂ ಸ್ವಾಭಾವಿಕವಾಗಿಯೇ ವ್ಯತ್ಯಸ್ತವಾಗುವುವು. ಮತ್ತು ಆಯಾಗುಣಗಳನ್ನು ಮೆಚ್ಚಿ ಆಪೇಕ್ಷಿಸುವ ವ್ಯಕ್ತಿಗಳೇ ''.......ಬೇವಂಸಾರ್ವುದುಕಾಕಂ ತಾವರೆಗೊಳನಂ ಮರಾಳನೆಯ್ದುವು ದೊಲವಿಂ॥'' ಎಂಬಂತೆ ತಮ್ಮ ತಮ್ಮ ಸಹಜಗುಣಗಳನ್ನು ಅನುಸರಿಸಿ ಅವರವರ ಸ್ನೇಹವನ್ನು ಹುಡುಕಿಕೊಂಡು ಬರುವರು. ಜನ್ಮಾಂತರೀಯ ಕರ್ಮಶೇಷದಿಂದ ಪುನರ್ಜನ್ಮ ಹೊಂದಲು ಸಿದ್ಧರಾಗಿರುವ ಜೀವರೂ ಹಾಗೆಯೇ, ತಾವು ಹಿಂದೆ ಭೂಮಿಯಲ್ಲಿ ಜೀವಿಸಿದ್ದಾಗ್ಗೆ ಉತ್ತಮ ವಸ್ತುಗಳನ್ನು ಬಯಸಿದ್ದ ಅಥವ ನೀಚ ವಸ್ತುಗಳಲ್ಲಿ ಆಸಕ್ತರಾಗಿದ್ದ ತಮ್ಮ ತಮ್ಮ ವಾಸನೆಯನ್ನನುಸರಿಸಿ ಆ ವಾಸನಾಬಲದಿಂದ ತಮ್ಮ ಈಗಿನ ಜನನಕ್ಕೂ ಅಂತಹ ವಾತಾವರಣವನ್ನೇ ಅಪೇಕ್ಷಿಸುವರು. ಭಗವದ್ಭಕ್ತನಾಗಿದ್ದ, ಶ್ರೋತ್ರಿಯನಾಗಿದ್ದ, ಪರೋಪಕಾರಪರಾಯಣನಾಗಿದ್ದ ಚೇತನನು ಕಳ್ಳರ ನೀಚರ ಮದ್ಯಮಾಂಸಾಹಾರಿಗಳ ಸಹವಾಸವನ್ನು ಎಂದಿಗೂ ಮೆಚ್ಚಲಾರನಲ್ಲವೆ? ಅಂತೆಯೇ ಕಳ್ಳ ನೀಚ ದುರಾಚಾರಿಗಳೂ, ಉದಾರಿಗಳ ಸಜ್ಜನರ ಭಗವದ್ಭಕ್ತರ ಗುಂಪನ್ನೂ ಅಪೇಕ್ಷಿಸರು. ಮತ್ತು ಆಯಾಗುಣದವರು ತಮ್ಮ ತಮ್ಮ ಜ

ನ್ಮಾಂತರೀಯ ವಾಸನಾಬಲದಿಂದ ಆಯಾಗುಣಗಳುಳ್ಳ ಮಾತಾಪಿತೃಗಳನ್ನೇ ತಮ್ಮ ಜನನಕ್ಕಾಗಿ ಆರಿಸಿಕೊಳ್ಳುವುದು ಸಹಜವಾಗಿದೆ. ಆದುದರಿಂದ ನಮ್ಮ ಕಥಾನಾಯಕರಂತಹ ಉತ್ತಮ ಚೇತನರನ್ನು ಆಕರ್ಷಿಸಿ ತಮ್ಮ ಮನೆಯಲ್ಲಿ ಉತ್ತಮ ಗುಣಮಂಡಿತರೂ, ಭಗವದ್ಭಕ್ತರೂ, ಮಹಾಮೇಧಾವಿಗಳೂ, ಪರೋಪಕಾರಪರಾಯಣರೂ ಆದ ಉತ್ತಮ ಸಂತಾನರು ಜನಿಸಬೇಕೆಂದು ಅಪೇಕ್ಷಿಸುವ ಮಾತಾಪಿತೃಗಳು ಮೊದಲು ತಮ್ಮ ಮನೆಯಲ್ಲಿ ಉತ್ತಮ ವಾತಾವರಣವನ್ನು ಕಲ್ಪಿಸಬೇಕು ಭಗವಧ್ಯಾನ ಸತ್ಕಥಾಶ್ರವಣ ಮನನಾದಿಗಳಿಂದ ದುಷ್ಟವಾತಾವರಣವನ್ನು ಹೊರಗಟ್ಟಬೇಕು. ಉತ್ತಮ ಆಹಾರ ಪಾನೀಯಗಳಿಂದಲೂ, ಸಂಭಾಷಣೆಸದಾಚಾರಗಳಿಂದಲೂ ತಮ್ಮ ಗುಣ ನಡತೆಗಳನ್ನು ತಿದ್ದಿಕೊಳ್ಳಬೇಕು ಹಾಗೆ ಶುದ್ಧವಾದ ಕುಟುಂಬಗಳಲ್ಲಿ ಉತ್ತಮ ಚೇತನರು ಜನ್ಮವೆತ್ತಿಯೇ ಎತ್ತುವರು ತನ್ಮೂಲಕ ದೇಶೋದ್ಧಾರವಾಗುವುದು

ಪ್ರಕೃತಿಸ್ಥಿತಿಯು ಹೀಗಿರುವಲ್ಲಿ ಭಗವದ್ಭಕ್ತರೂ ಪರಮಾಸ್ತಿಕರೂ ಪರೋಪಕಾರನಿರತರೂ ಆದ ಕೇಶವಸೋಮಯಾಜಿಗಳ ಮನೆಯಲ್ಲಿ ಹುಟ್ಟಿ ಬೆಳೆಯುತ್ತಿದ್ದ ಮಗುವಿನ ಅಭಿವೃದ್ಧಿ ವಿಷಯವನ್ನು ಹೇಳುವುದೇನು! ತನ್ನ ಬಗೆಬಗೆಯ ಬಾಲಲೀಲೆಗಳಿಂದ ತಾಯಿತಂದೆಯರಿಗೆ ಅಮಿತಾನಂದವನ್ನುಂಟುಮಾಡುವುದು, ತಂದೆಯು ಮಾಡುತ್ತಿದ್ದ ಶ್ರೀವೇಂಕಟೇಶಸ್ವಾಮಿಯ ಪೂಜೆ ಆರಾಧನೆಗಳನ್ನು ನೋಡುತ್ತಿದ್ದುದರಿಂದ ತಾನೂ ಪೂಜೆ ಮಾಡುತ್ತೇನೆಂದು ವೆಂಕಟೇಶನ ಪಟ-ವಿಗ್ರಹಾದಿಗಳನ್ನಿಟ್ಟುಕೊಂಡು ನಮಸ್ಕರಿಸುವುದು, ಎದ್ದು ಕೈಮುಗಿಯುವುದು, ಪ್ರದಕ್ಷಿಣೆ ಮಾಡುವುದು, ತನಗೆ ತಿನ್ನಲಿಕ್ಕೆಂದು ಕೊಟ್ಟಿದ್ದ ಪದಾರ್ಥಗಳನ್ನು ವಿಗ್ರಹವನ್ನುದ್ದೇಶಿಸಿ ನಿವೇದಿಸುವದು ಮುಂತಾದ ವಿವಿಧ ಆಟಗಳಿಂದ ಚಿಕ್ಕ ರಾಮಾನುಜನು ಮುಂದೆ ತಾನು ಮಾಡಲಿರುವ ಮಹತ್ಕಾರ್ಯಗಳೇನೆಂಬುದನ್ನು ಛಾಯಾ ರೂಪದಿಂದ ಚಿಕ್ಕತನದ ಆಟಪಾಟಗಳಿಂದಲೇ ಸೂಚಿಸುವಂತಿದ್ದನು ಅವುಗಳನ್ನೂ ಮಗುವಿನ ತೇಜಸ್ಸಿತಿಯನ್ನೂ ನೋಡಿ ಎಲ್ಲರೂ ಪರಮಾಶ್ಚರ್ಯಪಡುತ್ತಾ ಅಂತಹ ಪುತ್ರರತ್ನವನ್ನು ಪಡೆದ ಸೋಮಯಾಜಿಗಳ ಪುಣ್ಯಫಲವನ್ನು ಕುರಿತು ಅಭಿನಂದಿಸುತ್ತಿದ್ದರು.

ಕೇಶವಸೋಮಯಾಜಿಗಳು ಐದಾರು ವರ್ಷಗಳ ವಯಸ್ಕನಾದ ತಮ್ಮ ಮಗನಿಗೆ ಅಕ್ಷರಾಭ್ಯಾಸಕರ್ಮವನ್ನು ನೆರವೇರಿಸಿ ಬೋಧನೆಯನ್ನು ಪ್ರಾರಂಭಿಸಿದರು. ಅದ್ಭುತಮೇಧಾವಿಯಾದ ಆ ಬಾಲಕನು ಬಹು ಶೀಘ್ರಕಾಲದಲ್ಲೇ ಪ್ರಾರಂಭ ಪಾಠಗಳನ್ನೆಲ್ಲಾ ಮುಗಿಸಿ ಇನ್ನೂ ಎಂಟೊಂಬತ್ತು ವರ್ಷ ವಯಸ್ಕನಾಗುವ ವೇಳೆಗೇ ಸಂಸ್ಕೃತ ಸಾಹಿತ್ಯದಲ್ಲಿ ಪ್ರೌಢಪಾಠಗಳನ್ನಾರಂಭಿಸಿದನು. ಕಾವ್ಯನಾಟಕಾದಿ ಸಾಹಿತ್ಯಭಾಗಗಳನ್ನು ಲೀಲಾಜಾಲವಾಗಿ ಮುಗಿಸಿ ಬಿಟ್ಟನು ಅಷ್ಟರಲ್ಲಿ ಎಂಟನೆಯ ವರ್ಷದಲ್ಲೇ ಉಪನಯನ ಕರ್ಮವೂ ನೆರವೇರಿರಲು ಸೋಮಯಾಜಿಗಳು ರಾಮಾನುಜ ಬಾಲಕನಿಗೂ, ಮತ್ತು ಕಾಂತಿಮತೀದೇವಿಯ ತಂಗಿಯ ಮಗನಾದ ಗೋವಿಂದಭಟ್ಟನಿಗೂ, ವೇದ-ಶಾಸ್ತ್ರ ಪಾಠಗಳನ್ನು ಒಟ್ಟಿಗೇ ಪ್ರಾರಂಭಿಸಿದರು ಇಬ್ಬರೂ ಉತ್ತಮ ವಿದ್ಯಾರ್ಥಿಗಳೇ ಆಗಿದ್ದರೂ ರಾಮಾನುಜರಿಗೆ ಮಾತ್ರ ಒಂದೇ ಒಂದು ಸಾರಿ ಚಿಂತನೆ ಮಾಡುವುದರಲ್ಲಿ ಪ್ರತಿಯೊಂದು ಗ್ರಂಥವೂ ಪ್ರತಿಯೊಂದು ಶಾಸ್ತ್ರವೂ ಅದರ ರಹಸ್ಯಾರ್ಥಗಳೊಡನೆ ಹೃದ್ಗತವಾಗಿ ಹೋಗುವುದು. ಹೀಗಾಗಿ ಹದಿನಾರು ವರ್ಷ ವಯಸ್ಸಾಗುವ ವೇಳೆಗೆ ವೇದಗಳು ವೇದಾಂಗಗಳು ಉಪನಿಷತ್ತುಗಳು ಮುಂತಾದ ಆಸ್ತಿಕ ಗ್ರಂಥಪಾಠಗಳನ್ನೆಲ್ಲಾ ಮುಗಿಸಿ, ಆದರೂ ಜ್ಞಾನಾರ್ಜನಾ ತೃಷ್ಣೆಯು ತೀರದಿರಲು ಮುಂದೇನು ಮಾಡಬೇಕೆಂದು ಯೋಚಿಸುತ್ತಿದ್ದರು.

ಆ ಕಾಲದಲ್ಲಿ ಶ್ರೀಕಾಂಚೀಪುರದಲ್ಲಿ ಯಾದವ ಪ್ರಕಾಶರೆಂಬೊಬ್ಬ ಅದ್ವೈತಿ ಸನ್ಯಾಸಿಗಳು ಅತ್ಯಂತ ಹೆಸರುವಾಸಿಯನ್ನು ಹೊಂದಿದ್ದರು. ಅವರಲ್ಲಿ ಅನೇಕ ಮಂದಿ ವಿದ್ಯಾರ್ಥಿಗಳು ವೇದಾಂತ ಪಾಠಕ್ಕಾಗಿ ಬಂದು ಸೇರಿದ್ದರು. ಆ ಸಂಗತಿಯನ್ನು ಕೇಳಿ ರಾಮಾನುಜರೂ ಗೋವಿಂದಭಟ್ಟರೂ ಪೆರುಂಬುದೂರಿನಿಂದ, ಮಾತಾಪಿತೃಗಳಿಂದ ಅಪ್ಪಣೆಯನ್ನು ಪಡೆದು ಹೊರಟು ಯಾದವಪ್ರಕಾಶರ ಆಶ್ರಮವನ್ನು ಸೇರಿದರು. ಯಾದವಪ್ರಕಾಶರು ವೇದಾಂತ ಗ್ರಂಥಗಳಿಗೆ ಅದ್ವೈತಸಿದ್ಧಾಂತ ರೀತ್ಯಾ ವಿವರಣೆಯನ್ನು ಹೇಳುತ್ತಿದ್ದರು. ವಿದ್ಯಾರ್ಥಿಗಳೆಲ್ಲರೂ ಗುರುಗಳ ವಿವರಣೆ ವಿಶೇಷಾರ್ಥಗಳನ್ನು ಬರೆದುಕೊಂಡು ಗಟ್ಟಿಮಾಡಿ ಒಪ್ಪಿಸುತ್ತಿರಲು, ರಾಮಾನುಜರು ಮಾತ್ರ ಗುರುಗಳು ಕೊಡುವ ವಿವರಣೆಯು ಮೂಲದೊಂದಿಗೆ ಅರ್ಥಸಾಮಂಜಸ್ಯವನ್ನು ಹೊಂದು

ವುದೇ ಇಲ್ಲವೇ ಎಂದು ವಿಚಾರಮಾಡಿ ಕೆಲಕೆಲವು ವೇಳೆ ತಮ್ಮ ಗುರುಗಳು ಕೊಡುತ್ತಿದ್ದ ಪಾಠವು ಸರಿಯಾಗಿಲ್ಲದುದನ್ನು ಮನಗಂಡರು ಕೆಲವು ದಿನಗಳು ಪ್ರತಿಯಾಗಿ ಹೇಳಲು ಸಂಕೋಚಪಟ್ಟು ತಡೆದರೂ ಹಾಗೆ ಬಹು ದಿನಗಳು ತಡೆದು ಸುಮ್ಮನಿರಲು ಸಾಧ್ಯವಾಗಲಿಲ್ಲ. ಒಂದಾನೊಂದುದಿನ ತೈತ್ತಿರೀಯೋಪನಿಷತ್ತಿನಲ್ಲ "ಸತ್ಯಂ ಜ್ಞಾನ ಮನಂತಂ ಬ್ರಹ್ಮ" ಎಂಬ ಅನುವಾಕವನ್ನು ವಿವರಿಸುವಾಗ ಯಾದವಪ್ರಕಾಶರು "ಸತ್ಯವು ಅಸತ್ಯವಾದ ವಸ್ತುವಿನಿಂದ ಬೇರೆಯಾದುದೆಂದೂ ಜ್ಞಾನವು ಜಡವಸ್ತುವಿನಿಂದ ಬೇರೆಯಾದುದೆಂದೂ ಅನಂತಪದವು ದೇಶಕಾಲಗಳಿಂದ ನಿರ್ದೇಶಿಸಲಾಗುವ ವಸ್ತುವಿನಿಂದ ಬೇರೆಯಾದುದೆಂದೂ ತಿಳಿಸುತ್ತದೆ, ಅದೇ ಬ್ರಹ್ಮವು. ಮತ್ತೇನೂ ವಿಶೇಷವಿಲ್ಲ" ಎಂಬ ಧ್ವನಿಯನ್ನು ಕೊಟ್ಟರು ಬೇರೇ ಶಿಷ್ಯರೆಲ್ಲರೂ ಅದನ್ನು ಒಪ್ಪಿಕೊಂಡು ಸುಮ್ಮನಿರಲು, ರಾಮಾನುಜರು ಮಾತ್ರ ಅದನ್ನು ಒಪ್ಪದೆ ವಿನಯಶೀಲರಾಗಿ ಎದ್ದು ನಿಂತು, "ಈ ವಾಕ್ಯದಲ್ಲಿ ಮತ್ತಾವ ಸಂಶಯಕ್ಕೂ ಆಸ್ಪದವಿಲ್ಲದೆ ಬ್ರಹ್ಮವು ಸತ್ಯವೂ ಜ್ಞಾನವೂ ಅನಂತವೂ ಆಗಿದೆ ಯೆಂದು ಸ್ಪಷ್ಟಾರ್ಥವು ಹೊಳೆಯುತ್ತಿದೆ ಪರಸ್ಪರ ವಿರುದ್ಧಗಳಾದ ಧರ್ಮಗಳು ಒಂದು ವಸ್ತುವಿನಲ್ಲಿ ಏಕಕಾಲದಲ್ಲಿರಲಾರವೇ ವಿನಹ ಅವಿರೋಧವಾದ ಅನೇಕ ಧರ್ಮಗಳು ಸೇರಿರುವುದು ಸ್ವಾಭಾವಿಕವಾಗಿದೆ! ಒಂದೇ ಹೂವಿನಲ್ಲಿ ಏಕಕಾಲದಲ್ಲೇ ಬಣ್ಣವೂ ಮಾರ್ದವವೂ ಸುವಾಸನೆಯೂ ಕೂಡಿಕೊಂಡಿರುವಂತೆಯೇ ಬ್ರಹ್ಮನಲ್ಲೂ ಸತ್ಯ ಜ್ಞಾನ ಅನಂತ ಗುಣಗಳು ಏಕತ್ರವಿವೆ ಯೆಂದೂ, ಬ್ರಹ್ಮನು ಶಾಶ್ವತನೆಂಬುದನ್ನು ಸತ್ಯಪದವೂ, ಸರ್ವಶಕ್ತನೂ ಸರ್ವಜ್ಞನೂ ಎಂಬುದನ್ನು ಜ್ಞಾನಪದವೂ, ದೇಶಕಾಲಗಳಿಂದ ಅವಧಿಯನ್ನು-ಪರಿಮಿತಿಯನ್ನು ಹೊಂದದವನೆಂಬುದನ್ನು ಅನಂತಪದವೂ ತಿಳಿಸುತ್ತದೆಂದೂ" ಪ್ರತಿಪಾದಿಸಿದರು. ತಮ್ಮನ್ನು ಹೀಗೆ ಪ್ರತಿಭಟಿಸಿದ ಶಿಷ್ಯರಾದ ರಾಮಾನುಜರ ಮೇಲೆ ಗುರುಗಳಿಗೆ ಸ್ವಾಭಾವಿಕವಾಗಿಯೇ ಕೋಪವುಂಟಾಯಿತು.

ಮತ್ತೊಂದು ಸಾರಿ ಯಾದವಪ್ರಕಾಶರು ತೈಲಾಭ್ಯಂಜನವಾಗಬೇಕೆಂದು ಅಪೇಕ್ಷಿಸಿದರು. ಮಹಾ ಗುರುಭಕ್ತರಾದ ಶ್ರೀರಾಮಾನುಜರೇ ಎಣ್ಣೆ ಯೊತ್ತಲು ನಿಂತರು. ಸಂಭಾಷಣೆಯು ಸ್ವಾಭಾವಿಕವಾಗಿ ಶಾಸ್ತ್ರಾರ್ಥದ ಕಡೆಗೆ ಹೊರಳಿತು ಗುರುಗಳು ಛಾಂದೋಗ್ಯೋಪನಿಷತ್ತಿನ "ತಸ್ಯಯಥಾ

ಕಪ್ಯಾಸಂ ಪುಂಡರೀಕ ಮಿವಮೇಕ್ಷಿಣೀ" ಎಂಬೊಂದು ವಾಕ್ಯವನ್ನು ಟೀಕಿಸು ತ್ತಾ "ಭಗವಂತನ ಎರಡು ಕಣ್ಣುಗಳೂ ಕಪಿಯ ಪೃಷ್ಠಗಳಂತೆ ಕೆಂಪಾಗಿವೆ" ಎಂಬರ್ಥವನ್ನು ಹೇಳಿದರು. ಈ ಮಾತನ್ನು ಕೇಳಿದೊಡನೆಯೇ ಭಗವದ್ಭಕ್ತ ಶ್ರೇಷ್ಠರಾದ ರಾಮಾನುಜರ ಎದೆಯಲ್ಲಿ ಸಹಸ್ರ ಶಸ್ತ್ರಗಳನ್ನು ಏಕಕಾಲದಲ್ಲಿ ತಿವಿದಂತೆ ಯಾತನೆಯಾಯಿತು. ಸಹಿಸಲಾಗದಷ್ಟು ದುಃಖವುಂಟಾಗಲು, ತಡೆಯಲು ಸಾಧ್ಯವಾಗದೆ ಕಣ್ಣುಗಳಿಂದ ಜಲಧಾರೆಯು ಹೊರಟು ಎಣ್ಣೆಯ ನ್ನೊತ್ತಿಸಿಕೊಳ್ಳುತ್ತಾ ಕುಳಿತಿದ್ದ ಯಾದವಪ್ರಕಾಶರ ತೊಡೆಯ ಮೇಲೆ ಬಿತ್ತು. ಬಿಸಿಸೀರಿನ ಹನಿಗಳು ಎಲ್ಲಿಂದ ಬಂದುವೆಂದು ಗುರುಗಳು ಕಣ್ಣೆತ್ತಿ ನೋಡಿ, ಕೆಂಡದಂತೆ ಕೆಂಪಾಗಿದ್ದ ರಾಮಾನುಜರ ಕಣ್ಣುಗಳನ್ನೂ ಅವುಗಳಿಂದ ಅವಿರಳವಾಗಿ ಸುರಿಯುತ್ತಿದ್ದ ಜಲಧಾರೆಯನ್ನೂ ಕಂಡು ಕಾರಣವೇನೆಂದು ವಿಚಾರಿಸಿದರು. ಆಗ ರಾಮಾನುಜರು ಮಹಾಕೋಪಾಕ್ರಾಂತರಾಗಿದ್ದರೂ ವಿನಯಶೀಲತೆಯನ್ನು ಬಿಡದೆ, "ವೇದಗಳು ಅಪೌರುಷೇಯವಾದುವು. ಅವು ಭಗವಂತನ ಕಲ್ಯಾಣಗುಣಗಳನ್ನು ಕೊಂಡಾಡುತ್ತವೆ. ನಿರ್ಗುಣ ಪರಬ್ರಹ್ಮನು ಹೇಯಗುಣವರ್ಜಿತನೆಂದೂ ಸರ್ವಮಂಗಳ ಸ್ವರೂಪನೆಂದೂ ವೇದವಾಕ್ಯಗಳು ವರ್ಣಿಸುತ್ತವೆಯಲ್ಲದೆ ಇಂತಹ ಅಸಹ್ಯ ವಾಕ್ಯಗಳನ್ನೆಂದಿಗೂ ಹೇಳುವುದಿಲ್ಲ. ತಾವು ಸಹ ಇದನ್ನು ವಿಚಾರಿಸದೆ ವೇದವಾಕ್ಯಗಳಿಗೆ ಈರೀತಿ ಅಪಾರ್ಥಗಳನ್ನು ಕಲ್ಪಿಸುವುದನ್ನು ಕಂಡು ಮಹತ್ಸಂಕಟವಾಗುತ್ತದೆ" ಎಂದರು. ತಮ್ಮ ಶಿಷ್ಯನೇ ಮೇಲ ಮೇಲೆ ಹೀಗೆ ತಮ್ಮನ್ನು ಕುರಿತು, ಆಕ್ಷೇಪಿಸುತ್ತಿದ್ದುದನ್ನು ಕಂಡು ಯಾದವಪ್ರಕಾಶರ ದೇಹನಾದ್ಯಂತವೂ ಕೋಪಾಗ್ನಿಯಿಂದ ಕಾಯ್ದು ಹೋಯಿತು. ಆಗಲವರು, ಗುಡುಗಿನಂತೆ ಘುಡಿಘುಡಿಸುವ ಮಾತುಗಳಿಂದ ರಾಮಾನುಜರು ಶಿಷ್ಯರೆಂಬುದನ್ನೂ ಅವರಲ್ಲಿ ಗುರುಗಳಾದ ತಾವು ಆರೀತಿ ವರ್ತಿಸಬಹುದೇ ಎಂಬುದನ್ನೂ ಗಮನಿಸದೆ "ಓ ಪಂಡಿತಶ್ರೇಷ್ಠರೇ, ತಮ್ಮ ದಿವ್ಯಜ್ಞಾನದಿಂದ ಆ ವಾಕ್ಯಕ್ಕೆ ಯುಕ್ತಾರ್ಥವನ್ನು ಅಪ್ಪಣೆ ಕೊಡಿಸೋಣವಾಗಲಿ. ತಮ್ಮ ಭೃತ್ಯಾಭೃತ್ಯರಾದ ನಾವು ಪಾದಸನ್ನಿಧಿಯಲ್ಲಿ ಕುಳಿತು ಕಲಿತುಕೊಳ್ಳುತ್ತೇವೆ" ಎಂದು ನುಡಿದರು. ಆಗ ರಾಮಾನುಜರು ಗುರುಶಿಷ್ಯ ಮರ್ಯಾದೆಯ ಮೇರೆಯನ್ನು ಮೀರಿದ ತಮ್ಮ ಗುರುವಿನ ಆ ಕಟುವಾಕ್ಯವನ್ನು ಲಕ್ಷಿಸದೆ—"ಈ ವಾಕ್ಯಕ್ಕೆ

ಆದಿತ್ಯ ಮಂಡಲಾಂತರ್ವರ್ತಿಯಾದ ಸ್ವರ್ಣವರ್ಣನಾದ ಶ್ರೀಮನ್ನಾರಾಯಣನ ನೇತ್ರಗಳು ಸೂರ್ಯೋದಯದಿಂದ ವಿಕಸಿತವಾಗುವ ಕಮಲದಳಗಳಂತೆ ಪ್ರಕಾಶಮಾನವಾಗಿಯೂ ಸುಂದರವಾಗಿಯೂ ಇವೆ, ಎಂದು ಅರ್ಥವಾಗುತ್ತದೆ'' ಎಂಬದಾಗಿ ಸಕಾರಣವಾಗಿ ತಕ್ಕ ಸಮಾಧಾನಾರ್ಥಗಳೊಂದಿಗೆ ವಿವರಿಸಿದರು. ಆ ವಿವರಣೆಯು ಅಲ್ಲಿದ್ದ ಎಲ್ಲರಿಗೂ ಸಮಂಜಸವೆಂದು ತೋರಿತು. ಯಾದವಪ್ರಕಾಶರೂ ಅದು ಯುಕ್ತವಾದುದೆಂದುಕೊಂಡರು. ಆದರೂ ಸ್ವಾಭಿಮಾನ ಪಿಶಾಚಗ್ರಸ್ತರಾದುದರಿಂದ ತಮಗಾದ ಅಪಮಾನವನ್ನು ಸಹಿಸಲಾರದ-ತಪ್ಪನ್ನು ಒಪ್ಪಿಕೊಳ್ಳುವಷ್ಟು ಸಹನೆಯಿಲ್ಲದಿರಲು, ತಮ್ಮ ಪ್ರತಿಭಾಶಾಲಿಯಾದ ಶಿಷ್ಯನನ್ನು ಕುರಿತು ''ತಾವು ನಮ್ಮ ವಿದ್ಯಾಲಯದಲ್ಲಿ ಕಲಿಯಬೇಕಾದುದೇನೂ ಇಲ್ಲ. ಪಂಡಿತರೇ ಇಲ್ಲಿಂದ ದಯಮಾಡಿಸಬಹುದು. ತಮಗೆ ಬೋಧಿಸುವ ಯೋಗ್ಯತೆಯು ನನಗಿಲ್ಲ'' ಎಂದು ನುಡಿದರು. ರಾಮಾನುಜರೂ ತತ್ಕಾಲಕ್ಕೆ ಅದೇ ಉತ್ತಮವಾದ ಮಾರ್ಗವೆಂದು ತಿಳಿದು ಅಲ್ಲಿಂದ ಹೊರಹೊರಟರು.

ಲೋಕದಲ್ಲಿ ಗಣನೆಗೆ ಬರತಕ್ಕದು ಕೇವಲ (ಅಕ್ಷರ) ವಿದ್ಯೆ ಮಾತ್ರವಲ್ಲ. ವಿದ್ಯೆಯೊಂದಿಗೆ ಕಲೆತ ಸದ್ಗುಣಸದಾಚಾರಗಳು! ಯಾದವಪ್ರಕಾಶರ ಅಪ್ರತಿಹತ ಪಾಂಡಿತ್ಯವೂ, ಈ ಸಂದರ್ಭದಲ್ಲಿ ಅವರ ಬುದ್ಧಿಯು ವಕ್ರಮಾರ್ಗಕ್ಕೆಳೆಯಲ್ಪಟ್ಟುದನ್ನು ತಡೆಯದಿದ್ದುದು ಶೋಚನೀಯ ವಿಚಾರವು. ತಮ್ಮ ಶಿಷ್ಯನು ತಮ್ಮನ್ನು ತನ್ನ ಸ್ವಸ್ಥಾನದಲ್ಲೇ ಹೀಗೆ ಪ್ರತಿಭಟಿಸಿ ಪರಾಜಯಗೊಳಿಸಿದುದನ್ನು ಕುರಿತು ಅವರು, ''ಇವನು ಮುಂದೆ ಜೀವಿಸಿ ಇನ್ನೂ ಪಂಡಿತನೂ ಪ್ರತಿಭಾಸ್ವಿತನೂ ಆದರೆ ತಮಗೆ ಪರಿಣಾಮ ತೋರುವುದಿಲ್ಲವಾದುದರಿಂದ ಇವನನ್ನು ಬದುಕಲೀಸದಿರುವುದೇ ತಮ್ಮ ರಕ್ಷಣೆಗೆ ಉಪಾಯವೆಂದು'' ಹೇಳಿಕೊಂಡರು. ಕೆಲಮಂದಿ ಶಿಷ್ಯರೂ ಅದನ್ನು ಅನುಮೋದಿಸಿದರು. ಅದನ್ನು ಸಾಧಿಸುವ ಮಾರ್ಗವಾವುದೆಂಬುದನ್ನು ನಿರ್ಧರಿಸುವುದಕ್ಕಾಗಿ ಕೆಲಕಾಲ ಕಳೆಯಿತು. ಅಷ್ಟರಲ್ಲಿ ರಾಮಾನುಜರನ್ನು ತಮ್ಮ ಗುಂಪಿನಿಂದ ಹೊರಕ್ಕೆ ಬಿಟ್ಟರೆ ಆ ಕೆಲಸವನ್ನು ಸಾಧಿಸಲಾಗುವುದಿಲ್ಲವಾದುದರಿಂದ ಅವರನ್ನು ಹಿಂದಿರುಗಿ ಕರೆತರಲು, ಕೆಲಮಂದಿ ಶಿಷ್ಯರು ಅವರನ್ನು ಕಂಡು, ಗುರುಗಳಲ್ಲಿಗೆ ಬರಬೇಕೆಂದರು. ರಾಮಾನುಜರೂ ಪ್ರತಿಹೇಳಲಿಲ್ಲ. ನೇರವಾಗಿ

ಬಂದು ಗುರುಗಳಿಗೆ ವಂದಿಸಿದರು. ಯಾದವಪ್ರಕಾಶರೂ ಶುಷ್ಕಪ್ರೇಮ ವನ್ನು ತೋರಿಸುತ್ತಾ "ಅಪ್ಪಾ ಏನೋ ಬುದ್ಧಿ ಸ್ವಾಧೀನವಿಲ್ಲದ ಮುದುಕ ನು ಕೋಪದಿಂದ ನುಡಿದ ಒಂದೆರಡು ಮಾತುಗಳಿಗಾಗಿ ಕೋಪಿಸಿಕೊಳ್ಳದಿರು ನಿನ್ನನ್ನು ಬಿಟ್ಟಿರುವುದು ಇಷ್ಟು ಮಟ್ಟಿಗೆ ಅಸಾಧ್ಯ ತೋರುವುದೆಂದು ನಾನು ತಿಳಿದಿರಲಿಲ್ಲ" ಎಂದು ನುಡಿದರು ಕೆಲಕಾಲ ಸಮಾಧಾನದಿಂದಲೇ ಕಳೆ ಯಿತು.

ಒಂದಾನೊಂದುದಿನ ಯಾದವಪ್ರಕಾಶರು ತಮ್ಮ ಶಿಷ್ಯರನ್ನು ಸಮೀಪ ಕ್ಕೆ ಕರೆದು—"ಶಿಷ್ಯೋತ್ತಮರಿರಾ ನಾನು ವೃದ್ಧನಾದೆನು ಅಂತ್ಯಕಾಲವು ಸಮೀಪಿಸುತ್ತಿದೆ ಈ ನನ್ನ ಕೊನೆಗಾಲವನ್ನು ಪವಿತ್ರ ಗಂಗಾಮಾತೆಯ ತೀ ರದಲ್ಲಿ ಕಳೆದು ಸದ್ಗತಿಯನ್ನು ಹೊಂದಬೇಕೆಂಬ ಅಪೇಕ್ಷೆಯೊಂದು ಬಾಧಿಸು ತ್ತಿದೆ" ಎಂದು ನುಡಿದರು. ಒಡನೆ ಮಹಾ ಯಾತ್ರೆಗೆ ಪ್ರಯಾಣ ಸೌಕ ರ್ಯಗಳು ಸಿದ್ಧಗೊಳಿಸಲ್ಪಟ್ಟುವು. ಆ ಗುಂಪಿನೊಂದಿಗೆ ರಾಮಾನುಜರೂ- ಗೋವಿಂದಭಟ್ಟರೂ ಹೊರಡದಿರಲಿಲ್ಲ ಮಾರ್ಗದಲ್ಲಿ ರಾಮಾನುಜರನ್ನು ತೀ ರಿಸುವಿಕೆಯ ಪ್ರಯತ್ನದಲ್ಲಿ ತೊಡಗಿದ್ದ ಇತರ ಕೆಲ ಶಿಷ್ಯರು ಅವರ ವಿಷಯದಲ್ಲಿ ತೋರಿಸುತ್ತಿದ್ದ ಪ್ರೀತಿವಿಶ್ವಾಸ ಆದರಣೆಗಳಿಗೆ ಕೊನೆಮೊದಲಿರಲಿಲ್ಲ ಅವರ ಆಹಾರ ನಿದ್ರಾ, ಸ್ನಾನಪಾನ, ಕೊನೆಗೆ ಮಲಮೂತ್ರ ವಿಸರ್ಜನಾದಿ ವೇಳೆ ಗಳಲ್ಲಿ ಕೂಡ ಬೆನ್ನಟ್ಟಿದ್ದು ಗೋವಿಂದಭಟ್ಟರು ಅವರಿಗೆ ತಮ್ಮ ಗುಪ್ತೋದ್ದೇ ಶದ ಸುಳಿವನ್ನಾದರೂ ತಿಳಿಸಲು ಅವಕಾಶ ಸಿಕ್ಕದಂತೆ ಮಾಡಿಬಿಟ್ಟರು. ಕೆ ಲವು ದಿನಗಳ ಪ್ರಯಾಣವು ಸಾಗಿ ಎಲ್ಲರೂ ವಿಂಧ್ಯಾಟವಿಯ ಮಧ್ಯಭಾಗಕ್ಕೆ ಬಂದರು. ಶ್ರೀರಾಮಾನುಜರಿಗೆ ಅವರ ದುರಾಲೋಚನೆಯ ಗಂಧವೂ ತಿಳಿ ಯದೆ ಇದ್ದರೂ, ಯಾತ್ರೆಯ ಒಳ ಮರ್ಮವನ್ನು ತಿಳಿದಿದ್ದ ಗೋವಿಂದಭಟ್ಟ ರು, ಹೇಗಾದರೂ ಅವರನ್ನು ಈ ಆಪತ್ತಿನಿಂದ ಕಾಪಾಡಬೇಕೆಂದು ಎಣಿಸಿಕೊಂ ಡಿದ್ದರು. ಹೀಗಿರುವಲ್ಲಿ ಒಂದು ಅನುಕೂಲ ಸಂದರ್ಭವೂ ದೊರೆಯಿತು. ಒಂದು ದಿನ ರಾತ್ರೆ ಕೊನೆಯ ಜಾಮದಲ್ಲಿ ರಾಮಾನುಜರು ಹಾಸಿಗೆಯಿಂದ ಎದ್ದು ಬಹಿಶ್ಶಂಕೆಗಾಗಿ ಹೊರಹೊರಟರು. ಅವರಿಗುಂಟಾಗಿದ್ದ ಅಪಾಯದ ಚಿಂತೆಯಲ್ಲೇ ರಾತ್ರೆಯೆಲ್ಲಾ ನಿದ್ರೆಯಿಲ್ಲದೆ ವ್ಯಥಪಡುತ್ತಿದ್ದ ಗೋವಿಂದಭ ಟ್ಟರೂ ಒಡನೆ ಎದ್ದು ಅವರಿಗೆ ತಿಳಿಯದಂತೆ ಹಿಂದೆಯೇ ನಡೆದು ಬಂದು, ಬೇ

ರೆ ಜನಗಳ ದೃಷ್ಟಿಗೆ ಮರೆಯಾದಷ್ಟು ದೂರ ಬಂದ ತರುವಾಯ, ಶೀಘ್ರ ವಾಗಿ ನಡೆದು ಅವರ ಸಮೀಪವನ್ನು ಸೇರಿ ಹಿಂದಿನಿಂದ ಅವರ ಭುಜವನ್ನು ಮುಟ್ಟಿದರು ರಾಮಾನುಜರು ಬೆದರಿ ಬಿದ್ದು ಹಿಂದಿರುಗಿ ನೋಡಿ ತಮ್ಮ ಪ್ರಿಯಭ್ರಾತೃವನ್ನು ಕಂಡು ಆಶ್ಚರ್ಯಚಕಿತರಾಗಲು, ಆಗ ಭಟರು 'ಅಣ್ಣಯ್ಯಾ ನಾವಿಬ್ಬರೂ ಇನ್ನು ಬಹು ದಿನಗಳು ಒಟ್ಟಿಗಿರುವಂತಿಲ್ಲ ಆ ಕಪಟ ಗುರುವೂ ಈ ಘಾತುಕ ಶಿಷ್ಯರೂ ನಿನ್ನನ್ನು ಗಂಗಾನದಿಯ ಮಧ್ಯದ ಮಡುವಿನಲ್ಲಿ ಮುಚ್ಚಿಡಲೋಸುಗವೇ ಈ ಯಾತ್ರೆಯ ಪ್ರಯತ್ನ ಮಾಡಿರುವರು. ಇಲ್ಲಿಂದ ನೀನೀಗ ಇರುವಂತೆಯೇ ಹೊರಟು ಎಲ್ಲಿಯಾದರೂ ಜೀವನನ್ನು ದಕ್ಕಿಸಿಕೋ! ನಾನು ಅವರೊಂದಿಗಿದ್ದು ನಿನ್ನ ವಿಷಯದಲ್ಲಿ ದುರಭಿಪ್ರಾಯ ವುಂಟಾಗದಂತೆ ನೋಡಿಕೊಳ್ಳುತ್ತೇನೆ. ಹೊರಡು, ನಿನಗೆ ದೈವಸಹಾಯ ವಾಗಲಿ'' ಎಂದು ನುಡಿದು ಅಲ್ಲಿಂದ ಹೊರಟು ನಡೆದು ಆ ಗುಂಪಿನವರೊಂದಿಗೆ ಕಲೆತರು.

ರಾಮಾನುಜರು ಭಯಂಕರವಾದ ಆ ಅರಣ್ಯಮಧ್ಯದಲ್ಲಿ ಮುಂದೆ ಹೋಗಲು ಮಾರ್ಗ ತೋರದೆ, ಚಿಂತಾಕ್ರಾಂತರಾಗಿ, ಆದರೆ ಪ್ರಾಣಭಯವು ಬಾಧಿಸುತ್ತಿರಲು, ಆ ಕತ್ತಲೆಯಲ್ಲೇ ಕಾಲುಗಳು ಕೊಂಡೊಯ್ದಂತೆಲ್ಲಾ ನಡೆದು ಅಲ್ಲಿ ಬಿಪ್ಪಿಲ್ಲಿ ಬಿದ್ದು, ಕಲ್ಲು ಮುಳ್ಳುಗಳನ್ನು ತುಳಿದು, ಕಾಲೊಡೆದು ರಕ್ತವು ಚಿಲ್ಲನೆ ಹೊರಚಿಮ್ಮುತ್ತಿರಲು, ಬಟ್ಟೆಗಳು ಹರಿದು-ಮೈ ತರಿದು ಗಾಯಗಳಾಗಿರಲು, ಹಸಿವು ಬಾಯಾರಿಕೆ ಬಳಲಿಕೆಗಳಿಂದ ಕುಗ್ಗಿರಲು, ಕಣ್ಣುಗಳು ಕತ್ತಲಿಟ್ಟಂತಾಗಿ ಮಾರ್ಗವು ತೋರದೆ ಒಂದು ಮರದಡಿಯನ್ನು ಸೇರಿ, ನಿಲ್ಲಲರಿಯದೆ-ಕುಳಿತುಕೊಳ್ಳಲೂ ತ್ರಾಣವಿಲ್ಲದೆ ಮರವೆ ಬಂದಂತಾಗಿ ಪರಮಾಸ್ತಿಕ ಶಿರೋಮಣಿಗಳೂ ಭಕ್ತಶ್ರೇಷ್ಠರೂ ಆದುದರಿಂದ ಆ ವೇಳೆಯಲ್ಲಿ ಭಗವಂತನಲ್ಲದೆ ತಮ್ಮನ್ನು ಕಾಪಾಡುವವರು ಬೇರೆಯಾರೂ ಇಲ್ಲವೆಂದು ಬಗೆದು, ಎರಡು ಕೈಗಳನ್ನೂ ಜೋಡಿಸಿ ''ಓ ಕರುಣಾನಿಧೇ, ಅನಾಥಬಾಂಧವಾ, ನೀನಲ್ಲದೆ ಈ ವೇಳೆಯಲ್ಲಿ ನನ್ನನ್ನು ಸಂರಕ್ಷಿಸುವ ಶಕ್ತರು ಮತ್ತಾರೂ ಇಲ್ಲ. ಪ್ರಭೋ, ದೀನಬಂಧೋ, ನಾನು ಮಾತೃಗರ್ಭದಲ್ಲಿದ್ದಾಗ ಅವ್ಯಾಜಕೃಪಾಪರಿಪೂರ್ಣತೆಯಿಂದ ರಕ್ಷಿಸಿದ ನಿನ್ನನ್ನೇ ಈಗಲಾದರೂ ನಂಬಿದ್ದೇನೆ. ನಿನ್ನ ಸಂಕಲ್ಪವಿದ್ದಂತಾಗಲಿ'' ಎಂದು ನುಡಿದರು. ಒಡನೆ ಮರವೆಯುಂಟಾಯಿತು. ನೆಲದಮೇಲೆ ಬಿದ್ದುಬಿಟ್ಟರು.

ಕೆಲ ಹೊತ್ತಿನಮೇಲೆ ತಂಗಾಳಿಯು ಬೀಸಲು ಎಚ್ಚರವಾಯಿತು ಆ ವೇಳೆಗೆ ಬೇಡರ ವೇಷದಲ್ಲಿದ್ದ ದಂಪತಿಗಳಿಬ್ಬರು ತಮ್ಮ ಪಕ್ಕದಲ್ಲಿ ಕುಳಿತು ಉಪಚರಿಸುತ್ತಿದ್ದುದು ರಾಮಾನುಜರಿಗೆ ಪರಮಾಶ್ಚರ್ಯವನ್ನುಂಟುಮಾಡಿತು ಅವರ ಮುಖಸೌಂದರ್ಯವೂ ನೋಟದ ಸೌಮ್ಯತೆಯೂ ಅತ್ಯಂತ ಆಕರ್ಷಕವಾಗಿದ್ದುವು. ರಾಮಾನುಜರ ಮನಸ್ಸಿನಲ್ಲಿ ಎಂದೂ ಅನುಭವಿಸಿರದ ಒಂದು ಬಗೆಯ ಅಪೂರ್ವ-ಅನಿರ್ವಚನೀಯ ಆನಂದವು ಆ ದಂಪತಿಗಳನ್ನು ಕಂಡೊಡನೆಯೇ ತಲೆದೋರಿತು ಆಯಾಸ ಹಸಿವು ಬಾಯಾರಿಕೆ ಬಳಲಿಕೆಗಳು ನೀಗಿದಂತಾಗಿ ದೇಹದಲ್ಲಿ ಒಡನೆ ಶಕ್ತಿ ಬಂದಂತಾಯಿತು ಮೇಲಕ್ಕೆದ್ದು ಕುಳಿತರು. ಮತ್ತು ಹಸನ್ಮುಖದಿಂದ, ಸ್ವರ್ಗೀಯ ವ್ಯಕ್ತಿಗಳಂತೆ ಕಾಣುತ್ತಿದ್ದ ಅವರನ್ನು ಕುರಿತು "ಓ ಆಪದ್ಬಾಂಧವರೇ ನೀವಾರು! ನಿಮ್ಮ ಸ್ಥಳವಾವುದು! ಎಲ್ಲಿಗೆ ಪ್ರಯಾಣ ಮಾಡುತ್ತಿದ್ದೀರಿ!" ಎಂದು ಪ್ರಶ್ನಿಸಿದರು ಆ ಮಾತನ್ನು ಕೇಳಿದ ಆ ದಂಪತಿಗಳು, ಮೃದುಮಧುರ ವೀಣಾರವವನ್ನೂ ನಾಚಿಸುವಂತಿದ್ದ ಕಂಠಧ್ವನಿಯಿಂದಲೂ ಮುಗುಳು ನಗೆಯಿಂದಲೂ— 'ನಾವು ಹಿಮಶೈಲದಲ್ಲಿರುವ ಸಿದ್ಧಾಶ್ರಮದಿಂದ ಬಂದೆವು ಮುಂದೆ ಕಂಚಿಗೆ ಹೋಗುತ್ತೇವೆ" ಎಂದರು ರಾಮಾನುಜರಿಗೆ ನವಜೀವನವು ಬಂದಂತಾಗಿ—' ಹಾಗಾದರೆ ದಯವಿಟ್ಟು ನನ್ನನ್ನೂ ಈ ಘೋರಾಟವಿಯಿಂದ ಹೊರಕ್ಕೆ ಕರೆದೊಯ್ದು ಆ ಪುಣ್ಯಕ್ಷೇತ್ರವನ್ನು ತೋರಿಸಿರಿ" ಎಂದು ನುಡಿದರು ಒಡನೆ ಎಲ್ಲರೂ ಅಲ್ಲಿಂದ ಹೊರಟು, ಸ್ವಲ್ಪ ಹೊತ್ತಿನಲ್ಲೇ ಒಂದು ಕಾಲುದಾರಿಯು ಸಿಕ್ಕಲು, ಅದನ್ನು ಅನುಸರಿಸಿ ನಡೆದು ಅಷರಲ್ಲಿ ಸಾಯಂಕಾಲವಾಗಲು ಒಂದು ದೊಡ್ಡ ವೃಕ್ಷದ ಅಡಿಯನ್ನು ಆಶ್ರಯಿಸಿದರು ಅಲ್ಲಿ ಆಹಾರವೇನೂ ಸಿಕ್ಕದೆ ಎಲ್ಲರೂ ಉಪವಾಸವಾಗಿಯೇ ಮಲಗಬೇಕಾಯಿತು ಮಧ್ಯರಾತ್ರಿಯಲ್ಲಿ ಬೇಡತಿಗೆ ಬಾಯಾರಿಕೆ ತೋರಿತು ಆಕೆಯು ತನ್ನ ಪತಿಯನ್ನು ಕುರಿತು—"ಪ್ರಾಣನಾಥ ಬಹು ಬಾಯಾರಿಕೆಯಾಗಿದೆ ಹತ್ತಿರ ಎಲ್ಲಾದರೂ ನೀರು ಸಿಕ್ಕುವುದೇ?" ಎಂದಳು. ಆಗಲಾ ಬೇಡನು,—"ಪ್ರಿಯೆ ಸ್ವಲ್ಪ ತಾಳಿಕೋ, ಇಲ್ಲೇ-ಸ್ವಲ್ಪ ದೂರದಲ್ಲೇ ಸ್ವಚ್ಛಜಲದ ಒಂದು ಬಾವಿಯಿದೆ ಬೆಳಗಾದೊಡನೆಯೇ ಅಲ್ಲಿಂದ ನಿನಗೆ ನೀರು ತಂದು ಕೊಡುತ್ತೇನೆ" ಎಂದನು ಅಲ್ಲೇ ಇದ್ದು ಅವರ ಸಂಭಾಷಣೆಯನ್ನು ಕೇಳಿದ ರಾಮಾನುಜರು—"ಅಕ್ಕ

ಬಾ, ಇಂತಹ ಘೋರಕಾನನದಲ್ಲಿ ಜೊತೆಗಿದ್ದು ಮಾರ್ಗದರ್ಶಕರಾಗಿ ನನ್ನನ್ನು ಕಾಪಾಡಿದ ಇವರಿಗೆ ನಾನು ಮತ್ತೇನು ಉಪಕಾರ ಮಾಡಲಿ! ಬಾಯಾರಿಕೆಯಿಂದ ಬಳಲುತ್ತಿರುವ ಈ ಸಾಧ್ವಿಗೆ ನೀರನ್ನಾದರೂ ತಂದುಕೊಟ್ಟು ದಾಹವನ್ನು ನೀಗಿಸೋಣವೆಂದರೆ, ಈ ಹೊಸ ಸ್ಥಳದಲ್ಲಿ ಬಾವಿಯಲ್ಲಿದೆಯೋ ತಿಳಿಯದಲ್ಲಾ! ಏನು ಮಾಡಲಿ!'' ಎಂದುಕೊಂಡು,—''ಓ ದಂಪತಿಗಳೇ ನನಗೆ ಇಷ್ಟು ಮಾತ್ರ ಉಪಕಾರ ಮಾಡುವುದಕ್ಕಾಗಿ ಬಂದ ನೀವು ನನ್ನ ಭಾಗದ ಸಾಕ್ಷಾತ್ ಲಕ್ಷ್ಮೀನಾರಾಯಣರಲ್ಲದೆ ಬೇರೆ ಯಾರೂ ಅಲ್ಲ ನಿಮ್ಮ ಉಪಕಾರವನ್ನು ನಾನು ಹೇಗೆ ತೀರಿಸಲಿ! ಇಲ್ಲಿ ಬಾವಿ ಎಲ್ಲಿದೆಯೋ ತಿಳಿಯದು ಸ್ವಲ್ಪ ಬೆಳಕಾಗಲಿ ನೀರು ತಂದುಕೊಡುತ್ತೇನೆ ಸ್ವಲ್ಪ ತಾಳಿಕೊಳ್ಳಿರಿ!'' ಎಂದರು ಆ ಮಾತನ್ನು ಕೇಳಿದ ಬೇಡನು, ''ಅಗೋ ನೋಡಿ, ಬೆಳಕಾಗಿದೆ. ಅಲ್ಲೇ ಬಾವಿಯು ಕಾಣಿಸುತ್ತಿದೆ ಬೊಗಸೆಯಲ್ಲೇ ಜಲವನ್ನು ತಂದು ನಮ್ಮ ದಾಹವನ್ನು ಪರಿಹರಿಸಿರಿ'' ಎಂದು ನುಡಿಯಲು, ರಾಮಾನುಜರು ಒಡನೆ ಎದ್ದು ಹೊರಟರು ಪ್ರಕಾಶಮಾನವಾದ ಬೆಳಕಿನಿಂದ ಮಾರ್ಗವು ಕಾಣಿಸುತ್ತಿತ್ತು. ಬಾವಿಯೂ ಸಿಕ್ಕಿತು ಒಳಕ್ಕಿಳಿದು ಬೊಗಸೆಯಲ್ಲಿ ನೀರು ತಂದು ಮೂರುಸಾರಿ ಕೊಟ್ಟರು ಮತ್ತೊಂದುಸಾರಿ ಬಾವಿಯೊಳಕ್ಕಿಳಿದು ಮೇಲಕ್ಕೆ ಬರುವ ವೇಳೆಗೆ ಆ ದಂಪತಿಗಳು ಅದೃಶ್ಯರಾಗಿದ್ದರು. ಅದನ್ನು ಕಂಡು ರಾಮಾನುಜರಿಗೆ ಪರಮಾಶ್ಚರ್ಯವಾಯಿತು ಆ ಘೋರಾಟವಿಯಿಂದ ತಮ್ಮನ್ನು ಹೊರಕ್ಕೆ ಕರೆತಂದು ಕಾಪಾಡಿದವರು ದೇವೋತ್ತಮದಂಪತಿಗಳಾದ ಶ್ರೀಸೀತಾರಾಮರೇ ಎಂಬುದು ಮನಸಿನಲ್ಲಿ ನಟ್ಟಿತು ''ಓ ದೀನದಯಾಪರಾ, ಆಪದ್ಬಾಂಧವಾ ಘೋರಾಂಧಕಾರದ ಅರಣ್ಯಮಧ್ಯದಲ್ಲಿ ಬೆಂಬಲನಾಗಿ ಕಾಪಾಡಿದ ನೀನೇ, ಈ ಭವಾಟವಿಯ ಅಜ್ಞಾನಾಂಧಕಾರದಲ್ಲಿ ಸಿಕ್ಕು ಕಂಗೆಟ್ಟಿರುವ ನನ್ನನ್ನು ಕಾಪಾಡು'' ಎಂದು ಕೈಜೋಡಿಸಿ ಪ್ರಾರ್ಥಿಸಿದರು. ಅಷ್ಟರಲ್ಲಿ ಸ್ವಚ್ಛವಾಗಿ ಬೆಳಕೂ ಆಯಿತು ಸುತ್ತಲೂ ದೃಷ್ಟಿಯನ್ನು ಪಸರಿಸಲು, ಸಮೀಪದಲ್ಲೇ ಬೇಸಾಯ ಮಾಡಲ್ಪಟ್ಟ ಹೊಲಗದ್ದೆಗಳೂ ತೋಟಗಳೂ ತೋರಿಬಂದುವು. ಉತ್ತಮ ಮಾರ್ಗವೂ ಗೋಚರಿಸಿತು ಅದನ್ನನುಸರಿಸಿ ಮುಂದೆ ನಡೆಯಲು ಸ್ವಲ್ಪ ದೂರದಲ್ಲೇ ಗುಡಿಗೋಪುರಗಳೂ ಗೋಚರಿಸಿದುವು ಹತ್ತಿರ ಹೊಲಗಳಲ್ಲಿದ್ದವರು, ಅವು ಕಂಚಿಯ ಶ್ರೀವರದರಾಜಸ್ವಾಮಿಯ

ದೇವಾಲಯದ ಗೋಪುರಗಳೆಂದರು. ತಮ್ಮನ್ನು ಪ್ರಾಣಾಪಾಯಕರವಾದ ಆ ವಿಪತ್ತಿನಿಂದ ನಿವಾರಣೆ ಮಾಡಿ ರಕ್ಷಿಸಿದ ಸರ್ವಶಕ್ತನನ್ನು ಬಗೆಬಗೆಯಿಂದ ವಂದಿಸುತ್ತಾ, ವಿಂಧ್ಯಾಟವಿಯಿಂದ ಬಹು ದೂರದಲ್ಲಿದ್ದ ಆ ಸ್ಥಳಕ್ಕೆ ಅಷ್ಟು ಶೀಘ್ರವಾಗಿ ಬಂದುದಕ್ಕಾಗಿ ಪರಮಾಶ್ಚರ್ಯಪಡುತ್ತಾ-ಭಗವನ್ಮಹಿಮೆಯನ್ನು ಪರಿಪರಿಯಿಂದ ಹೊಗಳುತ್ತಾ-ರಾಮಾನುಜರು ಕಾಂಚೀಪಟ್ಟಣವನ್ನು ಸೇರಿದರು



ಅಧ್ಯಾಯ ೩ "ಭೂತೋಚ್ಚಾಟನೆ"

ತಮ್ಮ ತಂದೆಯ ಬಳಿ ವಿದ್ಯಾಭ್ಯಾಸವನ್ನು ಮುಗಿಸಿದಾಗಲೇ-ಎಂದರೆ ಹದಿನಾರನೆಯ ವಯಸ್ಸಾಗುವ ವೇಳೆಗೇ-ರಾಮಾನುಜರಿಗೆ ವಿವಾಹವಾಗಿದ್ದಿತು ಈಗ ಕಾಂಚೀಪುರದಲ್ಲಿ ತಾವೂ ತಮ್ಮ ಪತ್ನಿಯೂ, ತಾಯಿಯೂ ಒಟ್ಟಿಗೊಂದು ಮನೆಯಲ್ಲಿ ವಾಸಿಸತೊಡಗಿದರು. ಊರಿಗೆ ಬಂದೊಡನೆ ಸ್ವಾಭಾವಿಕವಾಗಿಯೇ ತಮಗೆ ಕಾಡಿನಲ್ಲಾದ ಅನುಭವವನ್ನೂ ವಿಂಧ್ಯಾಟವಿಯಿಂದ ತಮ್ಮ ಊರಿನ ಸಮೀಪಕ್ಕೆ ಒಂದೇ ರಾತ್ರಿಯಲ್ಲ ಪ್ರಯಾಣ ಮಾಡಿ ಬಂದ ಅದ್ಭುತವನ್ನೂ ತಮಗೆ ದರ್ಶನ ಕೊಟ್ಟ ಆ ಬೇಡ ದಂಪತಿಗಳ ದಯಾಗುಣ-ತೇಜಸ್ವಿತೆಗಳನ್ನೂ ತಾಯಿಯೆದುರಿಗೆ ವರ್ಣಿಸುತ್ತಿದ್ದರು. ಪಾಠಪ್ರವಚನಗಳಿಗೆ ಅವಕಾಶವಿಲ್ಲದಿರಲು ಏನು ಮಾಡಬೇಕೆಂಬ ಯೋಚನೆಯುಂಟಾಯಿತು ಆಗ ಅವರ ತಾಯಿಯು, "ಈ ಊರಲ್ಲೇ ಕಂಚೀಪೂರ್ಣನೆಂಬೊಬ್ಬ ಮಹಾ ಸಾಧುವು ವಾಸಿಸುತ್ತಿದ್ದಾನೆ. ಆತನು ಶ್ರೀವರದರಾಜ ವಿಶಾಲಾಕ್ಷಿಯರ ಭಕ್ತಶ್ರೇಷ್ಠನು. ಮಹಾಮಾತೆ ವಿಶಾಲಾಕ್ಷಿಯು ಆತನಿಗೆ ಪ್ರತ್ಯಕ್ಷಳಾಗಿ ಆತನೊಡನೆ ಮಾತನಾಡುತ್ತಾಳೆಂದೂ ಹೇಳಿಕೊಳ್ಳುತ್ತಾರೆ. ಈ ಸಂದರ್ಭದಲ್ಲಿ ಏನು ಮಾಡಬೇಕೆಂದು ಆತನನ್ನು ಕೇಳು" ಎಂದಳು. ರಾಮಾನುಜರೂ, ಕೇವಲ ವಾದಾಪೇಕ್ಷೆಯಿಂದಲೇ ಶಾಸ್ತ್ರಾಭ್ಯಾಸ ಮಾಡುವುದಕ್ಕಿಂತಲೂ ಭಗವಂತನನ್ನು ನಿಷ್ಕಾಮಿಯಾಗಿ ಧ್ಯಾನಿಸುವುದರಲ್ಲೇ ಹೆಚ್ಚು ಮನಶ್ಶಾಂತಿ ಇರುವುದರಿಂದ ಒಣ ಕರ್ಮಜಡನಿಗಿಂತಲೂ, ಭಕ್ತನೇ ಮೇಲೆಂದು ಭಾವಿಸಿ, ಆತನಲ್ಲಿಗೆ

ಹೋಗಿ, ತಮ್ಮ ಅನುಭವಗಳನ್ನೆಲ್ಲಾ ತಿಳಿಸಲು ಆತನು—"ಶ್ರೀವರದರಾಜ ಸ್ವಾಮಿಯ ಸೇವೆಯೇ ಸರ್ವಸ್ವವೂ ಎಂದು ತಿಳಿದು, ಇಲ್ಲೇ ನಿಂತು ಬಿಡು. ಮತ್ತು ಯಾವ ಬಾವಿಯಿಂದ ಆ ಬೇಡ ದಂಪತಿಗಳು ನೀರನ್ನು ಅಪೇಕ್ಷಿಸಿದರೋ ಆ ಬಾವಿಯಿಂದಲೇ ದಿನವೂ ಸ್ವಾಮಿಯ ಪೂಜಾ ಕಾಲಕ್ಕೆ ಒಂದೊಂದು ಬಿಂದಿಗೆ ನೀರನ್ನು ತಂದುಕೊಡುತ್ತಿರು" ಎಂದು ಸೂಚಿಸಿದನು. ಆತನ ಮಾತಿನಂತೆ ರಾಮಾನುಜರೂ ಆ ರೀತಿ ಜಲಕುಂಭವನ್ನು ಅಭಿಷೇಕ ಕಾಲಕ್ಕೆ ತಂದೊಪ್ಪಿಸುತ್ತಾ ಸೇವಾನಿರತರಾಗಿದ್ದರು.—

ಅತ್ತ ಕಾಡಿನಲ್ಲಿ ತಂಗಿದ್ದ ಯಾದವಪ್ರಕಾಶರೂ ಆತನ ಶಿಷ್ಯಪರಿವಾರವೂ ಮಾರನೆಯ ಪ್ರಾತಃಕಾಲ ಎದ್ದು ರಾಮಾನುಜರನ್ನು ಕಾಣದೆ, ಎಲ್ಲರೂ 'ಎಲ್ಲಿ ಹೋದರೆಲ್ಲಿಹೋದರೆಂ'ದು ಒಬ್ಬರನ್ನೊಬ್ಬರು ಕೇಳಿಕೊಳ್ಳುತ್ತಿರುವ ವೇಳೆಗೆ ಮುಖಪ್ರಕ್ಷಾಳನಕ್ಕೆಂದು ಹೋಗಿದ್ದ ಗೋವಿಂದಭಟ್ಟರು ಬರಲು, ಯಾದವಪ್ರಕಾಶರು ಅವರನ್ನು ಕುರಿತು ರಾಮಾನುಜರೆಲ್ಲೆಂದು ಕೇಳಿದರು ಆ ಮಾತನ್ನು ಕೇಳಿದೊಡನೆಯೇ ಗೋವಿಂದಭಟ್ಟರು. "ಅಕಟಾ ನಮ್ಮಣ್ಣನೆಲ್ಲಿ! ಎಲ್ಲಿ ಹೋದ, ಅಯ್ಯೋ ಅರಣ್ಯಮಧ್ಯದಲ್ಲಿ ಯಾವ ಕಾಡು ಮೃಗದ ಬಾಯಿಗೆ ತುತ್ತಾದನೋ! ಹಾ, ದೈವವೇ ತಾಯಿಮಕ್ಕಳನ್ನಗಲಿಸಿ ಈ ವ್ಯಾಜದಿಂದ ಈ ದೂರಸ್ಥಳಕ್ಕೆ ಕರೆತಂದು ಇಲ್ಲಿ ನಮ್ಮಣ್ಣನನ್ನು ನುಂಗಿಕೊಂಡೆಯಾ?" ಎಂದು ಮುಂತಾಗಿ ಕಲ್ಲಿರಗಳು ಕರಗುವಂತೆ ದುಃಖಿಸತೊಡಗಿದರು. ಅದನ್ನು ಕಂಡು ಯಾದವಪ್ರಕಾಶರೂ ಇತರ ಶಿಷ್ಯರೂ ಪರಿಪರಿಯಿಂದ ಆವರನ್ನು ಸಮಾಧಾನಗೊಳಿಸಿ ರಾಮಾನುಜರನ್ನೂ ಅನೇಕ ಕಡೆ ಹುಡುಕಿಸಿ ಕಾಣದೆ ವ್ಯಸನದಿಂದ ಮುಂದೆ ಪ್ರಯಾಣಮಾಡಿ ಕಾಸಿಯನ್ನು ಸೇರಿದರು

ಗೋವಿಂದಭಟ್ಟರು ವೈಷ್ಣವಕುಲೋತ್ಪನ್ನರು. ಶ್ರೀಮನ್ನಾರಾಯಣನೇ ಶ್ರೇಷ್ಠದೈವವೆಂದೆಣಿಸಿ ಆ ದೇವದೇವನ ಸ್ಮರಣೆ ಪೂಜಾದಿಗಳಲ್ಲೇ ಆಸಕ್ತರಾಗಿರುತ್ತಿದ್ದರು. ಯಾದವಪ್ರಕಾಶರು ಇದನ್ನು ತಿಳಿದು, ಆತನನ್ನು ಹೇಗಾದರೂ ಮಾಡಿ ಶೈವಮತಕ್ಕೆ ಪರಿವರ್ತನ ಮಾಡಬೇಕೆಂದು ಅಪೇಕ್ಷಿಸಿ, ಒಂದಾನೊಂದುದಿನ ಮಣಿಕರ್ಣಿಕಾ ಘಟ್ಟದಲ್ಲಿ ಸ್ನಾನ ಮಾಡುತ್ತಿದ್ದಾಗ ಅವರ ಕೈಗೆ ಒಂದು ಶಿವಲಿಂಗವು ಸಿಕ್ಕುವಂತೆ ಉಪಾಯ ಮಾಡಿದರಂತೆ! ಭಟ್ಟರು ಕೈಗೆ ಸಿಕ್ಕಿ ಶಿವಲಿಂಗವನ್ನು ಮೇಲಕ್ಕೆತ್ತಿ ತೋರಿಸಿ, ಅದಕ್ಕರ್ಥವೇನೆಂದು ಕೇ

ಳಲು, ಗುರುಗಳು "ಶಿಷ್ಯೋತ್ತಮಾ ನೀನೇ ಪುಣ್ಯಶಾಲಿಯು, ಶ್ರೀಗಂಗಾಧರ ಸ್ವಾಮಿಯು ತನ್ನ ಸಾನ್ನಿಧ್ಯಪ್ರಸಾದಗಳಿಂದ ನಿನ್ನನ್ನು ಅನುಗ್ರಹಿಸಬೇಕೆಂದು ಅಪೇಕ್ಷಿಸಿ ನಿನ್ನ ಕೈಗೆ ಶಿವಲಿಂಗವನ್ನು ದೊರಕಿಸಿರುವನು. ಗಂಗಾಸ್ನಾನದ ಫಲವು ಬಹು ಶೀಘ್ರವಾಗಿಯೇ ನಿನಗೆ ಲಭ್ಯವಾಯಿತಲ್ಲವೇ ನೀನೇ ಪುಣ್ಯಶಾಲಿಯು ಸ್ವಾಮಿಯ ಇಂತಹ ಅನುಗ್ರಹವು ಬೇರೆ ಎಲ್ಲರಿಗೂ ದೊರೆಯದು. ಇನ್ನು ಮೇಲೆ ಶಿವನನ್ನೇ ಧ್ಯಾನಿಸು ಶಂಕರನನ್ನೇ ಆರಾಧಿಸು, ಸದಾ ಶಂಭುವನ್ನೇ ಸ್ಮರಿಸು" ಎಂದು ಅವನಿಗೆ ಶೈವದೀಕ್ಷೆಯನ್ನು ಕೊಟ್ಟರು. ಗೋವಿಂದಭಟ್ಟರೂ ಅಂದಿನಿಂದ ಶಿವಪೂಜಾಧುರಂಧರರಾದರು

ಯಾತ್ರೆಯನ್ನು ಮುಗಿಸಿಕೊಂಡು ಎಲ್ಲರೂ ಅಲ್ಲಿಂದ ಹೊರಟು ಜಗನ್ನಾಥ ಅಹೋಬಲಗಳ ಮಾರ್ಗವಾಗಿ ಸ್ವಗ್ರಾಮಾಭಿಮುಖರಾದರು. ಗೋವಿಂದಭಟ್ಟರು ಯಾದವಪ್ರಕಾಶರ ಅಪ್ಪಣೆಯನ್ನು ಪಡೆದು ಮಧುರಮಂಗಲವೆಂಬ ತಮ್ಮ ಗ್ರಾಮಕ್ಕೆ ಬಂದು, ಅಲ್ಲೇ ಆ ಶಿವಲಿಂಗವನ್ನು ಪ್ರತಿಷ್ಠಿಸಿ ಶ್ರದ್ಧಾಭಕ್ತಿಯುಕ್ತರಾಗಿ ಪೂಜಾಸಕ್ತರಾಗಿದ್ದರು ಅಷ್ಟರಲ್ಲಿ ಅವರಿಗೆ ಒಂದು ದಿನ ಕಾಳಹಸ್ತೀಶ್ವರನು ಸ್ವಪ್ನದಲ್ಲಿ ಬಂದು, ತನ್ನಲ್ಲಿಗೆ ಬಂದು ಸೇವಾನಿರತನಾಗಿರಬೇಕೆಂದು ಹೇಳಿದಂತೆ ಆಯಿತು. ಅತ್ತ, ಕಾಳಹಸ್ತಿದೇವಸ್ಥಾನದ ಅರ್ಚಕ ಮುಂತಾದ ಅಧಿಕಾರಿ ವರ್ಗಕ್ಕೂ ಹಾಗಯೇ ಸ್ವಪ್ನವಾಗಿರಲು ಅವರೂ ಸಮಸ್ತ ಮರ್ಯಾದೆಗಳೊಂದಿಗೂ ಬಂದು ಗೋವಿಂದಭಟ್ಟರನ್ನು ಗೌರವಿಸಿ ಕರೆದೊಯ್ದು ದೇವಸ್ಥಾನದ ಸರ್ವಾಧಿಕಾರವನ್ನೂ ಅವರಿಗೆ ವಹಿಸಿದರು ಅಂದಿನಿಂದ ಗೋವಿಂದಭಟ್ಟರು ಕಾಳಹಸ್ತಿಯಲ್ಲೇ ನಿಂತುಬಿಟ್ಟರು.

ಇತ್ತ ಕಾಂಚೀಪುರವನ್ನು ಸೇರಿದ ಯಾದವಪ್ರಕಾಶರೂ ಅವರ ಶಿಷ್ಯರೂ, ರಾಮಾನುಜರು ಸುರಕ್ಷಿತನಾಗಿ ಸ್ವಾಮಿಸೇವಾಸಕ್ತರಾಗಿರುವುದನ್ನು ಕಂಡು, ತಮ್ಮ ಕುಯುಕ್ತಿಗಾಗಿ ಲಜ್ಜಿತರಾಗಿ ಮನಸ್ಸಾಕ್ಷಿಯು ನಿರೋಧಿಸುತ್ತಿದ್ದರೂ ಲಕ್ಷಿಸದೆ— 'ಅಯ್ಯೋ, ಕಾಡಿನ ಮಧ್ಯಮಾರ್ಗದಲ್ಲಿ ನೀವು ಎಲ್ಲಿ ಹೋಗಿ ಯಾವ ಕಾಡುಮೃಗಕ್ಕೆ ಆಹಾರವಾದಿರೋ ಎಂದು ಬೆದರಿದ್ದೆವು! ಅಷ್ಟು ದೂರ ಪ್ರಯಾಣವನ್ನು ಸುರಕ್ಷಿತವಾಗಿ ಕಳೆದು ಹೇಗೆ ಊರು ಸೇರಿದಿರಿ? ಇಲ್ಲಿ ಕ್ಷೇಮವಾಗಿರುವ ನಿಮ್ಮನ್ನು ಕಂಡು ಈಗ ಸಮಾಧಾನವಾ

ಯಿತು" ಎಂದು ಮುಂತಾಗಿ ಪ್ರಶ್ನಿಸಲು, ರಾಮಾನುಜರು, ಶ್ರೀವರದ ರಾಜ ವಿಶಾಲಾಕ್ಷಿಯರೇ ತಮಗೆ ಮಾರ್ಗದರ್ಶಕರಾದರೆಂದು ತಮ್ಮ ಅನುಭವವನ್ನೆಲ್ಲಾ ವಿವರಿಸಿದರು. ಆದನ್ನು ಕೇಳಿ ಅವರಿಗೆ ಮನಸ್ಸಿನಲ್ಲಿ ಸಂತೋಷವಾಯಿತೋ, ಅಸೂಯೆಯುಂಟಾಯಿತೋ, ವ್ಯಸನವಾಯಿತೋ ಹೇಳಲಾರೆವು! ಎಂತೂ ಮುಂದೆ ರಾಮಾನುಜರೂ ಎಂದಿನಂತೆ ಶಿಷ್ಯಮಂಡಲಿಗೆ ಸೇರಿದರು. ವಿದ್ಯಾಭ್ಯಾಸವೂ ನಡೆಯುಸಾಗಿತು

ಶ್ರೀರಂಗಕ್ಷೇತ್ರದಲ್ಲಿ ವಾಸಿಸುತ್ತಿದ್ದ ಶ್ರೀಯಾಮುನಾಚಾರ್ಯರು ತಮಗೆ ವಯಸ್ಸಾಗುತ್ತಾ ಒಂದುದಸವೂ ತಮ್ಮ ಪೀಠಕ್ಕೆ ಯೋಗ್ಯರಾರೂ ಕಾಣಸದಿದ್ದುದನ್ನೂ ಕುರಿತು ಚಿಂತಾಕ್ರಾಂತರಾಗಿರಲು ಆ ವೇಳೆಗೆ ಕಂಚಿಯಿಂದ ಇಬ್ಬರು ಭೂಸುರರು ಶ್ರೀರಂಗದ ಯಾತ್ರೆಗಾಗಿ ಬಂದು ಶ್ರೀರಾಮಾನುಜರ ವಿದ್ಯಾವಿನಯ ವೈಭವಾದಿಗಳನ್ನೂ, ಶ್ರೀವರದರಾಜಸ್ವಾಮಿಯು ಅವರಿಗೆ ಬೇಡನ ವೇಷದಿಂದ ದರ್ಶನವಿತ್ತ ವೃತ್ತಾಂತವನ್ನೂ ತಿಳಿಸಿದರು ಆ ಮಾತನ್ನು ಕೇಳಿದ ಆಳವಂದಾರ್ ಸ್ವಾಮಿಯವರು ಅವರನ್ನು ನೋಡಿಬರುವ ಉದ್ದೇಶದಿಂದ ಅಲ್ಲಿಂದ ಹೊರಟು ಕಂಚಿಯನ್ನು ಸೇರಿ, ತಮ್ಮ ಶಿಷ್ಯೋತ್ತಮರಾದ ಕಂಚೀಪೂರ್ಣರಿಂದ ಸತ್ಕೃತರಾಗಿ ಶ್ರೀವರದರಾಜಸ್ವಾಮಿಯ ಆಲಯದಲ್ಲಿ, ತಮ್ಮ ಗುರುಗಳೊಂದಿಗೆ ಒಂದಿದ್ದ ಶ್ರೀರಾಮಾನುಜರನ್ನು ಕಂಡು ಪರಮಾನಂದಪಟ್ಟರು ಮತ್ತು ಅತನೇ ತಮ್ಮ ತರುವಾಯ ತಮ್ಮ ಪೀಠಕ್ಕೆ ಬರುವಂತೆಯೂ ಅವರಿಂದಲೇ ಮುಂದೆ ವಿಶಿಷ್ಟಾದ್ವೈತಮತವು ಜೀರ್ಣೋದ್ಧಾರವಾಗುವಂತೆಯೂ ಅನುಗ್ರಹಿಸಬೇಕೆಂದು ಶ್ರೀವರದರಾಜನನ್ನು ಪ್ರಾರ್ಥಿಸಿಕೊಂಡು, ಅಲ್ಲಿಂದ ಪ್ರಯಾಣಮಾಡಿ ಶ್ರೀರಂಗವನ್ನು ಸೇರಿದರು.

ಇತ್ತ ಯಾದವಪ್ರಕಾಶರಲ್ಲಿ ರಾಮಾನುಜರ ವಿದ್ಯಾಭ್ಯಾಸವು ನಿರ್ವಿಘ್ನವಾಗಿ ನಡೆದಿತ್ತು. ಈ ಮಧ್ಯೆ ಒಂದು ಸಂಗತಿ ನಡೆಯಿತು. ಆ ಪ್ರಾಂತವನ್ನಾಳುತ್ತಿದ್ದ ರಾಜನ ಮಗಳಿಗೆ ಒಂದು ಪಿಶಾಚವು ಹಿಡಿದು ಬಾಧಿಸುತ್ತಿತ್ತು. ತನ್ನ ಪ್ರೇಮಪುತ್ರಿಗೆ ಅದರ ಬಾಧೆಯನ್ನು ಬಿಡಿಸಬೇಕೆಂದು ಆತನು ಎಷ್ಟು ಹಣವನ್ನು ವ್ಯಯ ಮಾಡಿ ಏನೇನು ಪ್ರಯತ್ನಗಳನ್ನು ಮಾಡಿದರೂ ಏನೂ ಪ್ರಯೋಜನವಾಗಲಿಲ್ಲ. ಕೊನೆಗೆ ಶ್ರೀಯಾದವಪ್ರಕಾಶರಿಂದ ಅದರ ಉಚ್ಚಾಟನೆಯು ಸಾಧ್ಯವೆಂದು ಕೇಳಿ ರಾಜನು ಅಷ್ಟುಮಾತ್ರ ಮಾಡಿ ತನ್ನ ಮಗ

ಳನ್ನು ಬಾಧಾನಿವೃತ್ತಳನ್ನಾಗಿ ಮಾಡಬೇಕೆಂದು ಅವರನ್ನು ಪರಿಪರಿಯಿಂದ ಪ್ರಾರ್ಥಿಸಿಕೊಂಡನು. ಯಾದವಪ್ರಕಾಶರು ತಾವು ಪ್ರತ್ಯಕ್ಷವಾಗಿ ಹೋಗಬೇಕಾದ ಪ್ರಕೃತವೇ ಇಲ್ಲವೆಂದೂ, ತಮ್ಮ ಹೆಸರನ್ನು ಹೇಳಿದರೇ ಭೂತವು ಓಡಿಹೋಗುವುದೆಂದೂ, ತಮ್ಮ ಶಕ್ತಿಯ ವಿಷಯದಲ್ಲಿ ತಾವೇ ಹೆಚ್ಚಳಪಟ್ಟುಕೊಂಡು, ಹೇಳಿಕಳುಹಿಸಿದರು ಆದರೆ ಅವರೆಣಿಸಿದಂತೆ ಆಗಲಿಲ್ಲ ಭೂತವು ಅವರ ಹೆಸರನ್ನೂ ಮಾತನ್ನೂ ಲಕ್ಷಿಸಲಿಲ್ಲ. ಕೊನೆಗೆ ಅವರೇ ಅರಮನೆಗೆ ಹೋಗಿ ಮಂತ್ರಿಸಿದ್ದೂ ಆಯಿತು ಅದರಿಂದಲೂ ಏನೂ ಫಲವಾಗಲಿಲ್ಲ. ಆ ಪಿಶಾಚವು ಅವರ ಪೂರ್ವಜನ್ಮ ವೃತ್ತಾಂತವನ್ನೂ ಹೇಳಿ, "ನಿನ್ನಿಂದ ಈ ಕಾರ್ಯವು ಸಾಧ್ಯವಿಲ್ಲ, ಇಲ್ಲಿಂದ ಹೊರಡು" ಎಂದು ಹೇಳಿಬಿಟ್ಟಿತು. ರಾಜನು ಮುಂದೆ ಗತಿಯೇನೆಂದು ಆವೇಶಿತಳಾದ ತನ್ನ ಮಗಳನ್ನೇ ಕೇಳಿದನು ಆಗ ಭೂತವು "ಈ ಯಾದವಪ್ರಕಾಶನ ಶಿಷ್ಯಮಂಡಲಿಯಲ್ಲಿರುವ ಅನಂತಾಂಶಸಂಭೂತರಾದ ಶ್ರೀರಾಮಾನುಜರು ಆಜ್ಞಾಪಿಸಿದ್ದಾದರೆ, ನಾನು ಹೊರಟುಹೋಗುತ್ತೇನೆ" ಎಂದು ನುಡಿಯಿತು ಅದನ್ನು ಕೇಳಿ ರಾಜನು ರಕ್ಷಿಸಬೇಕೆಂದು ರಾಮಾನುಜರ ಪಾದಕ್ಕೆ ಬಿದ್ದನು. ರಾಮಾನುಜರೂ ಭೂತವನ್ನು ಕುರಿತು, "ರಾಜಪುತ್ರಿಯನ್ನು ಬಾಧಿಸದೆ ಇನ್ನು ಹೊರಟುಹೋಗು" ಎಂದು ಆಜ್ಞಾಪಿಸಿದರು ಮತ್ತು ಹಾಗೆ ಹೋದುದಕ್ಕೆ ಒಂದು ಗುರುತನ್ನೂ ತೋರಿಸಬೇಕೆಂದರು ಭೂತವು ಹಾಗೇ ಆಗಲೆಂದು ನುಡಿಯಿತು. ಒಡನೆ ಸಮೀಪದಲ್ಲಿದ್ದೊಂದು ದೊಡ್ಡ ಮರವು ಚಟಚಟನೆಂದು ಮಹತ್ತಾದ ಶಬ್ದಮಾಡುತ್ತಾ ಮುರಿದು ಬಿದ್ದಿತು. ಎಲ್ಲರೂ ಪರಮಾಶ್ಚರ್ಯಪಟ್ಟರು. ರಾಜನು ರಾಮಾನುಜರನ್ನು ವಿಶೇಷವಾಗಿ ಪೂಜಿಸಿ, ನಮಸ್ಕರಿಸಿ ಅಸಂಖ್ಯಧನವನ್ನು ಬಹುಮಾನವಾಗಿ ಕೊಟ್ಟನು. ಶಿಷ್ಯವರ್ಯರಾದ ರಾಮಾನುಜರು ಆ ಹಣವನ್ನೆಲ್ಲಾ ಅಲ್ಲೇ ತಮ್ಮ ಗುರುಗಳಿಗೇ ಒಪ್ಪಿಸಿ ನಮಸ್ಕರಿಸಿಬಿಟ್ಟರು. ಯಾದವಪ್ರಕಾಶರಿಗೆ ತಮ್ಮ ಶಿಷ್ಯನ ಆ ಬಗೆಯ ಪ್ರಾದುರ್ಭಾವವು ಒಂದು ಬಗೆಯಿಂದ ಸಂತೋಷವನ್ನೂ ಮತ್ತೊಂದು ಬಗೆಯಿಂದ ಅಸೂಯೆಯನ್ನೂ ಉಂಟುಮಾಡಿತು. ಗುರುಶಿಷ್ಯರು ಮಠಕ್ಕೆ ಬಂದರು. ರಾಮಾನುಜರ ಈ ಭೂತೋಚ್ಚಾಟನೆಯ ಕೃತ್ಯವು ದೇಶ

ದೇಶದಲ್ಲೆಲ್ಲಾ ಹರಡಲ್ಪಟ್ಟು ಅವರ ಕೀರ್ತಿಯು ದಿನದಿನಕ್ಕೆ ಹೆಚ್ಚುತ್ತಿದ್ದಿತು.



## ಅಧ್ಯಾಯ ೪ "ಸನ್ಯಾಸಾಶ್ರಮಸ್ವೀಕಾರ"

ರಾಜಪುತ್ರಿಯು ಭೂತೋಚ್ಚಾಟನೆಯಾಗಿ ಮರಕ್ಕೆ ಬಂದ ತರುವಾಯ ಗುರುಶಿಷ್ಯರಲ್ಲಿ ಸ್ನೇಹಧರ್ಮವು ಬಹು ದಿನಗಳು ನಿಲ್ಲಲಿಲ್ಲ. ಯಾದವಪ್ರಕಾಶರು ಮತ್ತೊಂದು ದಿನ "ಸರ್ವಂಖಲ್ವಿದಂಬ್ರಹ್ಮ" ಎಂಬ ವಾಕ್ಯವನ್ನು ವಿವರಿಸುವಾಗಲೂ ರಾಮಾನುಜರು ತಮ್ಮ ಅರ್ಥಾನುಸಾರವಾಗಿ ಪ್ರತಿಭಟಿಸಬೇಕಾಯಿತು ಆ ಸಾರಿ ಯಾದವಪ್ರಕಾಶರು ಬಹು ಕೋಪಗೊಂಡು, "ಅಯ್ಯಾ, ನೀನು ನನ್ನನ್ನು ಆಕ್ಷೇಪಿಸುತ್ತಾ ಇದೂ ಸೇರಿ ಮೂರುಸಾರಿಯಾಯಿತು. ಇದೇ ಕೊನೆಯ ಸಾರಿಯೂ ಆಗಲಿ' ಇನ್ನು ಮುಂದೆ ನನಗಿಂತಲೂ ಚೆನ್ನಾಗಿ ಬೋಧಿಸುವವರಲ್ಲಿಗೆ ಹೊರಟುಹೋಗು" ಎಂದು ಖಂಡಿತವಾಗಿ ಹೇಳಿಬಿಟ್ಟರು. ರಾಮಾನುಜರಿಗೂ ಪ್ರತಿಸಾರಿಯೂ ವಾಕ್ಕಲಹ ಮಾಡಿಕೊಂಡು ಏಕತ್ರವಿದ್ದು ಕಾಲಹಾಕುವುದು ಸರಿತೋರಲಿಲ್ಲ ಅಲ್ಲಿಂದ ಹೊರಟು ಮನೆಗೆ ಬಂದು, ತಾಯಿಗೆ ಮಠದಲ್ಲಿ ನಡೆದ ವೃತ್ತಾಂತವನ್ನೆಲ್ಲ ತಿಳಿಸಿದರು ಆಕೆಯು ಪುನಃ ಕಂಚೀಪೂರ್ಣರನ್ನೇ ಆಶ್ರಯಿಸೆಂದಳು ಒಡನೆ ಕಂಚೀಪೂರ್ಣರನ್ನು ಕಂಡು ತಮ್ಮ ಸಂಗತಿಯನ್ನು ತಿಳಿಸಿ, ಅವರ ಅನುಮತಿಯಿಂದ ಪುನಃ ದೇವಸ್ಥಾನದಲ್ಲೇ ಸ್ವಾಮಿಯ ಸೇವೆಯಲ್ಲಿ ನಿಂತರು. ಯಾದವಪ್ರಕಾಶರ ಬರುವಿಕೆಯಿಂದ ಕೆಲ ದಿನಗಳ ಮಟ್ಟಿಗೆ ತಪ್ಪಿ ಹೋಗಿದ್ದ ಜಲಕುಂಭ ಸೇವೆಯು ಮುಂದೆ ಕ್ರಮವಾಗಿ ಸಾಗತೊಡಗಿತು.

ಆ ವೇಳೆಗೆ ಇತ್ತ ಶ್ರೀರಂಗದಲ್ಲಿ ಯಾಮುನಾಚಾರ್ಯರು, ಮುಂದೆ ತಮ್ಮ ಪೀಠಕ್ಕೆ ಯೋಗ್ಯಪಾತ್ರರು ಶ್ರೀರಾಮಾನುಜರೇ ಎಂದು ನಿರ್ಧರಿಸಿ ಅವರನ್ನು ಶ್ರೀರಂಗಕ್ಕೆ ಕರೆತರಬೋಸುಗ ತಮ್ಮ ಶಿಷ್ಯರಲ್ಲಿ ಹಿರಿಯರಾದ ಪೆರಿಯನಂಬಿ (ಮಹಾಪೂರ್ಣರು)ಯನ್ನು ಕಾಂಚೀಪಟ್ಟಣಕ್ಕೆ ಕಳುಹಿಸಿದರು. ಅವರು, ಆ ಊರನ್ನು ಸೇರಿ ದೇವಸ್ಥಾನವನ್ನು ಪ್ರವೇಶಿಸಿ, ಆಳವಂದಾರ್ ಸ್ವಾ

ಮಿಯುವರಿಂದ ರಚಿಸಲ್ಪಟ್ಟ ಒಂದು ಸ್ತೋತ್ರವನ್ನು ಹಾಡುತ್ತಿದ್ದರು ಒಂದೇ ಮನಸ್ಸಿನಿಂದ ಸ್ವಾಮಿಯ ಪ್ರಾತರಾರಾಧನೆಯಲ್ಲಿ ತೊಡಗಿದ್ದರು. ದರೂ ರಾಮಾನುಜರು ಆ ಸ್ತೋತ್ರರತ್ನದ ಸೌಂದರ್ಯದಿಂದ ಆಕರ್ಷಿತರಾಗಿ, ಅದನ್ನು ರಚಿಸಿದವರಾರೆಂದು ಆ ನೂತನ ವ್ಯಕ್ತಿಯನ್ನು ಪ್ರಶ್ನಿಸಿದರು. ಅದನ್ನು ಶ್ರೀರಂಗದ ಆಳವಂದಾರ್ ಸ್ವಾಮಿಗಳು ರಚಿಸಿದರೆಂ[illegible]ು, ಹಾಗಾದರೆ ತಮಗೆ ದಯಪಟ್ಟು ಆ ಮಹಾನುಭಾವರ ದರ್ಶನ [illegible]ಬೇಕೆಂದು ಪ್ರಾರ್ಥಿಸಿಕೊಂಡರು ನಂಬಿಯೂ ಒಪ್ಪಲು, ರಾಮಾನುಜ[illegible] ಕಂಚೀ ಪೂರ್ಣರ ಅಪ್ಪಣೆಯನ್ನು ಪಡೆದು ಮಹಾಪೂರ್ಣರೊಂದಿಗೆ ಶ್ರೀರಂಗಕ್ಕಾಗಿ ಪ್ರಯಾಣ ಮಾಡಿದರು

ಆದರೆ ಅವರಿಬ್ಬರೂ ಶ್ರೀರಂಗವನ್ನು ಸೇರುವ ವೇಳೆಗೆ ಯಾಮುನಾಚಾರ್ಯರು ಸ್ವರ್ಗಸ್ಥರಾಗಿದ್ದು ಭಕ್ತಾದಿಗಳು ಕಣ್ಣೀರನ್ನು ಸುರಿಸುತ್ತಾ, ಅವರ ಗುಣಗಾನ ಮಾಡುತ್ತಾ ಅವರ ಶವವನ್ನು ಅಂತ್ಯಸಂಸ್ಕಾರಕ್ಕಾಗಿ ಅವರ ಎದುರಿಗೇ ತರುತ್ತಿದ್ದುದನ್ನು ಕಂಡರು ಅವರನ್ನು ಪ್ರತ್ಯಕ್ಷ ದರ್ಶಿಸಿ ಮಾತನಾಡಲು ಸಾಧ್ಯವಾಗದಿದ್ದುದಕ್ಕಾಗಿ ರಾಮಾನುಜರು ವ್ಯಸನಪಟ್ಟು, ಹೇಗಾದರಾಗಲಿ ಅವರ ಪುಣ್ಯದೇಹವನ್ನಾದರೂ ದರ್ಶಿಸೋಣವೆಂದು ಆ ಶವವಿದ್ದಲ್ಲಿಗೆ ನಡೆದರು. ಅಲ್ಲಿ ಅವರ ಬಲಹಸ್ತದ ಮೂರು ಬೆರಳುಗಳು ಮಾತ್ರ ಮುಚಿಕೊಂಡಿರಲು, ಎಲ್ಲರೊಂದಿಗೆ ರಾಮಾನುಜರಿಗೂ ಆಶ್ಚರ್ಯವುಂಟಾಗಿ ಅದರ ಕಾರಣವೇನೆಂದು ವಿಚಾರಿಸಿದರು. ಯಾಮುನಾಚಾರ್ಯರ ಶಿಷ್ಯವರ್ಗವು "ಆಚಾರ್ಯರ ಮನಸ್ಸಿನಲ್ಲಿ ಮೂರು ಆಶಯಗಳಿದ್ದುವು ಅವುಗಳು ಪೂರ್ಣವಾಗಲಿಲ್ಲವಲ್ಲಾ ಎಂಬ ವಿಚಾರದಿಂದ ಈ ರೀತಿ ಇರಬಹುದು"ಂದರು. ಅವುಗಳಾವುವಂಬುದನ್ನು ಅವರಿಂದ ತಿಳಿದ ರಾಮಾನುಜರು, ಪರೇಂಗಿತಜ್ಞರಾದುದರಿಂದ ಉಚಿತವರಿತು, ಎಲ್ಲರೂ ಕೇಳುವಂತೆ ಆಗ (೧) "ನಾನು ಶ್ರೀವೈಷ್ಣವಮತವನ್ನು ಅಭಿವೃದ್ಧಿಪಡಿಸಿ, ಅಜ್ಞಾನಮೋಹಿತರಾದ ಜನರನ್ನು ಪಂಚಸಂಸ್ಕಾರ ಸಂಪನ್ನರನ್ನಾಗಿ ಪರಮಪದವನ್ನು ಹೊಂದುವಂತೆ ಮಾಡುವೆನು. (೨) ಸಮಸ್ತ ವೇದಾರ್ಥಗಳನ್ನೂ ಸಂಗ್ರಹಿಸಿ ರಚಿಸಲ್ಪಟ್ಟಿರುವ ಶ್ರೀಬಾದರಾಯಣಯತೀಂದ್ರರ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ರಚಿಸುವೆನು. (೩) ಜೀವೇಶ್ವರ ಭೇದವನ್ನೂ ಚಿದಚಿದೀಶ್ವರಸ್ವರೂಪಗಳನ್ನೂ ಅ

ವರ ಸ್ವಭಾವಗಳನ್ನೂ ವಿಶದೀಕರಿಸುತ್ತಾ ಯಾವ ಮಹರ್ಷಿಯು ಶ್ರೀವಿಷ್ಣು ಪುರಾಣರತ್ನವನ್ನು ರಚಿಸಿ ಪ್ರಪಂಚಕ್ಕೆ ದಾನ ಮಾಡಿದನೋ ಆ ಪರಾಶರ ಮಹರ್ಷಿಯ ಜ್ಞಾಪಕಾರ್ಥವಾಗಿ ಒಬ್ಬ ಭಾಗವತೋತ್ತಮನಿಗೆ ಆ ಪುಣ್ಯ ನಾಮವನ್ನೂ ಮತ್ತೊಬ್ಬನಿಗೆ ಶಠಗೋಪನೆಂಬ ನಾಮವನ್ನೂ ಇಟ್ಟು ಸ್ಥಿರ ಪಡಿಸುವೆನು'' ಎಂದು ಮೂರು ಪ್ರತಿಜ್ಞೆಗಳನ್ನು ಮಾಡಿದರು. ಆಶ್ಚರ್ಯ ವಾಶ್ಚರ್ಯವು! ಅವರು ಆ ಪ್ರತಿಜ್ಞಾವಚನಗಳನ್ನು ನುಡಿಯುತ್ತಿದ್ದಂತೆಯೇ ಒಂದೊಂದು ವಚನಕ್ಕೆ ಒಂದೊಂದರಂತೆ ಆ ಬೆರಳುಗಳು ನೆಟ್ಟಗಾದುವು. ಅ ಲ್ಲಿದ್ದವರೆಲ್ಲರೂ ರಾಮಾನುಜರ ಪ್ರಭಾವಕ್ಕೆ ಪರಮಾಶ್ಚರ್ಯಪಟ್ಟರು. ರಾ ಮಾನುಜರೂ ಅಂತ್ಯಸಂಸ್ಕಾರವು ನೆರವೇರಿದನಂತರ ಅಲ್ಲಿಂದ ಹೊರಟು ಕಾಂ ಚೀಪಟ್ಟಣವನ್ನು ಸೇರಿ ಎಂದಿನಂತೆ ಸ್ವಾಮಿಸೇವೆಯಲ್ಲಿ ನಿರತರಾಗಿದ್ದರು.

ಕಾಂಚಿಯನ್ನು ಸೇರಿದ ಮೇಲೆ, ರಾಮಾನುಜರಿಗೂ ಕಂಚೀಪೂರ್ಣರಿ ಗೂ ಸ್ನೇಹ-ಸಂಬಂಧವು ಮತ್ತೂ ಬಲಪಟ್ಟಿತು. ಒಂದು ಕ್ಷಣವೂ ಬಿಟ್ಟು ಅಗಲದಾದರು. ಒಂದು ದಿನ ಅವರನ್ನು ತಮ್ಮ ಮನೆಗೆ ಕರೆದು ಆತಿಥ್ಯಮಾ ಡಿ ಆ ಭಕ್ತವರ್ಯರ ಶೇಷಾನ್ನವನ್ನು ಗ್ರಹಣಮಾಡಿ ಕೃತಾರ್ಥರಾಗಬೇಕೆಂ ದು ಆಶೆಗೊಂಡು ರಾಮಾನುಜರು ಅವರನ್ನು ಭೋಜನಕ್ಕೆ ಆಹ್ವಾನಿಸಿದರು. ಮತ್ತು ಆ ಸಂಗತಿಯನ್ನು ಮನೆಯಲ್ಲಿ ಪತ್ನಿಯೊಂದಿಗೂ ಹೇಳಿದರು. ರಾಮಾ ನುಜರ ಪತ್ನಿಯು ಕರ್ಮಠ ಬ್ರಾಹ್ಮಣರ ಮನೆಯ ಹೆಣ್ಣುಮಗಳಾದ್ದರಿಂದ ಆಕೆಗೆ ಭಕ್ತನೆಂಬ ಮಾತ್ರದಿಂದ ಶೂದ್ರಜಾತಿಯವನನ್ನು ಸತ್ಕರಿಸುವುದು ಮೆಚ್ಚಿಕೆ ಯಾಗಲಿಲ್ಲ. ಆದರೂ ಪತಿಯ ಆಜ್ಞೆಯನ್ನು ಮೀರಲಾರದೆ ಅಡಿಗೆಯನ್ನೇನೋ ಮಾಡಿಟ್ಟಳು. ಅಷ್ಟರಲ್ಲಿ ಕಂಚೀಪೂರ್ಣರೂ ಮನೆಗೆ ಬಂದರು. ಅವರಿಗೆ ಎಡೆಯನ್ನು ಬಡಿಸಿ ಆತಿಥ್ಯ ಮಾಡುವ ವೇಳೆಗೆ ರಾಮಾನುಜರು ಬಹು ಆವ ಶ್ಯಕವಾದ ಒಂದು ಕೆಲಸಕ್ಕಾಗಿ ಹೊರಕ್ಕೆ ಹೋಗಬೇಕಾಯಿತು. ಆಗಲಾ ಗುರುಭಕ್ತರು ಆ ಭಕ್ತಶ್ರೇಷ್ಠರನ್ನು ಭೋಜನಕ್ಕೆ ಕೂರಿಸಿ, ಯೋಗ್ಯರೀತಿ ಯಿಂದ ಉಪಚರಿಸುವಂತೆ ಹೆಂಡತಿಗೆ ಹೇಳಿ, ಅವರ ಅಪ್ಪಣೆಯನ್ನೂ ಪಡೆದು ಹೊರಕ್ಕೆ ನಡೆದರು. ಆದರೆ ರಾಮಾನುಜರು ಮನೆಗೆ ಬರುವ ವೇಳೆಗೆ ಕಂ ಚೀಪೂರ್ಣರು ಎಂತಹ ಹೇಗೋ ಭೋಜನವನ್ನು ತೀರಿಸಿಕೊಂಡು ಹೊರಟು ಹೋಗಿದ್ದರು. ಮತ್ತು ಅವರ ಪತ್ನಿಯು ಆತನ ಎಲೆಯನ್ನು ಎತ್ತಿ ತಿಪ್ಪೆಗೆ

ಬಿಸುಟು, ಮೈಲಿಗೆಯಾಯಿತೆಂದು ಕೆರೆಯಲ್ಲಿ ಮುಳುಗಿ ಸ್ನಾನ ಮಾಡುತ್ತಿದ್ದಳು. ರಾಮಾನುಜರು ಬಂದು ನೋಡಿ ತಮ್ಮ ಉದ್ದೇಶವು ಈಪರಿಭಂಗವಾದುದಕ್ಕಾಗಿ ಬಹು ಸಂತಾಪಗೊಂಡರು —

ಅತ್ತ ಶ್ರೀರಂಗದಲ್ಲಿ ಯಾಮುನಾಚಾರ್ಯರ ಶಿಷ್ಯರೆಲ್ಲರೂ ಕಲೆತು ತಮ್ಮ ಗುರುಗಳ ತರುವಾಯ ಆ ಪೀಠಕ್ಕೆ ಕಂಚಿಯಲ್ಲಿದ್ದ ಶ್ರೀರಾಮಾನುಜರೇ ತಕ್ಕವರೆಂದೂ ಅವರನ್ನು ಕರೆತರಬೇಕೆಂದೂ ಪುನಃ ಪೆರಿಯನಂಬಿಯಾರ್ರನ್ನು ಕಂಚಿಗೆ ಕಳುಹಿಸಿದರು ಇತ್ತ ರಾಮಾನುಜರು ಆಚಾರ್ಯರ ಮೃತದೇಹದೆದುರಿಗೆ ಮಾಡಿದ ಪ್ರತಿಜ್ಞೆಗಳು ಕೊನೆಗಾಣುವ ಮಾರ್ಗವೇನೆಂದು ಸದಾ ಹಂಬಲಿಸುತ್ತಾ, ಆ ವಿಷಯದಲ್ಲಿ ಶ್ರೀವರದರಾಜಸ್ವಾಮಿಯ ಆಜ್ಞೆಯನ್ನು ತಿಳಿದು ತನ್ನನ್ನು ಉದ್ಧರಿಸಬೇಕೆಂದು ಕಂಚೀಪೂರ್ಣರನ್ನೇ ಮೊರೆಹೊಕ್ಕರು. ಕಂಚೀಪೂರ್ಣರೂ ಒಂದಾನೊಂದುದಿನ ಸ್ವಾಮಿಯ ಸನ್ನಿಧಿಯಲ್ಲಿ ರಾಮಾನುಜರ ಈ ವಿಚಾರವನ್ನು ವಿಜ್ಞಾಪಿಸಲು ಭಗವಾನನು, " (೧) ನಾನೇ ಜಗತ್ಕಾರಣಭೂತನಾದ ಪರಾಪರವಸ್ತುವು. (೨) ಜೀವೇಶ್ವರರಿಗೆ ನಿಶ್ಚಯವಾಗಿಯೂ ಭೇದವುಂಟು. (೩) ಮುಕ್ತಿಯನ್ನು ಅಪೇಕ್ಷಿಸುವವರಿಗೆ ಪ್ರಪತ್ತಿಯೇ ಪರಮೋಪಾಯವು. (೪) ನನ್ನ ಭಕ್ತರು ಮರಣಕಾಲದಲ್ಲಿ ಭಗವನ್ನಾಮವನ್ನು ಉಚ್ಚರಿಸದಿದ್ದರೂ ಬಾಧಕವಿಲ್ಲ. (೫) ನನ್ನ ಭಕ್ತರು ದೇಹಾವಸಾನದಲ್ಲಿ ಮೋಕ್ಷವನ್ನು ಹೊಂದುವರು (೬) ಮಹಾಪೂರ್ಣರನ್ನೇ ಆಚಾರ್ಯರನ್ನಾಗಿ ಕೈಕೊಂಡು ರಾಮಾನುಜರು ಉಪದೇಶ ಹೊಂದಲಿ" ಎಂದು ನುಡಿದನು. ಮಾರನೆಯ ಪ್ರಾತಃಕಾಲ ಕಂಚೀಪೂರ್ಣರು ಭಗವಾನನ ಈ ಆಜ್ಞಾವಚನಗಳನ್ನು ರಾಮಾನುಜರಿಗೆ ತಿಳಿಸಿದರು. ರಾಮಾನುಜರೂ, ಅವರಿಗೇ ಸಂಸಾರದಲ್ಲಿ ಬೇಸತ್ತಿದ್ದುದರಿಂದ ಮಹಾಪೂರ್ಣರನ್ನು ಕಂಡು ಉಪದೇಶ ಹೊಂದಲಾಶಿಸಿ ಶ್ರೀರಂಗವನ್ನು ಕುರಿತು ಹೊರಟರು.

ಮಾರ್ಗಮಧ್ಯದಲ್ಲಿ ಶ್ರೀರಂಗದಿಂದ ಕಂಚಿಯನ್ನು ಕುರಿತು ಹೊರಟಿದ್ದ ಪೆರಿಯನಂಬಿಯವರ ದರ್ಶನವಾಯಿತು. ಅಕಸ್ಮಾತ್ತಾಗಿ ಪ್ರಾಪ್ತವಾದ ಈ ಸುಚಿಹ್ನೆಯು ರಾಮಾನುಜರಿಗೆ ಪರಮಾನಂದವನ್ನುಂಟುಮಾಡಿತು. ಅವರು ಒಡನೆ ನಂಬಿಯವರ ಪಾದಗಳಿಗೆರಗಿ ಅವುಗಳನ್ನು ಆನಂದಬಾಷ್ಪಗಳಿಂದ ಅಭಿಷೇಕಿಸಿದರು. ಮತ್ತು ಶ್ರೀವರದರಾಜಸ್ವಾಮಿಯ ಆಜ್ಞೆಯನ್ನೂ ತಿಳಿಸಿ,

ಜ್ಞಾನ ಬೋಧೆ ಮಾಡಿ ತಮ್ಮನ್ನು ಕೃತಾರ್ಥರನ್ನಾಗಿಸಬೇಕೆಂದು ಪ್ರಾರ್ಥಿಸಿದರು ಪೆರಿಯನಂಬಿಯವರು ಕಂಚಿಗೆ ಸೇರಿ ಅನಂತರ ಉಪದೇಶಕಾರ್ಯವು ನಡೆಯಬಹುದೆಂದು ಹೇಳಿದರೂ ರಾಮಾನುಜರು ಅಷ್ಟು ಸಾವಕಾಶವನ್ನೂ ಒಪ್ಪದಾದರು ಒಡನೆ ಅಲ್ಲೇ ದೇವಸ್ಥಾನದ ಹಿಂದಿದ್ದ ಒಂದು ಬಕುಳ ವೃಕ್ಷದ ಕೆಳಗೆ ಕುಳ್ಳಿರಿಸಿ, ಅವರ ಮಸ್ತಕದ ಮೇಲೆ ತಮ್ಮ ಬಲಹಸ್ತವನ್ನೂ ಎದೆಯ ಮೇಲೆ ಎಡದ ಹಸ್ತವನ್ನೂ ಇಟ್ಟು, ನಂಬಿಯವರು ಅವರ ತೆರೆದ ಕಣ್ಣುಗಳನ್ನು ತಮ್ಮ ಗುರಿಯಿಟ್ಟ ದೃಷ್ಟಿಯಿಂದ ನೋಡುತ್ತಾ ತಮ್ಮ ಗುರುವರ್ಯರಾದ ಯಾಮುನಾಚಾರ್ಯರನ್ನು ಸ್ಮರಿಸಿಕೊಂಡು ಸಂಪ್ರದಾಯವನ್ನನುಸರಿಸಿ ಮಹಾವಾಕ್ಯವನ್ನು ಅವರ ಬಲದ ಕಿವಿಯಲ್ಲಿ ನುಡಿದರು ಮತ್ತು ಶ್ರೀ ಯಾಮುನಾಚಾರ್ಯರ ಪ್ರತಿನಿಧಿಯಾಗಿ ತಾವು ಆ ಕೆಲಸಮಾಡಿದೆವೆಂದೂ ಆದುದರಿಂದ ಶ್ರೀ ಆಳವಂದಾರ್ ಸ್ವಾಮಿಯವರೇ ಅವರ ಗುರುಗಳೆಂದೂ ಹೇಳಿದರು ರಾಮಾನುಜರ ಆನಂದಕ್ಕೆ ಎಣೆಯಿಲ್ಲವಾಯಿತು ತಮ್ಮ ಉನ್ನತಿಗೆ ಕಾರಣರಾದ ಪೆರಿಯನಂಬಿಯವರ ಪಾದಗಳಿಗೆ ಪುನಃ ನಮಸ್ಕರಿಸಿ ಅಲ್ಲಿಂದ ಹೊರಟು ಇಬ್ಬರೂ ಕಾಂಚೀಪಟ್ಟಣವನ್ನು ನೇರಿದರು.

ಮುಂದೆ ಆರು ತಿಂಗಳ ಕಾಲ ಪೆರಿಯನಂಬಿಯವರೂ ರಾಮಾನುಜರೂ ಏಕತ್ರ ವಾಸಮಾಡಿದರು ಮಹಾಪೂರ್ಣರು ರಾಮಾನುಜರಿಗೆ ಶ್ರೀ ಯಾಮುನಾಚಾರ್ಯರಿಂದ ಬೋಧಿಸಲ್ಪಟ್ಟಿದ್ದ ಶ್ರೀವೈಷ್ಣವ ಪೂರ್ವಪದ್ಧತಿಗಳನ್ನೆಲ್ಲಾ ಸಂಪೂರ್ಣವಾಗಿ ಬೋಧಿಸಿದರು ಹೀಗೆ ಶ್ರೀರಾಮಾನುಜರು ಪಾರಲೌಕಿಕ ವಿಷಯಗಳಲ್ಲಿ ಅಭಿವೃದ್ಧಿ ಹೊಂದುತ್ತಿದ್ದರೂ ಲೌಕಿಕವಾಗಿ ಅವರಿಗೆ ಪತ್ನಿಯಿಂದ ಮನಶ್ಶಾಂತಿಯಿರಲಿಲ್ಲವೆಂಬುದು ಈವರೆಗೇ ತಿಳಿದಿದೆಯಲ್ಲವೆ! ಒಂದು ದಿನ ಅವರು ಪಕ್ಕದ ಕೊಳದಲ್ಲಿದ್ದಾಗ್ಗೆ ಒಬ್ಬ ನಾಮಧಾರಿ ಭಿಕ್ಷುಕನು ಬಂದು ಅನ್ನಕ್ಕಾಗಿ ಅವರನ್ನು ಯಾಚಿಸಿದನು ಅವರು ಮನೆಗೆ ಹೋಗಿ ತಮ್ಮ ಹೆಂಡತಿಯಿಂದ ಕವಳವನ್ನು ಹಾಕಿಸಿಕೊಳ್ಳೆಂದು ಹೇಳಿಕಳುಹಿಸಿದರು ಆದರೆ ಹೆಂಡತಿಯು ಆ ಭಿಕ್ಷುಕನನ್ನು ಗದರಿಸಿ ಮನೆಯಲ್ಲಿ ಏನೂ ಇಲ್ಲವೆಂದು ಏನೂ ಹಾಕದೆಯೇ ಕಳುಹಿಬಿಟ್ಟಳು ರಾಮಾನುಜರು ಮನೆಗೆ ಬಂದು ಪಾತ್ರೆಯಲ್ಲಿ ಅನ್ನವಿದ್ದರೂ ಭಿಕ್ಷುಕನಿಗೆ ಹಾಕದೆ ತಮ್ಮ ಮಾತನ್ನು ತಿರಸ್ಕರಿಸಿದುದಕ್ಕಾಗಿ ನೊಂದುಕೊಂಡರು. ಬೇರೊಂದು ದಿನ, ಒಂದೇ ಮನೆ

ಯಲ್ಲಿ ವಾಸಿಸುತಿದ್ದ ಪೆರಿಯನಂಬಿಯುವರ ಹೆಂಡತಿಗೂ ರಾಮಾನುಜರ ಹೆಂಡತಿಗೂ, ಕೊಳದಿಂದ ನೀರು ತರುತ್ತಿದ್ದಾಗ ಒಬ್ಬರ ಪಾತ್ರೆಯಿಂದ ಮತ್ತೊಬ್ಬರ ಪಾತ್ರೆಗೆ ನೀರು ಹಾರಿ ಸಿಡಿದುದೆಂಬ ಅಲ್ಪ ಕಾರಣಕ್ಕಾಗಿ, ಮಹಾ ವಾಗ್ಯುದ್ಧಕ್ಕೆ ಪ್ರಾರಂಭವಾಯಿತು ರಾಮಾನುಜರ ಹೆಂಡತಿಯು ಪೆರಿಯ ನಂಬಿಯವರ ಗೃಹಕೃತ್ಯಕ್ಕೆ ಸಂಬಂಧಿಸಿದ ಅನೇಕ ಸಂಗತಿಗಳನ್ನು ಎತ್ತಿ ಹಾಕಿ ನಿಂದಿಸತೊಡಗಿದಳು ಈ ಸಂಗತಿಯು ನಂಬಿಯುವರಿಗೆ ತಿಳಿಯಿತು. ಒಡನೆ ಅವರು ತಮ್ಮ ಹೆಂಡತಿಯನ್ನೇ ಸಮಾಧಾನವಾಗಿಸಿ, ರಾಮಾನುಜರು ಈ ಸಂಗತಿಯುನ್ನು ತಿಳಿದು ನೊಂದುಕೊಳ್ಳುವುದಕ್ಕೆ ಮುಂಚಿತವಾಗಿಯೇ, ಆ ಮನೆಯುನ್ನೇ ಬಿಟ್ಟು ಪತ್ನಿಯೊಂದಿಗೆ ಶ್ರೀರಂಗವನ್ನು ಕುರಿತು ಪ್ರಯಾಣ ಮಾಡಿಬಿಟ್ಟರು ರಾಮಾನುಜರು ಮನೆಗೆ ಬಂದಮೇಲೆ ಆ ವೃತ್ತಾಂತವನ್ನು ತಿಳಿದು, ಮಹಾ ದುಃಖವುಂಟಾಗಲು, ತಮ್ಮ ಹೆಂಡತಿಯನ್ನು ಕುರಿತು, "ಹೀಗೆ ಮೇಲೆಮೇಲೆ ನನ್ನ ಮನಸ್ಸಿಗೆ ದುಃಖವನ್ನುಂಟುಮಾಡುತ್ತಿರುವ ನಿನ್ನೊಂದಿಗೆ ಕೂಡಿರುವುದು ಇನ್ನು ಸಾಧ್ಯವಿಲ್ಲ! ಇನ್ನು ನೀನು ನಿನ್ನನ್ನು ಹೆತ್ತವರ ಮನೆಗೆ ಹೊರಟುಹೋಗು" ಎಂದು ನುಡಿದು, ಮುಂದೊಂದುದಿನ ಯುಕ್ತ ಉಪಾಯವನ್ನೊಂದನ್ನು ಸಾಧಿಸಿ, ಆಕೆಯ ಸಮಸ್ತ ವಸ್ತ್ರಾಭರಣಗಳೊಂದಿಗೆ ತೌರುಮನೆಗೆ ಸಾಗಿಸಿಬಿಟ್ಟರು. ಮುಂದೆ ಜನ್ಮಾವಧಿ ಆಕೆಯನ್ನು ಸ್ಮರಿಸಿಕೊಳ್ಳಲೇ ಇಲ್ಲ ಅವರ ಭಾಗಕ್ಕೆ ಆಕೆಯು ಸತ್ತಂತೆಯೇ ಆಗಿಹೋಯಿತು!

ರಾಮಾನುಜರು ಗೃಹಸ್ಥರಾಗಿದ್ದು ಸುಖಪಟ್ಟುದು ಅತಿಶಯವಾಯಿತು! ಆಗಲವರು ಒಂದು ದಿನ ಶ್ರೀವರದರಾಜಸ್ವಾಮಿಗೆ ನಮಸ್ಕರಿಸಿ "ಪ್ರಭೋ ನನ್ನನ್ನು ಈ ಸಂಸಾರಪಾಶದಿಂದ ತೊಲಗಿಸಿ ಸನ್ಯಾಸವನ್ನು ಅನುಗ್ರಹಿಸು ಆ ಮೂಲಕ ನಿನ್ನ ಭಕ್ತರನ್ನು ಸೇವಿಸಲು ಅವಕಾಶವಿತ್ತು ಈ ದೀನನ ಸೇವೆಯುನ್ನು ಸ್ವೀಕರಿಸು ನನಗೆ ತ್ರಿದಂಡಕಾಷ್ಟ-ಕಾಷಾಯವಸ್ತ್ರಾದಿಗಳನ್ನು ಅನುಗ್ರಹಿಸಿ ರಕ್ಷಿಸು" ಎಂದು ಪ್ರಾರ್ಥಿಸಿ ಅನಂತಸರಸ್ಸಿನಲ್ಲಿ ಸ್ನಾನ ಮಾಡಿ ಬಂದು ಕೈಜೋಡಿಸಿಕೊಂಡು ನಿಂತರು ಸ್ವಾಮಿಯೂ, ತನ್ನ ಮುಖ್ಯ ಅರ್ಚಕನ ಮೂಲಕ ಆ ತ್ರಿದಂಡಾದಿಗಳನ್ನು ಅವರಿಗೆ ಪ್ರಸಾದಿಸಿ, ಇನ್ನು ಮುಂದೆ, ಈ ನನ್ನ ಭಕ್ತವರನು "ಶ್ರೀ ರಾಮಾನುಜಮುನಿ" "ಯತಿರಾಜ"

ಎಂದು ಪ್ರಸಿದ್ಧನಾಗಲಿ ಎಂದು ಅನುಗ್ರಹಿಸಿದನು ಇಂತು ಶ್ರೀರಾಮಾನುಜರು, ಸನ್ಯಾಸಾಶ್ರಮಸ್ವೀಕಾರಮಾಡಿ ಜಗತ್ತನ್ನು ಉದ್ಧರಿಸಲು ಕಟಿಬದ್ಧರಾದರು ಶ್ರೀವರದರಾಜನ ಆಜ್ಞಾನುಸಾರವಾಗಿ ಕಂಚೀಪೂರ್ಣರು ಸಕಲ ಸೋಬಸ್ಕರಗಳಿಂದೊಡಗೂಡಿದ ಒಂದು ಮಠವನ್ನು ಅವರಿಗಾಗಿ ಏರ್ಪಡಿಸಿಕೊಟ್ಟರು. ಆ ಮಠದಲ್ಲಿ ಶ್ರೀಯತಿವರರು, ಭವರೋಗಶ್ರಾಂತಜನ ರಕ್ಷಣೈಕ ಧುರೀಣರಾಗಿ, ಶ್ರೀವರದರಾಜ-ಸ್ವಾಮಿಯ ಪಾದಕಮಲ ಧ್ಯಾನಾಸಕ್ತರಾಗಿ, ತತ್ವವಿಚಾರ ಚಿಂತಾಪರರಾಗಿ ನೆಲೆಸಿದ್ದರು



## ಅಧ್ಯಾಯ ೬ "ಗ್ರಂಥರಚನೆ"

ಪ್ರಾಪಂಚಿಕವಾಗಿ ತೋರುವ ಮನುಷ್ಯನ ಜೀವಿತಾವಸ್ಥೆಗಳಿಗೂ ಅವನ ಆತ್ಮಿಕ ಬೆಳೆವಣಿಗೆಗೂ, ನಮಗೆ ಬೇರೆಬೇರೆ ಎಂಬಂತೆ ಕಾಣುತ್ತಿದ್ದರೂ, ನಿಕಟಸಂಬಂಧವಿರುತ್ತದೆ ಪ್ರಪಂಚದಲ್ಲಿರುವ ಎಲ್ಲಾ ವೃತ್ತಿಗಳೂ ಸತ್ವರಜಸ್ತಮೋಗುಣಗಳ ಹದ್ದನ್ನು ಮೀರಿ ಹೋಗಲರಿಯವಾದ್ದರಿಂದ ಮಾನವನೂ ತನ್ನ ಆತ್ಮಿಕ ಯೋಗ್ಯತೆಯನ್ನು ಅನುಸರಿಸಿಯೇ ಅವುಗಳನ್ನು ಕೈಕೊಳ್ಳುವನು ಒಬ್ಬನು ಗೃಹಸ್ಥನಾಗಿರಲು ಅತಿಶಯ ಕುತೂಹಲ ಪಡುವುದಕ್ಕೂ ಮತ್ತೊಬ್ಬನು ಬಯಸಿ ಒಯಸಿ ವಿರಕ್ತನಾಗಿ ಸನ್ಯಾಸಿಯಾಗಿರಲಿಕ್ಕೂ, ಒಬ್ಬನು ನ್ಯಾಯಮಾರ್ಗವನ್ನು ತಪ್ಪದೆ ಪಾಪಭೀತನಾಗಿ ಸಾತ್ವಿಕವೃತ್ತಿ ಸಂಪನ್ನನಾಗಿರುವುದಕ್ಕೂ ಮತ್ತೊಬ್ಬನು ನ್ಯಾಯಾನ್ಯಾಯ ಪಾಪಪುಣ್ಯಾದಿಗಳನ್ನು ಗಮನಿಸದೆ ಧನಕನಕಾದಿಗಳನ್ನು ಗಳಿಸಿ ಬೇರೊಬ್ಬರನ್ನು ಪೀಡಿಸಿ ಮುಳುಗಿಸಿಯಾದರೂ ತಾನು ಸುಖಭೋಗಗಳಲ್ಲಿ ಉರುಳಾಡುವುದಕ್ಕೂ ಹೀಗೆ ಎಲ್ಲಕ್ಕೂ ಅವನವನ ಆತ್ಮಿಕ ಬೆಳೆವಣಿಗೆಯೇ ಕಾರಣವು ಒಬ್ಬನು ತನ್ನ ದೇಹವನ್ನಾದರೂ ಕೊಟ್ಟು ಪರೋಪಕೃತಿಯ ಕಾರ್ಯಗಳನ್ನು ಮಾಡಿ ತನ್ನ ಸಮಸ್ತವನ್ನೂ ತ್ಯಾಗಮಾಡುತ್ತಿರಲು ಬೇರೊಬ್ಬನು ಪರರ ಜೀವವನ್ನಾದರೂ ತೆಗೆದು ಹಣಹೊನ್ನುಗಳನ್ನು ಗಳಿಸುತ್ತಿರುವನೇಕೆ! ಒಬ್ಬೊಬ್ಬನೂ ಅವನವನ ಆತ್ಮಿಕ ಅಭಿವೃದ್ಧಿಯನ್ನು ಅನುಸರಿಸಿ ಪ್ರಾಪಂಚಿಕ ಅವಸ್ಥೆ

ಗಳೆಂಬ ಪಾವಟಿಗೆಗಳನ್ನು ಒಂದೊಂದನ್ನಾಗಿ ಏರಬೇಕಾದುದು ತಪ್ಪದು! ಹಾಗಿಲ್ಲದಿದ್ದರೆ, ಅತ್ಯುತ್ಕೃಷ್ಟ, ಅನರ್ಘ್ಯ ಕಾರ್ಯಗಳಿಂದಾಗುವ ಪರಿಣಾಮವನ್ನು ಕಣ್ಣುಗಳಿಂದ ನೋಡುತ್ತಿದ್ದರೂ ಹಾಗೆ ಮಾಡತಕ್ಕುದೇ ಸಾಧುವೆಂದು ಒಪ್ಪಿಕೊಳ್ಳುತ್ತಿದ್ದರೂ ಏಕೆ ಅನೇಕರು ತಮ್ಮ ದುಷ್ಪಥವನ್ನು ತ್ಯಜಿಸಿ ಆ ಕಾರ್ಯಗಳನ್ನು ಕೈಕೊಳ್ಳಲು ಅಸಕ್ತರಾಗದಿರುವರು? ಅಲ್ಲದೆ ಅವನವನ ಯೋಗ್ಯತಾನುಸಾರ ಯಾವ ಯಾವ ಸ್ಥಾನವು ಸ್ವಾಭಾವಿಕವಾದುದೋ ಅದರಲ್ಲೇ ಅವನ ನಿಜವಾದ ಬೆಳವಣಿಗೆಯಾಗುವುದು. ಸನ್ಯಾಸಿಯು ಗೃಹಸ್ಥನಾಗಿರುವುದೂ ತಪ್ಪು ಗೃಹಸ್ಥನಾಗಿರಲು ಹಲುಬಿ ಹಂಬಲಿಸುತ್ತಿರುವವನು, ಬಲವಂತಕ್ಕಾಗಲೀ ಗೌರವ-ಪೂಜ್ಯತೆಗಳ ಆಸೆಗಾಗಲೀ ಒಳಪಟ್ಟು ಸನ್ಯಾಸಿಯಾಗುವುದಾಗಲೀ ತಪ್ಪು ಜಲಚರಕ್ಕೆ ನೀರೇ ಯೋಗ್ಯಸ್ಥಾನವು! ಭೂಚರಗಳಿಗೆ ಭೂಮಿಯೇ ಸರ್ವೋತ್ತಮಸ್ಥಳವು ಹೀಗೆಯೇ ಎಲ್ಲವೂ!—

ಶ್ರೀರಾಮಾನುಜ ಯತಿವರ್ಯರು ಈಗ ತಮಗೆ ಅತ್ಯಂತ ಪ್ರಿಯಕರವಾದ ಸ್ಥಾನವನ್ನು ಹೊಂದಿದರು ಸಂಸಾರಪಾಶವು ಕಡಿದುಹೋಯಿತು. ಮನಸ್ಸು ಸಂಪೂರ್ಣವಾಗಿ ಭಗವದ್ವಿಷಯ ಚಿಂತನೆ, ಶಾಸ್ತ್ರಾರ್ಥವಿಚಾರಗಳಲ್ಲಿ ಮುಳುಗಿರಲು ಅವಕಾಶ ದೊರೆಯಿತು. ಶ್ರೀರಾಮಾನುಜರು ಭಕ್ತಿಪಂಥದ ಉದ್ಧಾರಕ್ಕಾಗಿ ಬದ್ಧಕಂಕಣರಾಗಿ ನಿಂತರೆಂಬುದನ್ನು ತಿಳಿದೊಡನೆಯೇ ಅನೇಕರು ಶಿಷ್ಯರಾಗಿ ಅವರಲ್ಲಿ ಬಂದು ಸೇರಿದರು ಪ್ರಪ್ರಥಮದಲ್ಲೇ ಶ್ರೀವತ್ಸಾಂಕ ಅಥವ ಕೂರನಾಥನೆಂಬ ಶ್ರೀಮಂತನು ಅವರ ಶಿಷ್ಯನಾದನು ಆತನು ಕಂಚಿಗೆ ಸಮೀಪದಲ್ಲಿದ್ದ ಕೂರಂ ಎಂಬ ಊರಲ್ಲಿ ದೊಡ್ಡ ಶ್ರೀಮಂತನಾಗಿದ್ದರೂ ತನ್ನ ಸಮಸ್ತ ಆಸ್ತಿಯನ್ನೂ ತ್ಯಜಿಸಿ ವಿರಕ್ತನಾಗಿ ಯತಿರಾಜರನ್ನು ಆಶ್ರಯಿಸಿ ಅವರ ಪಟ್ಟಶಿಷ್ಯನಾದನು ಇನ್ನೂ ಅನೇಕ ಸಾಮಾನ್ಯರು ಆತನನ್ನನುಸರಿಸಿ ಯತಿವರ್ಯರ ಶಿಷ್ಯವರ್ಗಕ್ಕೆ ಸೇರಿದರು ಶ್ರೀಯವರಿಗೆ ಗುರುವಾಗಿದ್ದ ಯಾದವ ಪ್ರಕಾಶರೂ ಅವರಲ್ಲಿಗೆ ಬಂದು ವೈಷ್ಣವಪಂಥ-ಪಂಚಸಂಸ್ಕಾರಾದಿಗಳ ವಿಷಯದಲ್ಲಿ ಚರ್ಚಿಸಿ ತೃಪ್ತರಾಗಿ ಗೋವಿಂದದಾಸರೆಂಬ ನಾಮವನ್ನಿಟ್ಟುಕೊಂಡು ಅವರ ಶಿಷ್ಯರಾದರು ಮತ್ತು ಶ್ರೀಯವರ ಆಜ್ಞಾನುಸಾರ ವಿಶಿಷ್ಟಾದ್ವೈತ ಸಿದ್ಧಾಂತಾನುಸಾರವಾಗಿ 'ಯತಿಧರ್ಮಸಮುಚ್ಚಯ' ಎಂಬ ಗ್ರಂಥವನ್ನೂ ಬರೆದು ಒಪ್ಪಿಸಿದರು. ಶಿಷ್ಯಸಂಪತ್ತು

ದಿನದಿನಕ್ಕೆ ವೃದ್ಧಿಯಾಗುತ್ತ ನಡೆಯಿತು ಹೀಗಿರುತ್ತಿರಲು ಅತ್ತ ಶ್ರೀರಂಗದಲ್ಲಿದ್ದ ಯಾಮುನಾಚಾರ್ಯರ ಶಿಷ್ಯಮಂಡಳಿಯು ಶ್ರೀರಾಮಾನುಜರನ್ನು ತಮ್ಮ ಗುರುವರ್ಯರ ಪೀಠದಮೇಲೆ ಕೂರಿಸಬೇಕೆಂದು ಅಭಿಲಾಷೆಗೊಂಡು ಅವರನ್ನು ಕರೆತರುವುದಕ್ಕಾಗಿ, ಆಳವಂದಾರ್ ಸ್ವಾಮಿಯವರ ಪುತ್ರರೂ ಶಿಷ್ಯರೂ ಆದ ತಿರುವರಂಗಪ್ಪೆರುಮಾಳ್ ಐಯ್ಯರ್ ಎಂಬುವರನ್ನು ಕಳುಹಿಸಿದರು ಶ್ರೀಯವರು ಅವರೊಂದಿಗೆ ಶ್ರೀರಂಗಕ್ಕೆ ಬಿಜಮಾಡಿಸಲು ಅಲ್ಲಿ ಆ ಭಕ್ತಮಂಡಳಿಯು ಅವರನ್ನು ಅತಿಶಯ ಮಹೋತ್ಸವದಿಂದ ಗೌರವಿಸಿ, ಆಚಾರ್ಯಪೀಠದ ಮೇಲೆ ಕೂರಿಸಿ, ಆ ಪೀಠದ ಸಮಸ್ತ ಅಧಿಕಾರಗಳನ್ನೂ ಅವರಿಗೆ ಒಪ್ಪಿಸಿದರು ಕೂರೇಶನು ತನ್ನ ಅನ್ಯಾದೃಶವಾದ ಸಂಪತ್ತನ್ನೂ-ಆಗಿನ ವೈಭವವನ್ನೂ ಕನಸಿನಲ್ಲೂ ಎಣಿಸದೆ ಆ ಸಾಧುಸಹವಾಸದಲ್ಲಿ ಶ್ರೀರಂಗದಲ್ಲಿ ನಿತ್ಯಭಿಕ್ಷೆಯಿಂದ ಜೀವಿಸುತ್ತಾ ಗುರುಸೇವಾತತ್ಪರನಾಗಿದ್ದನು—

ಶ್ರೀರಾಮಾನುಜರು ಅಷ್ಟುಮಟ್ಟಿಗೆ ವಿದ್ಯಾಸಿದ್ಧಿಗಳಾಗಿದ್ದರೂ, ತಮ್ಮ ವಿಶಿಷ್ಟಾದ್ವೈತ ಪಂಥವನ್ನು ಸಿದ್ಧಾಂತವನ್ನಾಗಿ ಪ್ರತಿಪಾದಿಸಲು ಇನ್ನೂ ಸ್ವಲ್ಪ ಮಟ್ಟಿಗೆ ಸಿದ್ಧರಾಗಬೇಕಾಗಿತ್ತು ಆಗಲವರು ತಿರುವರಂಗಪ್ಪೆರುಮಾಳ್ ಎಂಬುವರಲ್ಲಿ ತಿರುವಾಯ್‌ಮೊಳಿ ಎಂಬ ಸುಪ್ರಸಿದ್ಧ ದ್ರವಿಡಪ್ರಬಂಧ ಗ್ರಂಥವನ್ನು ಆದ್ಯಂತವಾಗಿ ಪಠಿಸಿದರು. ವೈಷ್ಣವ ಪಂಥದ ತತ್ವಗಳಲ್ಲೊಂದನ್ನು ಬೋಧಿಸಿ ಶ್ರೀಮಹಾಪೂರ್ಣರು ರಾಮಾನುಜರಿಗೆ ಗುರುಸ್ಥಾನದಲ್ಲಿದ್ದುದು ಸರಿಯಷ್ಟೆ! ಮತ್ತೊಂದು ತತ್ವಕ್ಕಾಗಿ ಶ್ರೀಯವರು ಗೋಷ್ಠಿಪೂರ್ಣರ (ತಿರುಕ್ಕೋಟಿಯಾರ್‌ನಂಬಿ) ನ್ನು ಆಶ್ರಯಿಸಿದರು. ಗೋಷ್ಠಿಪೂರ್ಣರು ಬಹು ದಿನಗಳವರೆಗೆ ಅವರಿಗೆ ವಶರಾಗಲಿಲ್ಲ ಹದಿನೆಂಟು ಸಾರಿ, ರಾಮಾನುಜರು ಉಪದೇಶಕ್ಕಾಗಿ ಪ್ರಯತ್ನಿಸಿ ಭಗ್ನೋತ್ಸಾಹರಾದರು. ಕೊನೆಗೆ ಗೋಷ್ಠಿಪೂರ್ಣರು, ಸಂಪ್ರದಾಯ ರೀತಿಯಲ್ಲಿ ಗುರುಸೇವೆಮಾಡಿ ಸಿದ್ಧರಾಗದವರಿಗೆ ಬಹು ಗೋಪ್ಯವಾದ ಆ ತತ್ವವನ್ನು ಬೋಧಿಸಕೂಡದೆಂದು ಬಹು ಖಂಡಿತವಾಗಿ ಆಜ್ಞಾಪಿಸಿ, ಸಕಲ ಪಾಪಕ್ಷಯಕಾರಿಯೂ ಸಮಸ್ತ ಶ್ರೇಯಃಪ್ರದಾಯಕವೂ ಆದ ಆ ಮಹಾತತ್ವವನ್ನು ಅವರಿಗೆ ಉಪದೇಶಿಸಿದರು ಶ್ರೀಯವರಾದರೋ, ಅಂತಹ ಉತ್ತಮ ಗತಿದಾಯಕ ತತ್ವವನ್ನು ಅನೇಕರಿಗೆ ಫಲಪ್ರದವಾಗದಂತೆ ಹೃದಯ ಗುಹೆಯಲ್ಲಿ ಬಚ್ಚಿಟ್ಟುಕೊಳ್ಳುವುದು ಸ್ವಾರ್ಥತೆಯೆಂದು

ಭಾವಿಸಿದರು ಅವರ ಉದಾರಹೃದಯವು ಅಷ್ಟುಮಾತ್ರ ಸ್ವಾರ್ಥತೆಯನ್ನೂ ಸಹಿಸದಾಯಿತು. ಒಡನೆ ಸುತ್ತಲಿದ್ದವರನ್ನೆಲ್ಲರನ್ನೂ ಉದ್ದೇಶಿಸಿ ಆ ತತ್ವಾರ್ಥವನ್ನು ಹೇಳಿಬಿಟ್ಟರು ಆ ಸಂಗತಿಯು ಗೋಷ್ಠಿಪೂರ್ಣರಿಗೂ ತಿಳಿಯಿತು "ಇಂತಹ ಗುರುದ್ರೋಹಕ್ಕೆ ಕಾರಣವೇನು? ಆ ಮಹಾತತ್ವಾರ್ಥವನ್ನು ಇಷ್ಟು ಲಘುವಾಗಿ ಎಲ್ಲರೆದುರಿಗೂ ಹೇಳಿಬಿಡಬಹುದೇ?" ಎಂದು ಆಗ್ರಹಯುಕ್ತರಾಗಿ ರಾಮಾನುಜರನ್ನು ಕೇಳಿದರು ರಾಮಾನುಜರೂ ಹಿಂದೆಗೆಯದೆ ಆ ತಪ್ಪಿತಕ್ಕೆ ಶಿಕ್ಷೆಯನ್ನು ವಿಧಿಸಬೇಕೆಂದರು ಆಗಲವರು, ಆ ತಪ್ಪಿಗೆ ನಿರಂತರ ನರಕವಾಸವೇ ಶಿಕ್ಷೆಯೆಂದರು ಅದನ್ನು ಕೇಳಿದ ಮಹಾಮಹಿಮರಾದ ಶ್ರೀ ಯತಿರಾಜರು, "ದಿವ್ಯ ತತ್ವಪಠನೆಯಿಂದ ಲಕ್ಷಾಂತರ ಮಾನವರು ಭವಬಂಧವನ್ನು ನೀಗಿ ಸದ್ಗತಿಯನ್ನು ಪಡೆಯುತ್ತಿರಲು ಅದಕ್ಕಾಗಿ ಘೋರ ನರಕವಾಸವನ್ನು ಅನುಭವಿಸಲಿಕ್ಕಾದರೂ ನಾನು ಸಿದ್ಧನಿರುವೆನೆ"ಂದರು ಅವರ ಹೃದಯ ವೈಶಾಲ್ಯವನ್ನು ಕಂಡು ನಂಬಿಯವರಿಗೆ ಪರಮಾಶ್ಚರ್ಯವೂ ಆನಂದವೂ ಉಂಟಾದುವು. ಅಲ್ಲದೆ, ಮುಂದೆ ಆ ವೇದಾಂತ ಭಾಗವು 'ರಾಮಾನುಜ ದರ್ಶನ' ವೆಂದು ಪ್ರಸಿದ್ಧವಾಗಲೆಂದೂ ಅನುಗ್ರಹಿಸಿದರು

ಕೆಲದಿನಗಳಾದುವು. ಶ್ರೀಯವರು ತಾವು ಕೈಕೊಂಡ ಕಾರ್ಯಗಳಲ್ಲಿ ತಮಗೆ ಸಹಾಯಕರಾಗಿರಲು, ಚಿಕ್ಕಂದಿನಿಂದಲೂ ತಮ್ಮ ಹೃದಯವನ್ನು ತಿಳಿದಿದ್ದ ಗೋವಿಂದಭಟ್ಟರು ತಮ್ಮೊಂದಿಗಿರಬೇಕಾದುದು ಆವಶ್ಯಕವೆಂದು ಭಾವಿಸಿ, ಅವರನ್ನು ಶೈವಪಂಥದಿಂದ ತಿರುಗಿಸಿ ಕರೆತರುವಂತೆ ಶೈಲಪೂರ್ಣರನ್ನು ಕಳುಹಿಸಿದರು ಅವರು ಗೋವಿಂದಭಟ್ಟರಿಗೆ ವೈಷ್ಣವ ಧರ್ಮವಿಚಾರದಲ್ಲಿ ತೃಪ್ತಿಯನ್ನುಂಟುಮಾಡಿ ತಮ್ಮೊಂದಿಗೆ ಕರೆತಂದರು ಮುಂದೆ ಕೆಲ ದಿನಗಳೊಳಗಾಗಿಯೇ ತಿರುಪತಿಯಲ್ಲಿ ವಾಸಿಸುತ್ತಿದ್ದ ರಾಮಾನುಜರ ಸೋದರಿಯ ಮಗನು ತಮ್ಮ ಸೋದರ ಮಾವಂದಿರ ಪ್ರಾದುರ್ಭಾವವನ್ನು ಕೇಳಿ ಶ್ರೀರಂಗಕ್ಕೆ ಬಂದು ಯತಿರಾಜರ ಶಿಷ್ಯವರ್ಗಕ್ಕೆ ಸೇರಿದನು ಈ ಸಂದರ್ಭದಲ್ಲೇ ರಾಮಾನುಜರ ಪ್ರಾಣಕ್ಕೆ ಅಪಾಯಕಾರಿಯಾದ ಒಂದು ಘಾತುಕ ಕೃತ್ಯವು ನಡೆಯಿತು. ಆಗ ಶ್ರೀರಂಗದಲ್ಲಿ ಶ್ರೀಯವರ ಅಭಿವೃದ್ಧಿಯನ್ನು ಕುರಿತು ಅಸೂಯೆಯಿಂದ ಕುದಿಯುತ್ತಿದ್ದವರೂ ಕೆಲವರಿದ್ದರು. ಅಂಥವರಲ್ಲಿ ಒಬ್ಬ ಗೃ

ಹೆಸ್ಥನು, ಭಿಕ್ಷೆಗಾಗಿ ಬರುವ ರಾಮಾನುಜರಿಗೆ ವಿಷಮಿಶ್ರಿತವಾದ ಅನ್ನವನ್ನು ಹಾಕೆಂದು ತನ್ನ ಹೆಂಡತಿಗೆ ಹೇಳಿದ್ದನು ಪಾಪ ಆ ಸಾಧ್ವಿಯು ತನಗಿಷ್ಟವಿಲ್ಲದಿದ್ದರೂ ಪತಿವಾಕ್ಯವನ್ನು ಮೀರಲಾರದೆ ಅನ್ನಕ್ಕೆ ವಿಷಮಿಶ್ರಮಾಡಿಕೊಂಡು ಸಿದ್ಧವಾಗಿದ್ದಳು. ಯತಿರಾಜರು ಎಂದಿನಂತೆ ಅಹ್ನಿಕಾನಂತರ ಮನೆ ಮನೆಗೆ ಭಿಕ್ಷೆಗೆ ನಡೆದಿರಲು, ಆ ಸಾಧ್ವಿಯು ಅಂಜುತ್ತಂಜುತ್ತಾ ವಿಷಮಿಶ್ರಿತವಾದ ಆ ಅನ್ನವನ್ನು ಅವರ ಭಿಕ್ಷಾಪಾತ್ರೆಗೆ ಹಾಕಿದಳು ಆದರೆ ಒಡನೆ "ಅಕಟಾ ಇದನ್ನು ತಿಂದೊಡನೆಯೇ ನಿರಪರಾಧಿಯಾದ ಈ ಸಾಧುವರ್ಯರು ಮೃತರಾಗುವರಲ್ಲ" ಎಂದು ತೋರುತ್ತಲೇ ಆಕೆಯು ಗಡಗಡನೆ ನಡುಗುತ್ತಾ ಸಾಷ್ಟಾಂಗವಾಗಿ ಪಾದಕ್ಕೆಬಿದ್ದಳು ಸನ್ಯಾಸಿಗಳು ಭಿಕ್ಷೆಗಾಗಿ ಹೋದಾಗ ಭಕ್ತಮರ್ಯಾದೆಯಾದ ನಮಸ್ಕಾರಾದಿಗಳನ್ನು ಮಾಡಕೂಡದೆಂದು ಶಿಷ್ಟಾಚಾರವಿರುವಲ್ಲಿ ಆಕೆಯು ಹಾಗೆ ಮಾಡಿದ್ದಕ್ಕೆ ಕಾರಣವೇನಿರಬಹುದೆಂದು ರಾಮಾನುಜರಿಗೆ ಸಂದೇಹ ತೋರಿತು. ವಿಚಾರಿಸುವಲ್ಲಿ ನಿಶ್ಚಯ ಸಂಗತಿಯು ಹೊರಪಟ್ಟಿತು. ಮುಂದೆ ರಾಮಾನುಜರೇ ಭಿಕ್ಷೆಗಾಗಿ ಹೋಗುವುದನ್ನು ತಪ್ಪಿಸಿ ಅವರ ಶಿಷ್ಯರಲ್ಲೊಬ್ಬರು ಆ ಕೆಲಸ ಮಾಡುತ್ತಿದ್ದರು

ಶ್ರೀರಾಮಾನುಜರ ಪಾಂಡಿತ್ಯ ಸಾಧುತ್ವ ಭಗವನ್ನಿರ್ಭರತ್ವಾದಿ ಪ್ರಭಾವಗಳ ಕೀರ್ತಿಯು ಈವರೆಗೇ ದೇಶದೇಶಗಳಲ್ಲೂ ಹಬ್ಬಿತು ಹತ್ತಿರ ದೂರದ ದೇಶಗಳಿಂದ ಅನೇಕರು ಅವರೊಂದಿಗೆ ವಾಕ್ಯಾರ್ಥ ವಿಚಾರಕ್ಕಾಗಿ ಬರುತ್ತಿದ್ದರು ಅವರಲ್ಲಿ ಅದ್ವೈತ ಸಿದ್ಧಾಂತದ ಯಜ್ಞಮೂರ್ತಿ ಯೆಂಬ ಯತಿಯೇ ಮುಖ್ಯನು ಆತನು ಶ್ರೀರಂಗಕ್ಕೆ ಬಂದು ಶ್ರೀಯವರೊಂದಿಗೆ ವಾದಮಾಡಲು ಅಪೇಕ್ಷಿಸಿದನು ಇಬ್ಬರಿಗೂ ಅವರವರ ಪಂಥದ ಸಿದ್ಧಾಂತ ಸಮರ್ಥನೆಯ ವಿಷಯದಲ್ಲಿ ಹದಿನಾರು ದಿನಗಳವರೆಗೆ ವಾದ ನಡೆಯಿತು ಕೊನೆಗೆ ರಾಮಾನುಜರು ಆಳವಂದಾರ್‌ಯವರು ರಚಿಸಿದ್ದ 'ಮಾಯಾವಾದ ಖಂಡನ' ವೆಂಬ ಗ್ರಂಥವನ್ನು ಒಂದುಸಾರಿ ಅವಲೋಕಿಸಿ ಪ್ರತಿಪಕ್ಷದ ಯಜ್ಞಮೂರ್ತಿಯನ್ನು ಸಂಪೂರ್ಣವಾಗಿ ಪರಾಜಯಗೊಳಿಸಿದರು ಯಜ್ಞಮೂರ್ತಿಯು ವೈಷ್ಣವ ಧರ್ಮವನ್ನು ಅವಲಂಬಿಸಿ ದೇವರಾಜಮುನಿ (ಅರುಳಾಳಪ್ಪೆರುಮಾಳ್ ಎಂಬೆರುಮನಾರ್) ಎಂಬ ನಾಮವನ್ನು ವಹಿಸಿ ಅವರ ಶಿಷ್ಯವರ್ಗಕ್ಕೆ ಸೇರಿದನು.

ತರುವಾಯ ಶ್ರೀರಾಮಾನುಜರು, ವೈಷ್ಣವರಿಗೆ ಮೂರು ಮುಖ್ಯ ಯಾತ್ರಾಸ್ಥಳಗಳಲ್ಲೊಂದಾದ ತಿರುಪತಿಗೆ ಯಾತ್ರೆ ಹೊರಟರು ಅಲ್ಲಿ ಶ್ರೀವೆಂಕಟೇಶನನ್ನು ಪೂಜಿಸಿ ತಮ್ಮ ಸೋದರಮಾವಂದಿರಾದ ಶ್ರೀಶೈಲಪೂರ್ಣರ ಸಮಾಪದಲ್ಲಿ ಶ್ರೀರಾಮಾಯಣ ಮಹಾಕಾವ್ಯವನ್ನು ಒಂದು ವರ್ಷಕಾಲ ಪೂರ್ತಿಯಾಗಿ ಓದಿ ಮುಗಿಸಿದರು ಈಗ ಅವರ ಸಾಧಕ ಕಾಲವು ಒಂದು ಬಗೆಯಿಂದ ಸಂಪೂರ್ಣತೆಯನ್ನು ಹೊಂದಿರಲು, ಇನ್ನು ಆಳವಂದಾರ್ ಸ್ವಾಮಿಯವರಲ್ಲಿ ಮಾಡಿದ್ದ ಮೂರು ಪ್ರತಿಜ್ಞೆಗಳನ್ನು ಪೂರ್ತಿಗೊಳಿಸಲೆಳೆಸಿದರು ಅವುಗಳಲ್ಲಿ ವ್ಯಾಸರ ಬ್ರಹ್ಮಸೂತ್ರಗಳಿಗೆ ಭಾಷ್ಯ ಮಾಡತಕ್ಕುದೇ ಮೊದಲನೆಯದಾಗಿತ್ತು ಆದರೆ ಪ್ರಾರಂಭದಲ್ಲಿ ಶ್ರೀಯತಿರಾಜರು ಉಪನಿಷತ್ತುಗಳಿಗೆ ಅದ್ವೈತಾರ್ಥವು ಸಹಜವಾಗಿಲ್ಲವೆಂದು ತಮ್ಮ ಮತದಂತೆ ವ್ಯಾಖ್ಯಾನಮಾಡಿ ವೇದಾರ್ಥ ಸಂಗ್ರಹವೆಂಬ ಗ್ರಂಥವನ್ನು ಬರೆದರು ಅಲ್ಲದೆ, ವೇದಾಂತಸಾರ, ವೇದಾಂತ ದೀಪಗಳೆಂಬ ಗ್ರಂಥಗಳನ್ನೂ ರಚಿಸಿದರು ಪರಬ್ರಹ್ಮನಿಗೆ ಶಿವ ಶಬ್ದಕ್ಕಿಂತಲೂ ನಾರಾಯಣಶಬ್ದವೇ ಹೆಚ್ಚು ಶೋಭಿಸುವುದೆಂದು ಅದನ್ನೇ ನಿರ್ಣಯಮಾಡಿದರು. ವೇದಾಂತ ಸೂತ್ರಗಳಿಗೆ ಮಾಡುವ ಭಾಷ್ಯಕ್ಕೆ ಮೂಲಾಧಾರವಾದ ಬೋಧಾಯನವೃತ್ತಿಯಲ್ಲಿ ತಮಗೆ ಪ್ರವೇಶವು ಆವಶ್ಯಕವಾಗಿದ್ದಿತಾದುದರಿಂದ ಅದನ್ನು ಸಂಪಾದಿಸಲೋಸುಗ, ತಾವೂ ಕೂರನಾಥನೂ ಉತ್ತರದೇಶಕ್ಕೆ ಪ್ರಯಾಣಮಾಡಿದರು ಅಲ್ಲಿ ಆ ಮಹಾ ಗ್ರಂಥವನ್ನು ಕೇವಲ ಒಂದು ಸಾರಿ ಒದಲಿಕ್ಕೆ ಮಾತ್ರ ದೊರಿಕಸಿಕೊಳ್ಳುವುದೇ ಕಷ್ಟವಾಯಿತು. ಆದರೂ, ಅತಿಶಯ ಸೂಕ್ಷ್ಮಮತಿಯಾದ ಕೂರೇಶನು ರಾಮಾನುಜರ ಸಹಾಯಕ್ಕಿದ್ದು ಒಂದು ಸಾರಿ ಓದುವುದರಲ್ಲಿಯೇ ಅದರ ಗೂಢಾರ್ಥಗಳನ್ನೆಲ್ಲಾ ಗ್ರಹಿಸಿಬಿಟ್ಟನು ಅನಂತರ ರಾಮಾನುಜರು, ಭಾಷ್ಯವನ್ನು ಹೇಳಸಾಗಲು ಕೂರೇಶನು ಲಿಖಿಸತೊಡಗಿದನು. ಮಧ್ಯೆ ಎಲ್ಲಾದರೂ ರಾಮಾನುಜರ ವ್ಯಾಖ್ಯಾನವು ಬೋಧಾಯನ ವೃತ್ತಿಯ ಅರ್ಥಕ್ಕೆ ವ್ಯತ್ಯಸ್ತವಾಗಿದ್ದಂತೆ ತೋರಿದರೆ ಕೂರೇಶನು ಒಡನೆ ಲೇಖನಿಯನ್ನು ನಿಲ್ಲಿಸುತ್ತಿದ್ದನು ರಾಮಾನುಜರು ಆ ಸಂದರ್ಭದಲ್ಲಿ ಪುನಃ ಯೋಚನೆಮಾಡಿ, ಚರ್ಚಿಸಿ ತರುವಾಯ ನಿಶ್ಚಯಾರ್ಥವನ್ನು ಬರೆಯಿಸುತ್ತಿದ್ದರು ಹೀಗಾಗಿ ಬ್ರಹ್ಮಸೂತ್ರಭಾಷ್ಯವು ಮುಗಿಯಿತು ತರುವಾಯ ಶ್ರೀಯವರು ಶ್ರೀಭಗವದ್ಗೀತಾ ಭಾಷ್ಯವನ್ನೂ ರಚಿಸಿ ಜಗತ್ತಿಗೆ ಮಹೋಪಕಾರ ಮಾಡಿದರು.

ಆದರೆ ಗ್ರಂಥರಚನೆ ಮಾತ್ರವೇ ಅವರಿಗೆ ತೃಪ್ತಿಯನ್ನುಂಟುಮಾಡಲಿಲ್ಲ ಆದನ್ನು ಪ್ರಾಜ್ಞರಾದ ವಿದ್ವಾಂಸವರ್ಗವು ನೋಡಿ ವಿಮರ್ಶಿಸಿ ಒಪ್ಪಬೇಕೆಂಬುದೂ ಅವರ ಆಶಯವಾಗಿತ್ತು. ಆದುದರಿಂದ ಅದನ್ನು ಕಾಶ್ಮೀರದ ಸರಸ್ವತೀ ಪೀಠಕ್ಕೆ ಕೊಂಡೊಯ್ದು ಅಲ್ಲಿ ನೆರೆದ ವಿದ್ವಾಂಸ ವೃಂದದಲ್ಲಿ ಓದಿದರು. ಅಲ್ಲಿಯ ವಿದ್ವಾಂಸ ಮಂಡಲಿಯೂ, ತತ್ವಜ್ಞಸಮೂಹವೂ ಮಾತ್ರವಲ್ಲದೆ ಶ್ರೀಸರಸ್ವತಿಯೂ ಮೆಚ್ಚಿಕೊಂಡು ಅವರ ಆ ಭಾಷ್ಯವು ಶ್ರೀಭಾಷ್ಯವೆಂದು ಪ್ರಸಿದ್ಧವಾಗಲೆಂಬ ಪ್ರಸಕ್ತಿಯನ್ನು ಕೊಟ್ಟರು. ಅಲ್ಲದೆ, ಶ್ರೀರಾಮಾನುಜರ ವಿಷಯದಲ್ಲಿ ಅವ್ಯಾಜಪ್ರೇಮದಿಂದ ಶ್ರೀಹಯಗ್ರೀವಮೂರ್ತಿಯನ್ನೂ ದಾನಮಾಡಿದರು. ಮುಂದೆ ರಾಮಾನುಜರು ಭಾಷ್ಯಕಾರರೆಂಬ ಗೌರವ ನಾಮದಿಂದಲೇ ಸಂಭೋಧಿಸಲ್ಪಡುತ್ತಿದ್ದರು. ಆಚಾರ್ಯರು ಮೇಲ್ಕಂಡ ಭಾಷ್ಯಾದಿ ಗ್ರಂಥರತ್ನಗಳನ್ನೇ ಅಲ್ಲದೆ, ಅನೇಕ ಸ್ತೋತ್ರಗಳನ್ನೂ ಗದ್ಯಗಳನ್ನೂ ರಚಿಸಿದರು. ಅವುಗಳಲ್ಲೆಲ್ಲಾ ಶರಣಾಗತಿಗದ್ಯವೆಂಬುದೇ ಮಹತ್ವಪೂರ್ಣವಾದುದು. ಮತ್ತು ಅತ್ಯಂತ ಪ್ರಸಿದ್ಧವಾದುದು.



## ಅಧ್ಯಾಯ ೭ "ಮತಪ್ರಚಾರಕಾರ್ಯ"

ಕಾಶ್ಮೀರದಲ್ಲಿ ಪಂಡಿತವರ್ಗದಿಂದ ಬಹುಮಾನಿತರಾಗಿ ಕಳುಹಿಸಲ್ಪಟ್ಟ ಶ್ರೀರಾಮಾನುಜಾಚಾರ್ಯರು ಬದರಿಕಾಶ್ರಮ ಹರಿದ್ವಾರಾದಿ ಸುಪ್ರಸಿದ್ಧ ಯಾತ್ರಾಸ್ಥಳಗಳನ್ನು ಸಂದರ್ಶಿಸಿ, ಹಿಂದಿರುಗಿ ಜಗನ್ನಾಥ ಕ್ಷೇತ್ರದಲ್ಲೂ ಸ್ವಾಮಿಯನ್ನು ಆರಾಧಿಸಿ ಪುನಃ ತಿರುಪತಿಗೆ ಬಂದರು. ಅಲ್ಲಿ ಆ ವೇಳೆಗೆ ಶೈವರಿಗೂ ವೈಷ್ಣವರಿಗೂ ತಿರುಪತಿ ಕ್ಷೇತ್ರವಾಸಿ ವಿಗ್ರಹದ ವಿಷಯದಲ್ಲಿ ದೊಡ್ಡ ವಿವಾದವುಂಟಾಗಿತ್ತು. ಶೈವರು ಅದನ್ನು ಸುಬ್ರಹ್ಮಣ್ಯ ಸ್ವಾಮಿಯದೆಂದೂ ವೈಷ್ಣವರು ವಿಷ್ಣುವಿನದೆಂದೂ ವಾದಿಸುತ್ತಿದ್ದರು. ಆ ವೇಳೆಗೆ ಅಲ್ಲಿಗೆ ಬಂದ ಶ್ರೀಯವರು ಆ ವಿವಾದವನ್ನು ಒಂದು ರೀತಿಯಲ್ಲಿ ತೀರಿಸಬಹುದೆಂದು ಸೂಚಿಸಿದರು. ಅವರ ಸೂಚನೆಯನ್ನು ಇಬ್ಬರೂ ಒಪ್ಪಿದರು. ತರುವಾಯ ಒಂದು ದಿನ ಸಾಯಂಕಾಲ ವಿಷ್ಣುಮೂರ್ತಿ-ಶಂಕರಮೂರ್ತಿಯರಿಗೆ ಸಹಜವಾದ ಶಂಖ ಚಕ್ರ-ತ್ರಿಶೂಲ ಡಮರುಗಗಳನ್ನು ದೇವಸ್ಥಾನದ ಮುಂದೆ

ಇಟ್ಟು, ಮಾರನೆಯ ಪ್ರಾತಃಕಾಲ ಭಗವಾನನು ಯಾವ ಆಯುಧಗಳಿಂದ ಅಲಂಕೃತನಾಗಿರುವನೋ ಆ ಮೂರ್ತಿಯೆಂದು ವೈಷ್ಣವರಾಗಲಿ-ಶೈವರಾಗಲಿ ಪೂಜಿಸಬಹುದೆಂದು ಅದರ ಇತ್ಯರ್ಥವನ್ನು ದೇವರಿಗೇ ಒಪ್ಪಿಸಿಬಿಟ್ಟರು ಮಾರನೆಯ ಪ್ರಾತಃಕಾಲ ಹೋಗಿ ನೋಡುವಲ್ಲಿ ಸ್ವಾಮಿಯು ಶಂಖಚಕ್ರಾದಿಗಳಿಂದ ಅಲಂಕೃತನಾಗಿದ್ದುದು ಎಲ್ಲರಿಗೂ ಪರಮಾಶ್ಚರ್ಯವನ್ನುಂಟುಮಾಡಿತು ಅಂದಿನಿಂದ ಮುಂದೆ ಸ್ವಾಮಿಯು ವೈಕುಂಠಾಧಿಪತಿಯ ಪ್ರತಿರೂಪವೇ ಎಂದು ಪೂಜಿಸಲ್ಪಡುತ್ತಿರುವನೆಂದು ಹೇಳಬೇಕಾದುದೇನು? ತಿರುಪತಿಕ್ಷೇತ್ರವೇ ಅಂದಿನಿಂದ ಭೂವೈಕುಂಠವೆಂದು ಪ್ರಸಿದ್ಧವಾಯಿತು.

ತಮ್ಮ ಗುರುಗಳಾದ ಆಳವಂದಾರ್ ಸ್ವಾಮಿಯವರಿಗೆ ಕೊಟ್ಟಿದ್ದ ಮೂರು ಪ್ರತಿಜ್ಞೆಗಳಲ್ಲಿ ಹೆಚ್ಚು ಕಡಮೆ ಎರಡು ಸಾರ್ಥಕವಾದಂತಾದುವು! ಮೂರನೆಯದಕ್ಕೆ ಯೋಗ್ಯಪಾತ್ರರಾರೆಂಬ ವಿಷಯದಲ್ಲಿ ಶ್ರೀಯವರು ಯೋಚನೆಗೆ ವಶರಾದರು ಹೀಗಿರುವಲ್ಲಿ ಶ್ರೀಆಚಾರ್ಯರ ಮುಖ್ಯ ಶಿಷ್ಯರಾದ ಕೂರತ್ತಾಳ್ವಾರ್ (ಕೂರನಾಥ) ರವರಿಗೆ ಬಹು ದಿನಗಳವರೆಗೆ ಮಕ್ಕಳೇ ಇಲ್ಲದೆ ಕೊನೆಗೆ ಶ್ರೀರಂಗನಾಥಸ್ವಾಮಿಯ ಪ್ರಸಾದಗ್ರಹಣದಿಂದ ಇಬ್ಬರು ಗಂಡುಮಕ್ಕಳು ಉದಯಿಸಿದರು. ಅವರಲ್ಲೊಬ್ಬನು ಮಹಾಪಂಡಿತನಾಗಲು ಶ್ರೀರಾಮಾನುಜರು, ಆತನಿಗೆ ಪರಾಶರನೆಂದು ನಾಮಕರಣಮಾಡಿದರು. ಆತನು ಆಚಾರ್ಯರ ಆಜ್ಞಾನುಸಾರ ಶ್ರೀವಿಷ್ಣುಸಹಸ್ರನಾಮದ ಭಾಷ್ಯವನ್ನು ಬರೆದನು ಪರಾಶರನಾಮವು ಈ ರೀತಿ ಸಾರ್ಥಕವಾಗಿ ರಾಮಾನುಜರ ಹೃದಯಕ್ಕೆ ಪರಮಸಂತೋಷವನ್ನುಂಟುಮಾಡಿತು. ಮುಂದೆ ತಿರುವಾಯ್ ಮೊಳಿ ಎಂಬ ಗ್ರಂಥಕ್ಕೆ ಕರ್ತೃಗಳಾದ ಶಠಗೋಪರ(ನಮ್ಮಾಳ್ವಾರ್) ಪವಿತ್ರನಾಮದ ಜೀರ್ಣೋದ್ಧಾರವು ಅವರ ಮನಸ್ಸನ್ನಾಕರ್ಷಿಸಿತು. ಹೀಗಿರುವಲ್ಲಿ ಒಂದು ಸಂದರ್ಭದಲ್ಲಿ ಶ್ರೀಯವರ ಸೋದರಿಯ ಮಗನಾದ ದಾಶರಥಿಯು ಅದ್ಭುತ ಪ್ರಜ್ಞೆಯನ್ನು ತೋರ್ಪಡಿಸಲು ಅವರು ಆತನಿಗೆ ತಿರುವಾಯ್ ಮೊಳಿಯ ೪೦೦೦ ಶ್ಲೋಕಗಳಿಗೂ ವ್ಯಾಖ್ಯಾನವನ್ನು ಬರೆಯೆಂದು ಆಜ್ಞಾಪಿಸಿ ಆತನನ್ನು ಶಠಗೋಪನೆಂಬ ನಾಮಧೇಯದಿಂದ ಕರೆದರು ಹೀಗೆ ಸಿದ್ಧಸಂಕಲ್ಪರಾದ ಶ್ರೀಆಚಾರ್ಯರ ಪ್ರತಿಜ್ಞೆಯು ಸಫಲವಾಗಲು ಅವರು ಅತ್ಯಂತ ಸಮಾಧಾನಪಟ್ಟುಕೊಂಡು ಕೆಲಕಾಲ ಬೋಧನಾದಿ ಕಾರ್ಯಗಳಲ್ಲಿ ಮಗ್ನರಾಗಿದ್ದರು

ಆ ವೇಳೆಗೆ ಆ ಪ್ರಾಂತವನ್ನು ಕುಲೋತ್ತುಂಗ ಚೋಳನೆಂಬ ರಾಜನು ಆಕ್ರಮಿಸಿದ್ದನು. ಅವನು ಶೈವಮತ ಪಕ್ಷಪಾತಿಯಾಗಿ 'ಶಿವಾತ್ ಪರತರಂ ನಾಸ್ತಿ' ಎಂಬ ಸಿದ್ಧಾಂತದ ಸಾರ್ಥಕ್ಯವನ್ನುಂಟುಮಾಡಬೇಕೆಂದು ಬದ್ಧಕಂಕಣನಾಗಿದ್ದನು. ಹೀಗೆ ರಾಜನೇ ಧರ್ಮಧ್ವಜವನ್ನು ಹಿಡಿದೆತ್ತಿ ನಿಂತಮೇಲೆ ಮುಂದೆ ಕೇಳುವುದೇನು? ವೈಷ್ಣವರಿಗಾಗಲೀ ಮತಾಂತರಿಗಾಗಲೀ ಉಳಿಗಾಲವಿಲ್ಲದಂತಾಯಿತು. ರಾಮಾನುಜ ಮತವು ಇನ್ನೂ ಕೇವಲ ಬಾಲ್ಯಾವಸ್ಥೆಯಲ್ಲಿದ್ದು ಅದಕ್ಕೆಲ್ಲಿ ಬಾಲಗ್ರಹದೋಷ ಬಂದೊದಗುವದೋ ಎಂದು ಎಲ್ಲರೂ ಬೆದರಿದ್ದರು. ಈವರೆಗೆ ಶೈವಪಂಥದ ಯಜ್ಞಮೂರ್ತಿ, ಯಾದವಪ್ರಕಾಶರು ರಾಮಾನುಜರಿಂದ ಪರಾಜಿತರಾಗಿ ವೈಷ್ಣವಪಂಥದ ಪ್ರತಿಭೆಯು ದಿನದಿನಕ್ಕೆ ಹೆಚ್ಚುತ್ತಿದ್ದದನ್ನು ಕಂಡು, ಕುಲೋತ್ತುಂಗನು ರಾಮಾನುಜರು ತನ್ನೆದುರಿಗೆ ಬರಬೇಕೆಂದು ಆಜ್ಞೆಮಾಡಿದನು. ಆಚಾರ್ಯರು ಪ್ರತಿಮಾತನಾಡದೆ ಆ ಕಾರ್ಯ ಮಾಡಲು ಸಿದ್ಧರಾದರು. ಆದರೆ, ಅವರ ಶಿಷ್ಯರು ಧರ್ಮಾಂಧನಾದ ಆ ರಾಜನು ಆಚಾರ್ಯರ ಪ್ರಾಣಕ್ಕೆ ಮುನಿಯದಿರನೆಂದು ಶಂಕಿಸಿ, ಕೂರನಾಥನು ಅವರ ಕಾಷಾಯ ವಸ್ತ್ರಾದಿಗಳನ್ನು ಧರಿಸಿ, ಮಹಾಪೂರ್ಣರು ಶಿಷ್ಯನಂತೆ ಬರಲು ಕುಲೋತ್ತುಂಗನ ಆಸ್ಥಾನಕ್ಕೆ ನಡೆದರು. ಇತ್ತ ರಾಮಾನುಜರೂ ಯುಕ್ತಪರಿವಾರದೊಂದಿಗೆ ಅಲ್ಲಿಂದ ಹೊರಟು ಕಾವೇರೀ ತೀರದಲ್ಲೇ ನಡೆದು ನೀಲಗಿರಿಯ ಮಾರ್ಗವಾಗಿ ಪ್ರಯಾಣಮಾಡಿ ನಮ್ಮ ಮೈಸೂರು ದೇಶದ ಸಾಲಿಗ್ರಾಮವೆಂಬ ಸ್ಥಳದಲ್ಲಿ ಹನ್ನೆರಡು ವರ್ಷಕಾಲ ವಾಸಿಸಿದ್ದರು. ಅತ್ತ ಕುಲೋತ್ತುಂಗನು ತನ್ನೆದುರಿಗೆ ಸಿದ್ಧನಾದ ಕೂರನಾಥನನ್ನೇ ರಾಮಾನುಜರೆಂದು ಭಾವಿಸಿ, "ನೀವು 'ಶಿವಾತ್ಪರತರಂನಾಸ್ತಿ' ಎಂಬ ಸಿದ್ಧಾಂತವನ್ನು ಒಪ್ಪುತ್ತೀರಾ!" ಎಂದು ಪ್ರಶ್ನಿಸಿದನು. ಅದಕ್ಕವರು, "ದ್ರೋಣಮಸ್ತಿ ತತಃಪರಂ" ಎಂದರೆ, 'ಶಿವ' ಎಂಬುದ (ಅಳತೆಯ ಸಾಧನ)ಕ್ಕೆ ದೊಡ್ಡದಾದ 'ದ್ರೋಣ' ಎಂಬುದೂ ಒಂದುಂಟು ಎಂದರು. ಈ ಪ್ರತ್ಯುತ್ತರಕ್ಕಾಗಿ ಕುಪಿತನಾದ ರಾಜನು ಅವರ ಕಣ್ಣನ್ನು ಕೀಳಿಸಿ, ಪೆರಿಯನಂಬಿಯವರನ್ನು ಕೊಲ್ಲಿಸಿದನು. ಕುಲೋತ್ತುಂಗನ ಜೀವಿತ ಕಾಲದಲ್ಲಿ ಆ ಪ್ರಾಂತದಲ್ಲಿ ವೈಷ್ಣವಮತವು ತಲೆಎತ್ತಲಿಲ್ಲ —

ಅತ್ತ ಶ್ರೀರಾಮಾನುಜರು ತಮ್ಮ ಬೋಧನೆ ಭಕ್ತಿ ಸಾಧು ಜೀವನಗಳಿಂದ ದಿನದಿನಕ್ಕೆ ಹೆಚ್ಚು ಹೆಚ್ಚು ಮಂದಿಯನ್ನು ಆಕರ್ಷಿಸುತ್ತಿದ್ದರು

ಹೀಗಿರುವಲ್ಲಿ ಆ ಪ್ರಾಂತವನ್ನು ಜಯಿಸಿ ಆಳಲಾರಂಭಿಸಿದ್ದ ಬಿಟ್ಟಿದೇವನೆಂಬ ಪ್ರಭುವಿನ ಮಗಳಿಗೆ ಒಂದು ದೆವ್ವ ಹಿಡಿದು ರಾಜನು ಸಾಧ್ಯವಿದ್ದ ಪ್ರಯತ್ನ ಗಳನ್ನೆಲ್ಲಾ ಮಾಡಿ ಪ್ರಯೋಜನವಿಲ್ಲದೆ ಅತಿಶಯ ಚಿಂತಾಕ್ರಾಂತನಾಗಿದ್ದನು. ಅಷ್ಟರಲ್ಲಿ ಆತನಿಗೆ ಶ್ರೀಯುವರ ಪ್ರತಿಭೆಯು ಶೃತವಾಗಲು, ಒಡನೆ ಬಂದು ಆಶ್ರಯಿಸಿದನು. ರಾಮಾನುಜರೂ ಆತನೊಂದಿಗೆ ಅರಮನೆಗೆ ನಡೆದು, ಆ ಭೂತವನ್ನು ಓಡಿಸಿ ರಾಜಪುತ್ರಿಯನ್ನು ಸ್ವಸ್ಥಗೊಳಿಸಿದರು. ರಾಜನಿಗೆ ಪ ರಮಾನಂದವಾಯಿತೆಂದು ಹೇಳಬೇಕೇನು? ಅವರನ್ನು ವಿಶೇಷವಾಗಿ ಪೂಜಿಸಿ, ತಾನಿದ್ದ ಜೈನಮತವನ್ನು ತ್ಯಜಿಸಿ, ಆಚಾರ್ಯರಿಂದ ಪ್ರತಿಪಾಗಿತವಾದ ವೈ ಷ್ಣವ ಮತವನ್ನು ಅವಲಂಬಿಸಿದನು. ಆದರೆ ಆವರೆಗೆ ರಾಜಾಶ್ರಯದಲ್ಲಿದ್ದ ಜೈನಪಂಡಿತರು ಆಚಾರ್ಯರನ್ನು ಸಿದ್ಧಾಂತ ಚರ್ಚೆಗಾಗಿ ಪ್ರತಿಭಟಿಸಲು ಸಿ ದ್ಧರಾದರು ಮಹಾ ಮೇಧಾವಿಗಳಾದ ಆಚಾರ್ಯರೂ ಅವರಷ್ಟು ಮಂದಿ ಯನ್ನೂ ಏಕಾಂಗಿಗಳಾಗಿ ಎದುರಿಸಬೇಕಾದಾಗಲೂ ಹಿಂದೆಗೆಯಲಿಲ್ಲ ಜೈ ನಪಂಡಿತರು, ಆಚಾರ್ಯರಮೇಲೆ ಪೂರ್ವಪಕ್ಷಮಾಡಿ ಪ್ರಶ್ನೆಗಳ ಮಳೆಯ ನ್ನೇ ಸುರಿಸಿಬಿಟ್ಟರು. ಆಗ ಶ್ರೀಮದಾಚಾರ್ಯರು, ಅವರಿಗೆ ಅದೃಶ್ಯರಾಗಿ ಪರದೆಯ ಹಿಂದೆ ಕುಳಿತು ತಾವು ಶೇಷಾಂಶ ಸಂಭೂತರಾದ್ದರಿಂದ ಸಹಸ್ರ ಮುಖಗಳಿಂದಲೂ ಅವರ ಬಾಯಿ ಮುಚ್ಚಿಸಿ, ಅವರ ಮೇಲೆ ಸಿದ್ಧಾಂತದ ಕೋ ಠಿಗಳನ್ನು ಹೊರಿಸಿದರು ಇದನ್ನು ಕಂಡು ರಾಜನು ಕುಪಿತನಾಗಿ ಅವರನ್ನೆ ಲ್ಲಾ ಕಲ್ಲುಗಾಣಗಳಿಗೆ ಹಾಕಿಸಿ ಅರೆಯಿಸಬೇಕೆಂದಿದ್ದ ತನ್ನ ಪ್ರತಿಜ್ಞೆಯನ್ನು ತಿಳಿಸಲು ದಯಾಘನರಾದ ಶ್ರೀಯುವರು ಅಂತಹ ದಾರುಣಕಾರ್ಯ ಮಾಡ ದಂತೆ ಆತನನ್ನು ನಿವಾರಿಸಿದರು ತರುವಾಯ ಜೈನರಲ್ಲನೇಕರು ರಾಜನನ್ನು ಅನುವರ್ತಿಸಿ ವೈಷ್ಣವರಾದರು ಮತ್ತೆ ಕೆಲವರು ದೇಶಭ್ರಷ್ಟರಾಗಿ ಓಡಿ ಹೋದರು ಅವರ ದೇವಾಲಯಗಳೆಲ್ಲವೂ ನೆಲಸಮವಾದುವು ರಾಜನು ಆ ದೇವಸ್ಥಾನಗಳಿಂದ ಕಿತ್ತಿದ ಕಲ್ಲುಗಳಿಂದಲೇ ಒಂದು ಕೆರೆಯನ್ನು ಕಟ್ಟಿಸಿ ಅದನ್ನು ಮೋತೀತವಾಲ್ ಎಂದು ಕರೆದನು. ಅದೇ ವಿಷ್ಣುಸಮುದ್ರವೆಂದು ಬೇಲೂರಿನಲ್ಲಿ ಈಗಲೂ ಸುಪ್ರಸಿದ್ಧವಾಗಿದೆ. ಆಚಾರ್ಯರೂ ಆತನ ವಿಷ್ಣು ಭಕ್ತಿ ತತ್ಪರತೆಯನ್ನು ಕಂಡು ಸುಪ್ರೀತರಾಗಿ ಆತನನ್ನು ವಿಷ್ಣುವರ್ಧನನೆಂ ದು ಅನ್ವರ್ಥನಾಮವನ್ನಿಟ್ಟು ಕರೆದನು. ಆತನ ಕಾಲದಲ್ಲೇ ಬೇಲೂರಿನಲ್ಲಿ

ಶ್ರೀಕೇಶವಸ್ವಾಮಿಯ ದೇವಾಲಯವೂ ಕಟ್ಟಲ್ಪಟ್ಟು ಆಚಾರ್ಯರಿಂದಲೇ ಪ್ರತಿಷ್ಠಾಕಾರ್ಯವೂ ನೆರವೇರಿತು —

ತರುವಾಯ ಶ್ರೀಯವರು ಶಿಷ್ಯಾನುಗ್ರಹಾರ್ಥವಾಗಿ ಅಲ್ಲಲ್ಲಿ ಸಂಚರಿಸುತ್ತಾ ಯಾದವಾದ್ರಿ (ಮೇಲುಕೋಟೆ)ಯನ್ನು ಸೇರಿದರು ಆ ವೇಳೆಗೆ ಅವರ ತಿರುಮಣಿಪೆಟ್ಟಿಗೆಯಲ್ಲಿದ್ದ ಶ್ವೇತಮೃತ್ತಿಕೆಯು ಕ್ರಮವಾಗಿ ತಗ್ಗಸಾಗಿತು. ಊರ್ಧ್ವಪುಂಡ್ರಧಾರಣೆಗೆ ವಿಘ್ನವುಂಟಾದುದಲ್ಲಾ ಏನು ಮಾಡಬೇಕೆಂದು ಆಚಾರ್ಯರು ಚಿಂತಾಕ್ರಾಂತರಾಗಿರಲು ಒಂದಾನೊಂದು ರಾತ್ರಿ ಶ್ರೀವರನು ಅವರ ಕನಸ್ಸಿನಲ್ಲಿ ಬಂದು, "ಯತಿವರನೇ ಈ ಸ್ಥಳಕ್ಕೆ ಸಮೀಪದಲ್ಲಿರುವ ಚಂಪಕವನದಲ್ಲಿ ತುಲಸೀಗಿಡದ ಕೆಳಗೆ ಹುತ್ತದಲ್ಲಿ ಒಂದು ವಿಗ್ರಹವಿದೆ ಅದರ ಸಮೀಪದಲ್ಲೇ ಅಪಾರವಾದ ಶ್ವೇತಮೃತ್ತಿಕಾರಾಸಿಯೂ ಇದೆ ಆ ವಿಗ್ರಹವನ್ನು ಅಲ್ಲಿಂದ ತೆಗೆದು ಒಂದು ಆಲಯವನ್ನು ಕಟ್ಟಿಸಿ ಅಲ್ಲಿ ಪ್ರತಿಷ್ಠಿಸು" ಎಂದು ಆಜ್ಞಾಪಿಸಿದನು ಆಚಾರ್ಯರು ಒಡನೆ ಎಚ್ಚತ್ತು ಆ ವಿಷಯವನ್ನು ತಮ್ಮ ಶಿಷ್ಯರಲ್ಲಿ ತಿಳಿಸಿ ಚಂಪಕವನಕ್ಕೆ ನಡೆದು ಆ ಸ್ಥಳವನ್ನು ಹುಡುಕಿ ಅಲ್ಲಿದ್ದ ಹುತ್ತವನ್ನು ಪಂಚಾಮೃತದಿಂದ ಅಭಿಷೇಕಿಸಿ, ಮೆಲ್ಲನೆ ಅಗೆಯಿಸಿ ಸ್ವಾಮಿಮೂರ್ತಿಯನ್ನು ಹೊರಕ್ಕೆ ತೆಗೆಯಿಸಿದರು. ವಿಷ್ಣುವರ್ಧನ ರಾಜನು ಆಚಾರ್ಯರ ಪ್ರತಿಭೆಗೆ ಪರಮಾಶ್ಚರ್ಯಪಟ್ಟು, ಗೋಪುರ ತೋರಣ ಪತಾಕೆಗಳಿಂದ ಮನೋಹರವಾದ ಒಂದು ದೇವಾಲಯವನ್ನು ಕಟ್ಟಿಸಿ ಆಚಾರ್ಯರಿಗೆ ಒಪ್ಪಿಸಿದನು. ಆದರಲ್ಲಿ ಸ್ವಾಮಿಯ ಪ್ರತಿಷ್ಠಾಕಾರ್ಯವನ್ನು ನೆರವೇರಿಸಿ ಆಚಾರ್ಯರು ಭಕ್ತರನ್ನು ಅನುಗ್ರಹಿಸಿದರು.

ತಿರುನಾರಾಯಣಪುರ (ಮೇಲುಕೋಟೆ)ದ ದೇವಾಲಯದಲ್ಲಿ ಮೂಲವಿಗ್ರಹದ ಪ್ರತಿಷ್ಠಾಪನಾಕಾರ್ಯವು ಮೇಲೆ ಹೇಳಿದಂತೆ ನೆರವೇರಿತಲ್ಲವೆ! ಆದರೆ ನಿತ್ಯೋತ್ಸವ ಮಾಸೋತ್ಸವ ಸಂವತ್ಸರೋತ್ಸವಾದಿಗಳಿಗೆ ಉತ್ಸಹ ವಿಗ್ರಹವಿಲ್ಲದೆ ತೊಂದರೆಯಾಗಿದ್ದುದು ಆಚಾರ್ಯರಿಗೆ ಚಿಂತಾವಿಷಯವಾಯಿತು. ಆ ಸಂದರ್ಭದಲ್ಲೇ ಅವರಿಗೆ ಒಂದು ರಾತ್ರಿ ಶ್ರೀವರನು ಕನಸಿನಲ್ಲಿ ಬಂದು "ಯತಿಶೇಖರಾ, ಇಲ್ಲಿಯ ಉತ್ಸವ ವಿಗ್ರಹವಾದ ರಾಮಪ್ರಿಯಮೂರ್ತಿಯು ಡಿಲ್ಲೀಶ್ವರನ ಮನೆಯಲ್ಲಿದೆ ಅದನ್ನು ಅಲ್ಲಿಂದ ತಂದು ಪ್ರತಿಷ್ಠಿಸು. ನಿನಗೆ ಶುಭವಾಗಲಿ" ಎಂದು ಹೇಳಿದಂತೆ ಆಯಿತು. ಆಚಾರ್ಯರು ಒಡನೆ ಸಾವಕಾಶಮಾಡದೆ ಪರಿವಾರದೊಡನೆ ಡಿಲ್ಲಿಗೆ ಪ್ರಯಾಣಸನ್ನದ್ಧರಾಗಿ ಆ ಸ್ಥಳ

ವನ್ನು ಸೇರಿದರು. ಆಗ ಅಲ್ಲಿ ರಾಜನಾಗಿದ್ದ ತುರುಷ್ಕಪ್ರಭುವು ಅವರ ಆಗಮನವನ್ನು ತಿಳಿದು, ಬೇಕಾದ ಅನುಕೂಲತೆಗಳನ್ನು ಒದಗಿಸಿಕೊಟ್ಟು ಉಪಚರಿಸಿದನು ಅಲ್ಲದೆ ಅವರ ಬರುವಿಕೆಯ ಕಾರಣವನ್ನು ತಿಳಿದು, ದೇಶದೇಶಗಳಿಂದ ತಂದಿದ್ದ ಅಸಂಖ್ಯವಿಗ್ರಹಗಳನ್ನು ಶೇಖರಿಸಿಟ್ಟಿದ್ದ ಸ್ಥಳದಲ್ಲಿ ಅವರಿಗೆ ಬೇಕಾಗಿದ್ದ ವಿಗ್ರಹವು ಇದ್ದರೆ ಹುಡುಕಿ ತೆಗೆದುಕೊಳ್ಳಬಹುದೆಂದೂ ಅನುಮತಿಸಿದನು ಆಚಾರ್ಯರೂ ಹೋಗಿ ಎಲ್ಲಾ ಕಡೆಯಲ್ಲೂ ಹುಡುಕಿ ನೋಡಿದರೂ ಆ ಮೂರ್ತಿಯು ದರ್ಶನವಾಗಲಿಲ್ಲ. ಆಚಾರ್ಯರ ಚಿಂತೆಗೆ ಅಂತ್ಯವಿಲ್ಲವಾಯಿತು. ಆ ರಾತ್ರೆ ಸ್ವಾಮಿಯು "ಎಲೈ ಭಕ್ತವರನೆ ಏಕೆ ಚಿಂತೆಗೊಳ್ಳುವೆ, ರಾಮಪ್ರಿಯ ವಿಗ್ರಹವು ಆ ತುರುಷ್ಕಪ್ರಭು ಪುತ್ರಿಯ ಅಂತಃಪುರದಲ್ಲಿದೆ ನಾಳೆ ನೀನು ಪ್ರಾರ್ಥಿಸಿದರೆ ಒಡನೆ ನಿನಗೆ ವಶವಾಗುವುದು" ಎಂದು ಸ್ವಪ್ನದಲ್ಲಿ ಅನುಗ್ರಹಿಸಿದನು ಮಾರನೆಯ ದಿನ ಆ ವಿಷಯವೂ ರಾಜನಿಗೆ ತಿಳಿಸಲ್ಪಟ್ಟಿತು. "ನೀವು ಕರೆದರೆ ಆ ವಿಗ್ರಹವು ನಿಮ್ಮಲ್ಲಿಗೆ ಬರುವುದಾದರೆ ಅದನ್ನು ತೆಗೆದುಕೊಂಡು ಹೋಗಲು ನನ್ನ ಅಭ್ಯಂತರವಿಲ್ಲ" ವೆಂದು ರಾಜನು ನುಡಿದನು ಎಲ್ಲರೂ ರಾಜಾಂತಃಪುರಕ್ಕೆ ನಡೆದರು ಶ್ರೀಯವರು ಧರೆಯಮೇಲೆ ಸಾಷ್ಟಾಂಗದಂಡವತ್ಪ್ರಣಾಮಮಾಡಿ, ಭಗವಾನನನ್ನು ಬಗೆಬಗೆಯಿಂದ ಸ್ತುತಿಸಿ, ದರ್ಶನವಿತ್ತು ಕಾಪಾಡಬೇಕೆಂದು ಪ್ರಾರ್ಥಿಸಿದರು ಒಡನೆ ಬಂಗಾರದ ಗೆಜ್ಜೆಗಳ ಝಣಝಣ ಶಬ್ದವು ಎಲ್ಲರಿಗೂ ಕೇಳಿಸಿತು ಆ ಶಬ್ದವು ಎಲ್ಲಿಂದ ಬಂದಿತೆಂದು ಎಲ್ಲರೂ ಆಶ್ಚರ್ಯಯುಕ್ತರಾಗಿ ನೋಡುತ್ತಿರುವಲ್ಲಿ ಶ್ರೀರಾಮಪ್ರಿಯಮೂರ್ತಿಯು ಮನೋಹರ ವಿಗ್ರಹವು ಪುಟಪುಟ್ಟ ಹೆಜ್ಜೆಗಳಿಂದ, ಆಚಾರ್ಯರ ಭಕ್ತಿಭರಕ್ಕೆ ವಶವಾಗಿ ನರ್ತನ ಮಾಡಿಕೊಳ್ಳುತ್ತಾ ಬಂದು, ಅವರ ತೊಡೆಯಮೇಲೆ ಕುಳಿತುಕೊಂಡಿತು ಶ್ರೀಯವರು "ಸಂಪತ್ಕುಮಾರನೇ, ನನ್ನ ಭಾಗ್ಯದದೈವವೇ" ಎಂದು ಆ ಮೂರ್ತಿಯನ್ನು ಎರಡು ತೋಳುಗಳಿಂದಲೂ ಬಾಚಿತಬ್ಬಿಕೊಂಡರು. ದಿಲ್ಲೀಶ್ವರನು, ಎಂದೂ ಕಂಡು ಕೇಳಿ ಅರಿಯದ ಈ ಅದ್ಭುತವನ್ನು ಕಂಡು, ಆಶ್ಚರ್ಯಚಕಿತನಾಗಿ, ಆಚಾರ್ಯರು, ಆ ವಿಗ್ರಹವನ್ನು ತಮ್ಮೊಂದಿಗೆ ತೆಗೆದುಕೊಂಡು ಹೋಗಬಹುದೆಂದು ಅನುಮತಿಸಿದನು. ಅಷ್ಟರಲ್ಲಿ ಆ ಸಂಗತಿಯನ್ನು ಕೇಳಿದ ರಾಜಪುತ್ರಿಯು ತನ್ನಾ ಮುದ್ದುಮೋಹನ ಮೂರ್ತಿಯ ಅಗಲಿಕೆಯನ್ನು ಸಹಿಸಲಾರದೆ

ತಾನೂ ಶಿಬಿಕಾರೋಹಿಯಾಗಿ ಹೊರಟಳಂತೆ. ಮತ್ತು ಭಕ್ತ್ಯಾಧಿಕ್ಯದಿಂದ ಯಾದವಾದ್ರಿಗೆ ಬರುವ ವೇಳೆಗೆ ಆ ಮೂರ್ತಿಯೊಂದಿಗೇ ಐಕ್ಯಹೊಂದಿದಳಂತೆ! ಮಾರ್ಗದಲ್ಲಿ ರಾಮಾನುಜರಿಗೆ ಚೋರಬಾಧೆಯು ಸಂಭವಿಸಿತು ಆಗ ಸಮೀಪದಲ್ಲೇ ವಾಸವಾಗಿದ್ದ ಅಂತ್ಯಜ ಕುಲಸ್ಥರು ಅವರ ಪರಿವಾರಕ್ಕೆ ಅಪಾಯವಾಗದಂತೆ ಆ ಚೋರರನ್ನು ಹೊಡೆದಟ್ಟಿ ಸುರಕ್ಷಿತವಾಗಿ ಯಾದವಾದ್ರಿಗೆ ತಲುಪಿಸಿದರು ಆಚಾರ್ಯರೂ ಮೇಲುಕೋಟೆಯಲ್ಲಿ ಸ್ವಾಮಿಯನ್ನು ಬಗೆಬಗೆಯ ಉತ್ಸವಗಳಿಂದ ಆರಾಧಿಸಿ ತಮಗೆ ಆಪತ್ಕಾಲದಲ್ಲಿ ಸಹಾಯಕರಾದ ಅಂತ್ಯಜರ ವಿಷಯದಲ್ಲಿ ಕೃತಜ್ಞರಾಗಿ ಬ್ರಹ್ಮೋತ್ಸವದಲ್ಲಿ ಅವರು ಪ್ರಾಕಾರದಲ್ಲಿನ ಬಲಿಪೀಠದವರೆಗೂ ಬಂದು, ದರ್ಶನಮಾಡಿ ಫಲಾದಿಗಳನ್ನೊಪ್ಪಿಸಿ ಸ್ವಾಮಿಸೇವೆ ಮಾಡಲು ಸ್ವಾತಂತ್ರ್ಯವನ್ನು ದಯೆಪಾಲಿಸಿದರು. ಈ ಪದ್ಧತಿಯು ಈಗಲೂ ಅನುಸರಿಸಲ್ಪಡುತ್ತಿದೆ

ತರುವಾಯ ಶ್ರೀಯತಿರಾಜರು ಪುನಃ ತಿರುಪತಿಯನ್ನು ಸಂದರ್ಶಿಸಿ, ವ್ಯತದ್ವೇಷದಿಂದ ಸಮುದ್ರದಲ್ಲಿ ಎಸೆಯಲ್ಪಟ್ಟಿದ್ದ ಗೋವಿಂದರಾಜರ ಮೂರ್ತಿಯನ್ನು ತರಿಸಿ, ತಿರುಪತಿಬೆಟ್ಟದ ಕೆಳಭಾಗದಲ್ಲಿ ಪ್ರತಿಷ್ಠಿಸಿದರು ಹೀಗೆ ವಿಶಿಷ್ಟಾದ್ವೈತಮತವನ್ನು ಪ್ರಚುರಗೊಳಿಸಿದ್ದಲ್ಲದೆ, ತಮ್ಮ ಮತತತ್ವಗಳ ಅನುಸರಣೆಗೆ ಆಧಾರಸ್ತಂಭಗಳಾಗಿರುವಂತೆ ಅನೇಕ ಸ್ಥಳಗಳಲ್ಲಿ ಶ್ರೀವಿಷ್ಣು ಸ್ವಾಮಿಯ ಅರ್ಚಾಮೂರ್ತಿಗಳನ್ನೂ ಸ್ಥಾಪಿಸಿರಲು ಆಚಾರ್ಯರ ಪೂಜ್ಯಪ್ರಭಾವದಿಂದಲೂ, ಶಿಷ್ಯರ ಅವಿಶ್ರಾಂತ ಪರಿಶ್ರಮದಿಂದಲೂ ವಿಶಿಷ್ಟಾದ್ವೈತಮತಪ್ರಚಾರಕಾರ್ಯವು ನಿರ್ವಿಘ್ನವಾಗಿ ಸಾಗುತ್ತಿತ್ತು.—



## ಉ ಪ ಸ ಂ ಹಾ ರ



ಶ್ರೀರಾಮಾನುಜ ಯತಿವರ್ಯರು ತಮಗೆ ಆಯುಃಪರಿಮಿತಿಯು ಮುಗಿಯುತ್ತಾ ಬಂದುದನ್ನು ತಿಳಿದು, ತಮ್ಮ ತರುವಾಯ ಪೀಠಕ್ಕೆ, ಶಿಷ್ಯರಲ್ಲಿ ಮುಖ್ಯನೂ ಪೂರ್ವಾಶ್ರಮದಲ್ಲಿ ಸೋದರಳಿಯನೂ ಆದ ಪಿಳ್ಳಾನ್ (ದಾಶರಥಿ) ಎಂಬಾತನನ್ನೇ ನಿಯಮಿಸಿದರು. ಮತ್ತು, ಸಿದ್ಧಾಂತಸಾರಭೂತವಾದ

ಎಪ್ಪತ್ತೆರಡು ಮಹಾವಾಕ್ಯಗಳನ್ನು ನುಡಿದು ಅಜ್ಞಶಿಷ್ಯಕೋಟಿಗೆ ಮಹೋಪಕಾರ ಮಾಡಿದರು. ಹೀಗೆ ಶ್ರೀಯವರು ತಮ್ಮ ನೂರಿಪ್ಪತ್ತು ವರ್ಷದ ದೀರ್ಘಾಯುಃಕಾಲವನ್ನೂ ತಮ್ಮ ದೇಶದ ಮತ್ತು ಸ್ವಜನಾಂಗದ ಧಾರ್ಮಿಕೋದ್ಧಾರ ಕಾರ್ಯಕ್ಕೆ ವಿನಿಯೋಗಿಸಿ ಪರಮಧನ್ಯತೆಯನ್ನು ಹೊಂದಿದರು. ಮನುಷ್ಯ ಜೀವಿತದ ಪರಿಮಿತಿಯು ನೂರು ವರ್ಷಗಳು ಮಾತ್ರವೇ ಇರಲು, ಆಚಾರ್ಯರು ತಮ್ಮ ಪರಮೋತ್ಕೃಷ್ಟ ಜೀವಿತವನ್ನು ನೂರಿಪ್ಪತ್ತು ವರ್ಷಕಾಲ ನಡೆಯಿಸಿ ಹರಿಭಕ್ತಿ ಎಂಬ ಸಸಿಯನ್ನು ಸಜ್ಜನ ಹೃದಯದಲ್ಲಿ ನಟ್ಟು, ನೀರು ಗೊಬ್ಬರಗಳನ್ನು ಹಾಕಿ ಚೆನ್ನಾಗಿ ವೃದ್ಧಿಯಾಗುವಂತೆ ಬೆಳೆಸಿದರು ಶ್ರೀಯವರ ವೃದ್ಧವೇಷವು ಬಹುಮಟ್ಟಿಗೆ ಜೀರ್ಣವಾಗಿದ್ದಿತು ಹೀಗಿರಲು ಮಾಘ ಶುದ್ಧ ನವಮೀ ಶನಿವಾರದ ದಿನವೇ ತಮ್ಮ ಪರಂಧಾಮದ ದಿನವೆಂದು ತಿಳಿದವರಾಗಿ, ಆ ದಿನವೂ ಎಂದಿನಂತೆ ಸ್ನಾನಾದಿಗಳಿಂದ ಶುಚಿಭೂತರಾಗಿ ಆಪ್ತ ಶಿಷ್ಯರಿಗೆ ಹೇಳಬೇಕಾದ ಯೋಗ್ಯ ಬುದ್ಧಿವಾದಗಳನ್ನು ಹೇಳಿ, ಮಧ್ಯಾಹ್ನಕಾಲವು ಸಮೀಪಿಸುತ್ತಿರಲು, ಆಚಾರ್ಯರು ತಮ್ಮ ಗುರುವರ್ಯರ ಪಾದುಕೆಗಳನ್ನು ಶಿರಸ್ಸಿನಲ್ಲಿಟ್ಟುಕೊಂಡು ಶ್ರೀಮನ್ನಾರಾಯಣನ ಪಾದಕಮಲಗಳನ್ನು ಮನಸ್ಸಿನಲ್ಲಿ ಸ್ಥಿರಗೊಳಿಸಿ ಕುಳ್ಳಿರಲು, ಆ ಪೂಜ್ಯಯತಿವರ್ಯರ ಪವಿತ್ರಾತ್ಮವು ಬ್ರಹ್ಮರಂಧ್ರವನ್ನು ಭೇದಿಸಿಕೊಂಡು ಒಡನೆ ವೈಕುಂಠಲೋಕವನ್ನು ಕುರಿತು ಪ್ರಯಾಣಮಾಡಿತು.

ಯಾವ ಮಹಾಮಹಿಮರಾದ ಶ್ರೀರಾಮಾನುಜರು, ಅಹಂಕಾರ ವರ್ಜಿತರಾಗಿ, ವಿನೀತರಾಗಿ, ದಯಾಭರಿತರಾಗಿ, ನಿಷ್ಪಕ್ಷಪಾತಿಗಳಾಗಿ, ನವವಿಧ ಭಕ್ತಿಭಾವನೆಗಳಿಂದ ಪರಮಪುರುಷನ ಪಾದಾರವಿಂದಗಳನ್ನು ಧ್ಯಾನಿಸುತ್ತಾ, ಭಕ್ತಿಪ್ರಪತ್ತಿಗಳಿಂದಲೂ, ತಮ್ಮ ನಡೆನುಡಿಗಳಿಂದಲೂ ಸಾಧನೆ ಆರಾಧನೆ ಬೋಧನೆಗಳಿಂದಲೂ, ಜನಾಂಗಕ್ಕೆ ಮುಕ್ತಿರಾಜ್ಯದ ಸುಪಥವನ್ನು ತೋರಿದರೋ ಆ ಶ್ರೀಮದಾಚಾರ್ಯರ ಅನುಪಮ ಸದಾಚರಣೆಗಳೂ ದಿವ್ಯಬೋಧನೆಗಳೂ ಮಾರ್ಗದರ್ಶಕಗಳಾಗಿರಲು, ನಮ್ಮವರು ನಾಸ್ತಿಕತೆ ಮುಂತಾದ ಹೇಯಭಾವಗಳನ್ನು ನೀಗಿ ಜನ್ಮಸಾರ್ಥಕತೆಗಾಗಿ ಜೀವಾವಧಿ ಶ್ರಮಿಸುವಂತಹ ಸಾಮರ್ಥ್ಯ ಮನೋದಾರ್ಢ್ಯಗಳನ್ನು-ಶ್ರೀಯತಿರಾಜರೂ-ಸರ್ವೇಶ್ವರನೂ ದಯೆಪಾಲಿಸಲಿ.

ತಥಾಸ್ತು.